ಸುದರ್ಶನ ಪ್ರಕಟನೆ ಇಪ್ಪತ್ತೆಂಟು
ಕಾದಂಬರಿ ಇಪ್ಪತ್ತನಾಲ್ಕು

ಮೊದಲನೆಯ ಮುದ್ರಣ ೧೯೫೪
ಸುದರ್ಶನ ಪ್ರಥಮ ಮುದ್ರಣ ೧೯೫೭



**ಬೆಲೆ : ಒಂದೂಮುಕ್ಕಾಲು ರೂಪಾಯಿ**

ಮುದ್ರಣ :
ಇಂಡಿಯಾ ಪ್ರೆಸ್, ಮೈಸೂರು

ಕಣ್ಣು ಮರೆಯಾದ

ಹಿರಿಯ ಜೀವಿ

ವೈದ್ಯಗುರು **ವ ಕೃ ಭಾರದ್ವಾಜರ**

ಪವಿತ್ರ ನೆನಪಿಗೆ

ಕಿರಿ ಕಾಣಿಕೆ

# ಎರಡು ಮಾತು

'**ಕೇದಿಗೆ ವನ**' – ಇಂದಿನ ಸಮಾಜದ ವಿಚಿತ್ರ ಸುಳಿಗೆ ಸಿಕ್ಕಿದ ಯುವಕನೊಬ್ಬನ ಜೀವನದ ಚಿತ್ರ. ಬಹು ಜನಕ್ಕೆ ಹುಟ್ಟುವಾಗಲೇ ತಮ್ಮ ಬಾಳಿನ ದಾರಿಯನ್ನು ಕಂಡುಕೊಂಡು, ಯಾರ ಆಲಂಬನವಿಲ್ಲದೆಯೇ ನಡೆದು, ತಮ್ಮ ಬಾಳಗುರಿಯನ್ನು ಮುಟ್ಟುವ ಶಕ್ತಿ ಇರುವುದಿಲ್ಲ ಅಂಥವರು ಯಾರದೋ ಆದರ್ಶ, ಯಾರದೋ ಪ್ರೀತಿ, ಯಾರದೋ ಬಾಳಿನ ಜಾಡಿನಲ್ಲಿ ನಡೆದು ಒಂದು ಗುರಿ ತಲಪುತ್ತಾರೆ ಈ ಕಾದಂಬರಿಯ ನಾಯಕ ರಾಜಶೇಖರ – ಆ ಜಾತಿಗೆ ಸೇರಿದವನು

ಆದರೆ ಹಲವಾರು ಬಗೆಯ ಹೊಸ ಭಾವನೆಯ ಸುಳಿಗಳು ಸುತ್ತುತ್ತಿರುವ ಇಂದಿನ ಪರಿಸ್ಥಿತಿಯಲ್ಲಿ ಅಂಥ ಜಾಡಿನ ನಡೆಯೂ ಸುಲಭ ಪ್ರಯಾಣವಾಗುವುದಿಲ್ಲ. ಹಿಡಿದ ದಾರಿಯನ್ನು ಬದಲಿಸಿ ಹೊಯ್ದಾಡುವಂತೆ ಮಾಡುವ ಹತ್ತಾರು ಶಕ್ತಿಗಳು ಜೀವನದಮೇಲೆ ಪರಿಣಾಮಮಾಡುತ್ತವೆ. ಜೀವನ ಏರಿಳಿವು, ಮಾರ್ಗಾಪಾಯವಿಲ್ಲದ ಸುಲಭ ಯಾತ್ರೆ ಎಂದುಕೊಂಡು ಹೊರಟವನು, ಕಂಬನಿಯ ಬೆಲೆಗೊಟ್ಟು, ಬಾಳು ಛಲದಿಂದ ಸಾಧಿಸಬೇಕಾದ ಸಾಹಸ ಎಂದು ಮನವರಿಕೆ ಮಾಡಿಕೊಳ್ಳುತ್ತಾನೆ ಈ ಅರಿವು ಮೂಡಿದಾಗ ಸುತ್ತಲ ಪರಿಚಯದ ವಸ್ತುಗಳಿಗೆ ವ್ಯಕ್ತಿ ನೀಡುತ್ತಿದ್ದ ಹಳೆಯ ಬೆಲೆ ದೂರವಾಗಿ, ಅದಕ್ಕೆ ಹೊಸ ಮೌಲ್ಯ ಬರುತ್ತದೆ.

ಆ ಹೊಸ ಬೆಳಕಿನ ದಾರಿಯಲ್ಲಿ ಬಾಳನ್ನು ರೂಪಿಸಿಕೊಂಡು, ಆಘಾತ ಪರಂಪರೆಯಲ್ಲಿ ಬಾಳ ಆದರ್ಶವನ್ನು ಉಳಿಸಿಕೊಂಡವನ ಬಾಳು ಸಫಲವಾಗುತ್ತದೆ

ಇದು ಇಂದಿನ ಆಧುನಿಕ ಜೀವನದ ಎರಡು ಘಟ್ಟ.

'**ಕೇದಿಗೆ ವನ**' ದಲ್ಲಿ ಚಿತ್ರಿತವಾಗಿರುವುದು ಮೊದಲ ಘಟ್ಟ ಮಾತ್ರ. ಎರಡನೆಯ ಘಟ್ಟವನ್ನು '**ಕಣ್ಣು ತೆರೆಯಿತು**' ಎಂಬ ಮುಂದಿನ ಭಾಗದಲ್ಲಿ ಚಿತ್ರಿಸುತ್ತೇನೆ.

ನನಗೆ ಏನೂ ಪರಿಚಯವಿಲ್ಲದ ವೈದ್ಯ ವಿದ್ಯಾರ್ಥಿ ಜೀವನವನ್ನು ಚಿತ್ರಿಸಲು ಬೇಕಾದ ವಿಷಯಗಳನ್ನು ಒದಗಿಸಿ, ಸಲಹೆ ಇತ್ತ ಇಬ್ಬರು ಮೈಸೂರು ಮೆಡಿಕಲ್ ಕಾಲೇಜಿನ ವಿದ್ಯಾರ್ಥಿ-ವಿದ್ಯಾರ್ಥಿನಿ ಮಿತ್ರರಿಗೆ ನಾನು ತುಂಬಾ ಋಣಿ. ಹಾಗೂ ಆ ಚಿತ್ರಣದಲ್ಲಿ ದೋಷವೇನಾದರೂ ಉಳಿದಿದ್ದರೆ, ಅದರ ಹೊಣೆಗಾರಿಕೆ ಪೂರಾ ನನ್ನದೆ. ವಾಚಕರು ಅಲ್ಲಿ ಕಾಣಬಹುದಾದ ತಪ್ಪನ್ನು ತೋರಿಸಿಕೊಟ್ಟಲ್ಲಿ, ಅಂಥ ಸಲಹೆಯನ್ನು ಕೃತಜ್ಞತಾಪೂರ್ವಕವಾಗಿ ಸ್ವೀಕರಿಸಿ ಮುಂದಿನ ಮುದ್ರಣದಲ್ಲಿ ನರಿಪಡಿಸುತ್ತೇನೆ.

ತ. ರಾ. ಸು.

# ಶ್ರೀಧರ

## ೧

ಕೋಣೆಯಲ್ಲಿ ತುಂಬಿದ ಸಿಗರೇಟಿನ ಹೊಗೆಯಂತೆಯೇ ರಾಜಶೇಖರನ ಮೆದುಳಿನಲ್ಲಿ ಅನಿಶ್ಚಯತೆಯ ಮೋಡ ಕವಿದಿತ್ತು. ಒಂದು ಗಳಿಗೆ ಹಾಗೇ ಸರಿ, ಎನಿಸಿ, ಮರುಗಳಿಗೆಯೇ ಅವನ ಅನಿಶ್ಚಯತೆಯ ಉರಿಸೋಕಿ, ಕುಡಿಸುಟ್ಟು ಉರುಳಿದ ಹಲವು ಭಾವನೆಗಳಂತೆ ಕೋಣೆಯ ನೆಲದಮೇಲೆಲ್ಲಾ ಅರೆಸುಟ್ಟು ತುಳಿಯಲ್ಪಟ್ಟ ಸಿಗರೇಟಿನ ತುಂಡುಗಳು ಹರಡಿದ್ದವು ಅರೆಪೆಟ್ಟು ತಿಂದ ಸರ್ಪ ದಂತೆ ಅವನ ಮನಸ್ಸು, ಅನಿಶ್ಚಯತೆಯ ಆಘಾತದಿಂದ ನೊಂದು ಅತ್ತಿತ್ತ ಹೆಡೆಯಪ್ಪಳಿಸುತ್ತಿತ್ತು. ಗಡಿಯಾರದ "ಟಿಕ್ ಟಿಕ್" ಸದ್ದು ಹೊತ್ತು ಸರಿಯು ತ್ತಿರುವುದನ್ನು ಎಚ್ಚರಿಸುತ್ತಿದ್ದರೂ, ಅರೆತೆರದ ಕಿಟಕಿಯಿಂದ ನುಸುಳಿದ ಇರುಳ ತಂಗಾಳಿ, ನಲ್ಲೆಯಂತೆ ಮೈದಡವಿ 'ಇದು ನಿದ್ರೆಯ ಹೊತ್ತು' ಎಂದು ಪಿಸುದನಿಯಲ್ಲಿ ನುಡಿಯುತ್ತಿದ್ದರೂ, 'ನಿದ್ರೆ ಬೇಡವಾದರೆ ಹೋಗಲಿ, ನನ್ನನ್ನು ಮರೆತುಬಿಡಬೇಡ' ಎಂದು ಮೇಜಿನಮೇಲೆ ಅರೆತೆರೆದು ಬೋರಲು ಹಾಕಿದ 'ಅನಾಟಮಿ'ಯ ಹೊತ್ತಿಗೆ ನೆನಪಿಸುತ್ತಿದ್ದರೂ, ಅದಾವುದರ ಪರಿವೆಯೂ ಇಲ್ಲದೆ ರಾಜಶೇಖರ ಸಿಗರೇಟಿನ ಮೇಲೆ ಸಿಗರೇಟು ಹೊತ್ತಿಸಿ ಹೊಗೆಯುಗುಳುತ್ತಾ, ಬೇಡವೆನಿಸಿದಾಗ ಅದು ಪೂರಾ ಮುಗಿಯದಿದ್ದರೂ ನೆಲಕ್ಕೆ ಹಾಕಿ ಹೊಸಗಿ, ಮರುಗಳಿಗೆಯೇ ಮತ್ತೊಂದನ್ನು ಹೊತ್ತಿಸುತ್ತಾ 'ಈಸಿಛೇರಿ'ನಮೇಲೆ ಮೈ ಒರಗಿಸಿದ್ದ. ಹಗಲಿನಲ್ಲಿ ಕಣ್ಣು ಕಾಣದೆ ಅತ್ತಿಂದಿತ್ತ ಹಾರಾಡುತ್ತಾ, ಎದುರಿಗೆ ಸಿಕ್ಕಿದುದಕ್ಕೆ ಢಿಕ್ಕಿ ಹೊಡೆವ ಕಣ್ಣು ಕಪಟದಂತೆ 'ಏನು ಮಾಡಲಿ, ಯಾವ ದಾರಿ ಸರಿ?' ಎಂಬ ಸಮಸ್ಯೆ ಅವನ ಮೆದಳಿನ ಕಗ್ಗವಿಯಲ್ಲಿ ಹಾರಾಡುತಿತ್ತು. ಅನುಭವವಿಲ್ಲದ ಈ ಮೆದುಳಿನ ಹೋರಾಟದಲ್ಲಿ ಅವನ ಮೈ ಬಳಲಿ 'ಥೂ, ಹಾಳಾಗಲಿ ಬಿಡು, ಎಲ್ಲಿಯಚಿಂತೆ? ಹೇಗಾದರೆ ಹಾಗಾಗಲಿ' ಎಂದು ನುಡಿದರೆ, ಮರುಗಳಿಗೆಯೇ ಮನಸ್ಸು ಕೆರಳಿ 'ಹಾಗೆಂದರುಂಟೇ, ಇದು ನಿನ್ನ ಭವಿಷ್ಯದ ಪಶ್ನೆ. ಇದರೊಂದಿಗೆ ಅನಿಶ್ಚಯತೆಯ ಜೂಜಾಡುವುದು ಸಲ್ಲದು' ಎಂದು ಗದರಿಸುತ್ತಿತ್ತು. ಅವೆರಡರ ನಡುವೆ ಸಿಕ್ಕ ಅವನ ಹೃದಯ, ಟಗರುಗಳೆರಡರ ಕಾಳಗದ ನಡುವೆ ಸಿಕ್ಕ ಗಿಡದಂತೆ ಹೆರಣವಾಗಿ 'ನನಗೇಕೆ ಈ ಕುತ್ತ ಒದಗಿತು' ಎಂದು ಕೊರಗುತ್ತಿತ್ತು.

ನಿಜ – ರಾಜಶೇಖರನ ಅದುವರೆಗಿನ ಬಾಳಿನಲ್ಲಿ ಎಂದೂ ಈ ಬಗೆಯ ಸಮಸ್ಯೆ ಕಾಡಿರಲಿಲ್ಲ, ಯಾವ ಸಮಸ್ಯೆಯೂ ಅವನಿಂದಲೇ ನಿರ್ಧಾರವನ್ನು ಬಯಸಿರಲಿಲ್ಲ, ಎಂದೂ ಅವನು ಕಗ್ಗವಿಯ ಎದುರಿನ ಕವಲು ದಾರಿಯಲ್ಲಿ ನಿಂತು, ತನ್ನ ದಾರಿಯನ್ನು ತಾನೇ ಕಂಡುಕೊಂಡಿರಲಿಲ್ಲ. ಅವನ ಜೀವನ ಒಮ್ಮೊಮ್ಮೆ ಕವಲು ದಾರಿಯ ಬಳಿ ಬಂದಾಗಲೂ, ಯಾರೋ ಅವನನ್ನು ಕೈಹಿಡಿದು ನಡೆಸಿದ್ದರು, ಅವರು ನಡೆಸಿದತ್ತ ಅವನು ನಡೆದಿದ್ದ – ಹೊಳೆಗೆ ಸಿಕ್ಕ ಹುಲ್ಲು ಕಡ್ಡಿಯ ಹಾಗೆ. ಹಾಗೇ ಹರಿದು ಜೀವನದ ಇಪ್ಪತ್ತೆರಡು ವರ್ಷಗಳನ್ನು ದಾಟಿ, ಮೆಡಿಕಲ್ ಕಾಲೇಜನ್ನು ಸೇರಿದ್ದ.

ಮೆಡಿಕಲ್ ಕಾಲೇಜನ್ನು ಸೇರಿದ್ದ—ನಿಜ—ಆದರೆ ಅದರಲ್ಲಿ ಅವನ ಅಪೇಕ್ಷೆಯದೇನೂ ಪಾತ್ರವಿರಲಿಲ್ಲ, ಯಾರದೋ ಕನಸು, ಯಾರದೋ ಚಪಲ, ಮತ್ತಾರದೋ ಹೆಬ್ಬಯಕೆ ಅವನನ್ನು ಅಲ್ಲಿಗೆ ತಂದು ನಿಲ್ಲಿಸಿತ್ತು. ಬಾಳದಾರಿಯಲ್ಲಿ ಅಲ್ಲಿಯವರೆಗೆ ನಡೆದು ಬಂದ ಅವನಿಗೆ ಗೊತ್ತಿದ್ದುದಿಷ್ಟೆ: ತೋರಿದ ದಾರಿಯಲ್ಲಿ ನಡೆಯುವುದು, ಆದಷ್ಟು ಎಚ್ಚರವಾಗಿ, ದಾರಿ ತೋರಿದವರ ಬಯಕೆ ಏನಿತ್ತೋ ಅದು ಸಾರ್ಥಕವಾಗುವಂತೆ ನಡೆಯುವುದು. ಅಷ್ಟಕ್ಕಿಂತ ಹೆಚ್ಚಾಗಿ ಅವನು ಎಂದೂ, ಯಾವುದರ ಬಗ್ಗೆಯೂ ಚಿಂತಿಸಿರಲಿಲ್ಲ. ನಡೆಸಿದತ್ತ ನಡೆನಡೆದು ಅವನ ಮನಸ್ಸಿಗೆ ತಾನೇ ಚಿಂತಿಸಿ, ಬಳಿಕ ಹೆಜ್ಜೆ ಹಾಕುವ ಅಭ್ಯಾಸವೇ ತಪ್ಪಿಹೋಗಿತ್ತು. ಒಮ್ಮೆ, ಒಂದೇ ಒಂದು ಬಾರಿಯಾದರೂ, ಯಾವ ಸಮಸ್ಯೆಯೂ, ಅವನಿಗೇ ಜೋತುಬಿದ್ದು 'ಅವರಿವರ ಮಾತಿರಲಿ, ನೀನು, ನೀನೇ ಉತ್ತರ ಹೇಳು' ಎಂದು ಕಾಡಿರಲಿಲ್ಲ. ಹಾಗೇ ಒರಗಿ ಯೋಚಿಸಿದ— ಒಂದು ಬಾರಿಯಾದರೂ ಅಂಥ ಸಂದರ್ಭ ಅವನ ಬಾಳಿನಲ್ಲಿ ಬಂದಿತ್ತೆ? ಊಹೂ – ಇಲ್ಲ. ಒಂದೊಂದು ಬಾರಿಯೂ ಯಾರದೋ ಕೈಯ ಚದುರಂಗದ ಕಾಯಾಗಿ ನಡೆದಿದ್ದ. ನಿಜ. ಹಾಗೆ ಆಗಿತ್ತು ಅವನ ಬಾಳು. ಚಿಕ್ಕಂದಿನಿಂದ ಅಂದಿನವರೆಗಿನ ತನ್ನ ಬಾಳನ್ನು ತಾನೇ ಮೆಲುಕು ಹಾಕಿ ನೋಡಿದ ಅವನ ಬಾಳಿನಲ್ಲಿ ಒದಗಿದ ಒಂದೊಂದು ಕವಲು ದಾರಿಯ ಘಟ್ಟವನ್ನು ನೆನಪಿಗೆ ತಂದುಕೊಂಡು ನೋಡಿದ. ತನ್ನ ಗತಜೀವನದ ಕಗ್ಗವಿಯಲ್ಲಿ ಇಣುಕಿಹಾಕಿ ನೋಡಿದ—

## ೨

ರಾಜಶೇಖರ ಚಿಂತಾಮಣಿಯ ಹೈಸ್ಕೂಲಿನಲ್ಲಿ ಎಸ್. ಎಸ್. ಎಲ್. ಸಿ ಪಾಸುಮಾಡಿದಾಗ, ಅವನು ಮುಂದೇನು ಮಾಡಬೇಕೆಂಬ ಚಿಂತೆ ಅವನಿಗಿಂತಲೂ ಹೆಚ್ಚಾಗಿ, ಅವನ ತಂದೆ ಚಿನ್ನಸ್ವಾಮಿಶೆಟ್ಟರನ್ನು ಬಾಧಿಸಿತ್ತು. ತಮ್ಮ

ಕಿರಾಣಿ ಅಂಗಡಿಯಲ್ಲಿ ದಿನದಿನವೂ ಅಳೆದು ಸುರಿದು ಅಭ್ಯಾಸವಾದ ಆತನ ಮನಸ್ಸು ಮಗನ ಭವಿಷ್ಯದ ವಿಷಯದಲ್ಲೂ ಕೂಡಲೇ ಯಾವ ಒಂದು ನಿರ್ಧಾರಕ್ಕೂ ಬರದೆ, ಅಲ್ಲೂ ಮೂರು ದಿನಗಳ ಕಾಲ ಅಳೆದು ಸುರಿದು, ಅಲ್ಲಿಗೂ, ಒಂದು ನಿಲುವಿಗೆ ಬರದೆ, ಹೆಂಡತಿಯ ಸಲಹೆ ಬೇಡಿತು. ಅದೂ ಅವನ ಹೆಂಡತಿ ವೆಂಕಟಲಕ್ಷಮ್ಮ ಗಂಡ ಏನೋ ಚಿಂತೆಯೊತ್ತು ಬಳಲುತ್ತಿದ್ದುದನ್ನು ನೋಡಿ ಸಹಿಸಲಾಗದೆ ಒಂದು ದಿನ ರಾತ್ರಿ ತಾನಾಗಿಯೇ ಮಾತು ಬೆಳಸಿಕೊಂಡು-

" ಇದೇನು ಇಷ್ಟು ಯೋಚನೆ ಮಾಡ್ತಾ ಇದೀರಾ ? "

—ಎಂದು ಕೇಳಿದಾಗ.

" ನನಗಿನ್ನೇನು ಯೋಚನೆ ? ಇರೋದೆಲ್ಲಾ ರಾಜಶೇಖರನದೊಂದೇ ? "

" ಹ್ಞ ? ರಾಜನದೇ ? ಏನು ಮಾಡಿದ ? "

—ಇದ್ದೊಬ್ಬಮಗ ಗಂಡನಿಗೆ ಏನೋ ಯೋಚನೆಗೆ ಕಾರಣನಾದನೆಂಬುದನ್ನರಿತು, ಹೆದರಿ ಕೇಳಿದಳು ಆಕೆ.

" ಏನೂ ಮಾಡಲಿಲ್ಲ, ಅವನ ವಿಷಯ ಮುಂದೇನು ಮಾಡಬೇಕು ಅನ್ನೋದೇ ನನಗೆ ಬಗೆಹರಿಯದಾಗಿದೆ."

" ಏಕೆ ? "

" ಅವನದು ಈ ಊರಿನ ಓದು ಮುಗೀತು. ಮುಂದೇನು ಮಾಡಲಿ ಅಂತ."

" ಅಷ್ಟೇನೇ ! ನಾನೇನು ಲೋಕಾನೇ ಮುಳುಗೋ ಕೆಲಸ ಮಾಡಿದನೋಂತ ಗಾಬರಿಯಾಗಿದ್ದೆ, ಅದಕ್ಕೆ ನೀವ್ಯಾಕಿಷ್ಟು ಯೋಚನೆ ಮಾಡ್ತೀರಾ ? "

" ನಾನು ಮಾಡದೆ-ತಿರುಪತಿ ತಿಮ್ಮಪ್ಪ ಮಾಡ್ತಾನೆಯೇ ? "

" ತಿರುಪತಿ ತಿಮ್ಮಪ್ಪ ಮಾಡದೇ ಇರೋ ಯೋಚನೆ ನಾವು, ನೀವು ಮಾಡಿ ಏನಾಗುತ್ತೆ ಹೇಳಿ. ನಾವೆಷ್ಟು ಯೋಚನೆ ಮಾಡಿದರೂ ಕಡೆಗೆ ನಡೆಯೋದು ಅವನ ಯೋಚನೇನೇ."

" ಅದೇನೋ ಸರಿ ಅನ್ನು. ಆದ್ರೂ ಈ ವಿಷಯ ತಿರುಪತಿ ತಿಮ್ಮಪ್ಪನಿಗೇ ಬಿಟ್ಟರೆ ಏನೂ ಆಗೊಲ್ಲ. ನಮ್ಮ ಯೋಚನೆ ನಾವು ಮಾಡಲೇ ಬೇಕಲ್ಲ."

" ಈಗೇನು ಅಂಥ ಯೋಚನೆ ? "

" ಯೋಚನೆ ಇಷ್ಟೆ-ಅವನು ಮುಂದಕ್ಕೆ ಓದಬೇಕೇ, ಅಥವಾ ಕಲಿತದ್ದು ಇಲ್ಲಿಗೇ ಸಾಕು ಅಂತ, ನನ್ನ ಜೊತೆಗೆ ತಕಡಿ ತೂಕದಬಟ್ಟು ಹಿಡಿಯಲಿಕ್ಕೆ ಬರಬೇಕೇ ಅಂತ."

" ಇಲ್ಲಿನ ಓದು ಮುಗೀತು ಅಂದ್ರಲ್ಲಾ ..."

" ಹೌದು."

" ಸರಿ ಹಾಗಾದರೆ. ಅಷ್ಟು ಓದು ಸಾಲದೇ ? "

" ಸಾಕೇ ? "

" ಸಾಲದೆ ಏನು ? ನೀವು ಇನ್ನೆಷ್ಟು ಓದಿದ್ದಿರಿ ? ಐದು ರೂಪಾಯಿ ಪರೀಕ್ಷೇನೂ ಕಟ್ಟಲಿಲ್ಲ. ಹಾಗೇ ಹತ್ತುಜನಕ್ಕಾಗೋ ಅಷ್ಟು ದುಡೀಲಿಲ್ಲವೇ ? ಹಾಗಿರೋವಾಗ ಇವನು, ಇನ್ನೂ ಹೆಚ್ಚು ಓದಲಿಕ್ಕೇಂತ ಅಲ್ಲಿ ಇಲ್ಲಿ ಹೋಗೋ ದ್ಯಾಕೆ ? ಇರೋನೊಬ್ಬನು ಕಣ್ಣಮುಂದೆ ಇದ್ದರೆ ನಮ್ಮ ಮನಸ್ಸಿಗೆ ನೆಮ್ಮದಿ "

" ಹ್ಞ ! ಹೆಂಗಸರ ಬುದ್ಧಿ ಲೊಡ್ಡು ಅಂತ ಅದಕ್ಕೇ ಹೇಳೋದು. ನಿನಗಷ್ಟೇ ತಿಳಿಯೋದು."

" ಅಷ್ಟಲ್ಲದೆ ಇನ್ನೇನು ? "

" ಹಾಗಲ್ಲಾ ಕಣೆ. ಈ ಕಾಲದ ಪ್ರಪಂಚ ನೀನು ಕಾಣೆ."

" ಏನು ಅಂಥ ಕಾಣದೇ ಇರೋದು."

" ನೋಡು-ಈ ಕಸಬು, ಇದರ ಕಥೆ ಎಲ್ಲಾ ನಮ್ಮ ಕಾಲಕ್ಕೇ ಮುಗಿದು ಹೋಯಿತು. ಈ ಕಾಲದಲ್ಲಿ ನಮ್ಮನ್ನು ಯಾರು ಕೇಳ್ತಾರೆ ? ಇಲ್ಲೇನು ಒಂದು ಮಾನಾನೇ, ಮರ್ಯಾದೇನೇ ? "

" ಸ್ಸರಿ ಸ್ಸರಿ. ರಾಜ ನಿಮ್ಮಷ್ಟು ಮರ್ಯಾದೆಯಾಗಿ ಬಾಳಿದರೆ ಸಾಲದೇ ? ಹತ್ತು ಜನಕ್ಕೆ ಆಶ್ರಯವಾಗಿ, ತನ್ನ ಮನೆಬಾಗಿಲಲ್ಲಿ ಹಾಯಾಗಿ ಬಾಳೋದಕ್ಕಿಂತ ಇನ್ನೇನು ಮರ್ಯಾದೆ ಬೇಕು ? "

" ಅದೇ ನಿನಗೆ ತಿಳಿಯದು ಅಂತ ಹೇಳಿದ್ದು, ಕಾಲ ಬಹಳ ಬದಲಾಯಿಸಿ ಹೋಗಿದೆ ಈಗ ನಮ್ಮದೇನೂ ಉಳಿದಿಲ್ಲ. ಆಳಿಗೆ ಆಕಾರ ಬಾಳಿಗೆ ಬಡುಕೋ ಬೇಕು."

" ಏಕೆ ? "

" ಈ ವೃತ್ತೀಲಿ ಏನು ಮರ್ಯಾದೆ ಇದೆ ಅಂತ ತಿಳುಕೊಂಡಿದೀಯ ? ನಮ್ಮ ಹತ್ತಿರ ಹಣ ಇರಬಹುದು. ಆದರೆ ಗೌರವ ಇದೆಯೆ ? "

" ಇಲ್ಲವೇ ? "

" ಇಲ್ಲ ಹತ್ತುರೂಪಾಯಿನ ಸರಕಾರೀ ನೌಕರನಾದರೂ, ಅವನು ನಮಗಿಂತ ಮೇಲು. ತಾಲ್ಲೂಕ್ ಕಛೇರಿ ಗುಮಾಸ್ತನ್ನ ಆಶ್ರಯಿಸೋ ಅಷ್ಟು ಜನಾನು ನಮ್ಮನ್ನು ಆಶ್ರಯಿಸೊಲ್ಲ. ಅಂಗಡಿ ಬಾಗಲಿಗೆ ಬಂದೋರಿಗೆ 'ಮಹಾ ಸ್ವಾಮಿ, ನೀನೇ ನನ್ನ ಪಾಲಿನ ಭಗವಂತ' ಅಂತ ಅಡ್ಡಬಿದ್ದು ಪುಸಲಾಯಿಸಿ, ಮೂರು ಕಾಸಿನ ಸಾಮಾನು ಆರುಕಾಸಿನ ಲಾಭಕ್ಕೆ ಸಾಲಕೊಟ್ಟು, ಆಮೇಲೆ

ಆರಾರು ತಿಂಗಳು ಮನೆಬಾಗಿಲು ಅಲೆಯೋ ಮರ್ಯಾದೆ ಇದೆಯಲ್ಲಾ– ಅದು ಈ ಜನ್ಮಕ್ಕೆ ಸಾಕು. ನಾನು ನೋಡ್ತಾ ಇದೀನಲ್ಲ. ಪ್ರೈಮರಿ ಸ್ಕೂಲು ಮೇಸ್ಟರು ಪುಟ್ಟಾಚಾರಿ ಇರಲಿಲ್ಲವೇ—"

" ಸೀನೀರು ಭಾವಿ ಹತ್ತಿರ ವೆಂಕೂಬಾಯಿ ಇದ್ದರಲ್ಲ, ಅವರ ಗಂಡ "

" ಹೂ, ಅವನೇ. ಅವನ್ನ ಒಬ್ಬ ಮನುಷ್ಯ ಅಂತ ಯಾರು ಲೆಕ್ಕಕ್ಕಿಟ್ಟಿದ್ದರು ಹೇಳು. ಮೂರು ರುಪಾಯಿ ಆರಾಣೆ ಚಿಲ್ಲರೆ ಬಾಕೀಗೆ ಅರವತ್ತು ಸಲ ಕೇಳಿಸಿಕೊಂಡ ಪುಣ್ಯಾತ್ಮ. ಆತನಿಗೆ ಶುಕ್ರಮಹರ್ದೆಸೆ ಬಂತು ನೋಡು."

" ಏನು ಗೋವಾಲಾಟರೀಲಿ ದುಡ್ಡು ಬಂತೇ ? "

" ಹೂ. ಇದೂ ಒಂದು ಲಾಟರೀನೇ ಅನ್ನು."

" ಅಂದರೆ... ? "

" ಅವನ ಮಗ ವೆಂಕೋಬಿ ಅಂತ ಇರಲಿಲ್ಲವೇ – ಅವನು ಬೆಂಗಳೂರಿಗೆ ಹೋಗಿ, ಯಾವುದೋ ಪರೀಕ್ಷೆ ಪಾಸು ಮಾಡಿ, ದಿವಾನರ ಕಛೇರೀಲೇ ಕೆಲಸ ಆಯಿತು ದಿವಾನರ ಕಿವಿ, ಕೈ ಎರಡೂ ಅವನ ಜೋಬಿನಲ್ಲೇ ಇದೆಯಂತೆ. ಮೊನ್ನೆ ಜೋಡೀದಾರ್ ಅನಂತರಾಯರು ದಿವಾನರ ಹತ್ತಿರ ತಮ್ಮದೇನೋ ಕೆಲಸ ಮಾಡಿಸಿಕೊಳ್ಳಬೇಕಾದಾಗ, ಪುಟ್ಟಾಚಾರಿ ಕಾಲಿಗೆ ಬಿದ್ದು ' ನಿಮ್ಮ ಮಗನಿಗೆ ಒಂದು ಮಾತು ಹೇಳಿ ನನ್ನ ಮನೆತನ ಉದ್ಧಾರ ಮಾಡಬೇಕು ' ಅಂತ ಬೇಡಿಕೊಂಡರಂತೆ ಪುಟ್ಟಾಚಾರಿ ಕಳಿಂಗ. ಅನಂತರಾಯರ ಹತ್ತಿರ ಎರಡು ಸಾವರ ಕಕ್ಕಿಸಿ, ಮಗನ ಕಿವಿ ತಿರುಗಿಸಿದನಂತೆ. ಈಗ ಹೇಳು. ಪುಟ್ಟಾಚಾರಿ ಎಲ್ಲಿ, ಅನಂತರಾಯರೆಲ್ಲಿ ? ಎಲ್ಲಿಗೆಲ್ಲಿಯ ಸಂಬಂಧ ? ಅಂಥೋರು ಬಂದು ಇವನ ಕಾಲಿಗೆ ಬಿದ್ದರಲ್ಲಾ ಇದು ಶುಕ್ರಮಹರ್ದೆಸೆ ಅಲ್ಲವೇ ? "

" ಏನೋ ಅವರು ಪಡೆದುಕೊಂಡು ಬಂದದ್ದು, ತಣ್ಣಗಿರಲಿ. ಅವರ ಭಾಗ್ಯ ಕಂಡು ಕರುಬಿದರೆ ನಮಗೆ ಬಂದದ್ದೇನು ? "

" ಕರುಬೋದು ಬೇಡ. ಹೋಗಲಿ. ನಿನ್ನ ಮಗನೂ ಹಾಗಾಗಬೇಕು ಅಂತ ಆಸೆ ಇಲ್ಲವೇ ? "

" ನಮ್ಮ ಆಸೆಗೇನು – ಬೆಟ್ಟದಷ್ಟಿದೆ. ಆದರೆ ಇವನ ಹಣೇಲಿ ಏನು ಬರೆದಿದೆಯೋ ಯಾರು ಬಲ್ಲರು. ಯೋಗಿ ಪಡೆದದ್ದು ಯೋಗಿಗೆ , ಜೋಗಿ ಪಡೆದದ್ದು ಜೋಗೀಗೆ."

" ಹಾಗಂತ ಹುಡುಗನ್ನ ಓದು ಬಿಡಿಸಿ ಮನೆ ಬಾಗಿಲಲ್ಲಿ ಕೂಡಿಸಿಕೊಂಡರೆ ಅದೃಷ್ಟ ಪರೀಕ್ಷೆ ಮಾಡಿದ ಹಾಗಾಗುತ್ತದೆಯೋ ? "

" ಬೆಂಗಳೂರಿಗೆ ಕಳಿಸಿದ ಮಾತ್ರಕ್ಕೇ ವೆಂಕೋಬಿ ಹಾಗೇ ಆಗ್ತಾನೆ

ಅಂತ ಯಾರಾದರೂ ಬರೆದುಕೊಟ್ಟಿದ್ದಾರೆಯೇ."

" ಏಕಾಗಬಾರದು."

" ಕಾಶೀಗೆ ಹೋಗೋರೆಲ್ಲಾ ಕೊಡಗಟ್ಟಲೆ ಗಂಗೆ ತರ್ತಾರೆಯೇ ? ಏನೋ ಅವರವರ ಅದೃಷ್ಟಕ್ಕೆ ಹತ್ತಿದ್ದು ಅವರಿಗಾಗುತ್ತೆ. ಬೆಂಗೂಳೂರಿಗೆ ಹೋಗಿ ವೆಂಕೋಬಿ ದಿವಾನ ಆದ ಅಂತ, ನಮ್ಮ ಹುಡುಗನ್ನ ಊರು ಮನೆ ಬಿಡಿಸಿ, ಎಣ್ಣೆ ನೀರು ಸಿಗದ ಪರಸ್ಥಳದಲ್ಲಿ ಅಲೆಸಿದರೆ ಏನಾದ ಹಾಗಾಯಿತು ? "

" ಹಾಗೆಂದರೆ—ಅವನಿಗೂ ಇಪ್ಪತ್ತುನಾಲ್ಕು ತೊಲ—ಒಂದು ಸೇರೇ ಗತಿ ಅನ್ನು."

" ಕುಲಕ್ಕೆ ಬಂದ ಲಕ್ಷ್ಮಿ, ಅಂಥ ವೃತ್ತಿ ಕಂಡರೆ ನಿಮಗೇಕೆ ಇಷ್ಟು ತಾತ್ಸಾರಾನೋ ನಾನು ಬೇರೆ ಕಾಣೆ. ನನಗೇನೋ—ನಿಮಗಾದದ್ದು, ನಿಮ್ಮ ತಲೆತಲಾಂತರಕ್ಕೆ ನಡೆದುಬಂದದ್ದು ನಿಮ್ಮ ಮಗನಿಗೂ ಆಗಲಿ ಅಂತ ಆಸೆ. ನಿಮಗೆ ಅದು ಬೇಡ ಅನ್ನಿಸಿದೆ. ಹೋಗಲಿ-ಅವನ ಮನಸ್ಸಿನಲ್ಲಿ ಏನಿದೆಯೋ ಅವನನ್ನೇ ಒಂದು ಮಾತು ಕೇಳಿ ನೋಡಿ."

" ಯಾರನ್ನ ? "

—ಹೆಂಡತಿಯ ಮಾತು ಅರ್ಥವಾಗದಂತೆ ಕೇಳಿದ ಚಿನ್ನಸ್ವಾಮಿಶೆಟ್ಟಿ.

" ಇನ್ನಾರನ್ನ. ರಾಜಣ್ಣನ್ನ."

" ಸರಿಹೋಯಿತು."

" ಏಕೆ ? "

" ಅಲ್ಲೇ—ನಿನಗೆ ಇಷ್ಟು ವಯಸ್ಸು ಬಂತು ಇಷ್ಟು ವರ್ಷ ಸಂಸಾರ ಮಾಡಿದೆ, ಹದಿನೆಂಟು ವರ್ಷದ ಮಗನ ತಾಯಿಯಾದೆ. ನಿನಗೇ ಹೇಗೆ ಮಾಡಿದರೆ ಸರಿ ಅಂಥ ಅರ್ಥವಾಗದ್ದು, ಇನ್ನೂ ವ್ಯವಹಾರ ದೃಷ್ಟಿಯಲ್ಲಿ ಹಸು ಮಗುವಾದ ರಾಜಶೇಖರನಿಗೇನು ತಿಳಿಯುತ್ತೆ ಹೇಳು ?

" ಹನ್ನೆರಡು ರೂಪಾಯಿನ ಪರೀಕ್ಷೆ ಪಾಸು ಮಾಡಿದೋನಿಗೆ ಅಷ್ಟು ತಿಳಿಯೊಲ್ಲವೇ ? "

" ಅದೊಂದೇ ಅವನಿಗೆ ತಿಳಿದಿರೋದು."

" ಅಂದರೆ—"

" ಏನೋ—ಮೇಷ್ಟರು ಹೇಳಿಕೊಟ್ಟಿದ್ದನ್ನು ಅಲ್ಲಿ ಬರೆದು ಬಂದ, ಪಾಸಾಯಿತು. ಅವನಿಗೆ ಗೊತ್ತಿರೋದು ಅಷ್ಟೆ. ಅದು ಬಿಟ್ಟು ಉಳಿದ ಮಾತೆಲ್ಲಾ ಅವನಿಗೇನು ಅರ್ಥವಾಗುತ್ತೆ ? ಅವನಪ್ಪ—ನನಗೇ ಮೂರು ದಿನದಿಂದ ಬಗೆಹರಿದಿಲ್ಲ. ಇನ್ನು ಅವನಿಗೆ ತಿಳಿಯುತ್ತೇ ? "

" ಅವನಿಗೆ ತಿಳಿಯೊಲ್ಲ, ನಿಮಗೆ ಬಗೆಹರಿಯೊಲ್ಲ, ನನ್ನ ಮಾತು ಸರಿಯಲ್ಲ—ಹಾಗಾದರೆ ಈ ಪ್ರಶ್ನೆ ತೀರ್ಮಾನ ಆಗೋದು ಹೇಗೆ ? "

" ಇಷ್ಟು ಹೊತ್ತಿಗೆ ಇದೊಂದು ಜಾಣತನದ ಮಾತಾಡಿದೆ—ನೋಡು ! ನೀನು ಅಂದುಕೊಂಡಷ್ಟು ದಡ್ಡನಲ್ಲ ನಾನು. ನಾನೂ ಯೋಚಿಸಿ ಯೋಚಿಸಿ ಒಂದು ತೀರ್ಮಾನಕ್ಕೆ ಬಂದಿದ್ದೇನೆ "

" ಏನು ? "

" ರಾಜಶೇಖರನ ಹೆಡ್ಮಾಸ್ಟರನ್ನು ಕೇಳಿ ನೋಡೋದು ಅಂತ."

" ಅವರಿಗೇನು ತಿಳಿಯುತ್ತೆ ಅವರ ಮಗನೇ ಇವನು ? "

" ಅದಲ್ಲ. ನಾನು ಹೇಗೋ ಮನಸ್ಸು ಮಾಡಿ ಇವನನ್ನು ಬೆಂಗಳೂರಿಗೆ ಕಳಿಸಿದೆ ಅನ್ನು. ಅಲ್ಲಿ ದೊಡ್ಡ ಪರೀಕ್ಷೆ ಓದಿ ಪಾಸು ಮಾಡೋ ಅಷ್ಟು ಬುದ್ಧಿ ಇವನಿಗಿದೆಯೋ ಇಲ್ಲವೋ ಅಂತ ಅವರಿಗೆ ತಾನೆ ಗೊತ್ತು. ಅವರು ಮುಂದಕ್ಕೆ ಹೋಗಿ ಓದಲಿ ಅಂದರೆ ಓದಿಸುವುದು. "

" ಸರಿ- ಹಾಗೇ ಮಾಡಿ. ಅವರು ಆಗಬಹುದು ಎಂದಮೇಲೆ ತಾನೇ ಮುಂದಿನ ಮಾತು."

—ಎಂದು ಅಂದಿಗೆ ಬಗೆಹರಿಯದ ಆ ಮಾತನ್ನು ಅಲ್ಲಿಗೆ ಮುಗಿಸಿ, ವೆಂಕಟಲಕ್ಷ್ಮಮ್ಮ ದೀಪ ಆರಿಸಿದಳು.

ಅವರ ಕೋಣೆಯ ಬದಿಯ ಪಡಸಾಲೆಯಲ್ಲಿ ಮಲಗಿದ್ದ ರಾಜಶೇಖರನ ಕಿವಿಗೂ ತಂದೆತಾಯಿಗಳ ಸಂಗ್ರಾಮದ ಅಷ್ಟಿಷ್ಟು ಬಿದ್ದಿತ್ತು. ಆದರೆ ಅವನಿಗೆ ಆ ಚಿಂತೆಯಾಗಲಿ, ಈ ವಿಚಾರದಲ್ಲಿ ತನ್ನ ನಿಲುವೇನು ಎಂಬ ವಿಚಾರವಾಗಲಿ ಕೇಳಲಿಲ್ಲ. ಏನೋ—ಅವರು ಮನಸ್ಸು ಬಂದ ಹಾಗೆ ಮಾಡಲಿ ಎಂದುಕೊಂಡು, ಮುಖದಮೇಲೆ ಮುಸುಕು ಎಳೆದುಕೊಂಡಿದ್ದ.

೩

ತಂದೆಯ ಬಯಕೆಯ ರಥಕ್ಕೆ ಕಟ್ಟಿದ ಕುದುರೆಯಾಗಿ ರಾಜಶೇಖರ ಬೆಂಗಳೂರಿಗೆ ಕಾಲೇಜಿಗೆ ಸೇರಲು ಬಂದ. ಅವನ ಊಟ, ವಸತಿಯ ವ್ಯವಸ್ಥೆ ಮಾಡಿಹೋಗಲೆಂದು ಚಿನ್ನಸ್ವಾಮಿಶೆಟ್ಟರೂ ಅವನೊಂದಿಗೆ ಬೆಂಗಳೂರಿಗೆ ಬಂದಿದ್ದರು. ತಂದೆ ಮಕ್ಕಳು ಚಿಂತಾಮಣಿಯಿಂದ ಹೊರಡುವ ಮುನ್ನ ಚಿನ್ನಸ್ವಾಮಿಶೆಟ್ಟರ ಸಲಹೆಗಾರರಾದ ನರಸಿಂಗರಾಯರು, ಶೆಟ್ಟರ ಕಿವಿಯಲ್ಲಿ ಒಂದು ಮಂತ್ರ ಊದಿದ್ದರು—

" ನೋಡಿ ಶೆಟ್ಟರೇ – ರಾಜಶೇಖರ ಬರೀ ಕಾಲೇಜಿಗೆ ಸೇರಿದರೇ ಆಗ

ಲಿಲ್ಲ. ಸರಿಯಾದ ವಿಷಯ ಅರಿಸಿಕೊಳ್ಳಬೇಕು."

"ಅಂದರೆ—"

"ಪಿ. ಸಿ. ಎಂ ನಲ್ಲೇ ಸೀಟು ಕೊಡಿಸಿ ಬರಬೇಕು."

"ಹಾಗಂದರೇನು ?"

"ಪಿ. ಸಿ. ಎಂ. ಅಂದರೆ ವಿಜ್ಞಾನದ ವಿಭಾಗ. ಚರಿತ್ರೆ ಭೂಗೋಳ 'ಆರ್ಟ್ಸ್' ವಿಭಾಗ."

"ಚರಿತ್ರೆ, ಭೂಗೋಳ ಬೇಡವೇ ?"

"ಸರಿ 'ಆರ್ಟ್ಸ್' ತಗೊಂಡು ಪಧವೀಧರನಾದರೆ ಏನು ಲಾಭ. ಅಂಥ ವರು ಕಾಸಿಗೊಬ್ಬರು, ಕೊಸರಿಗೊಬ್ಬರು. ಅವರಿಗೆ ಕುರುಡು ಕವಡೆ ಬೆಲೆ ಇಲ್ಲ."

—ಸ್ವತಃ ವಿಜ್ಞಾನದ ಪಧವೀಧರರಾದ ನರಸಿಂಗರಾಯರು ಹೇಳಿದರು.

"ಹಾಗಾದರೇನು ಮಾಡಬೇಕು ಅಂತೀರಿ."

"ಹೇಗಾದರೂ ಮಾಡಿ ರಾಜಶೇಖರನಿಗೆ ಪಿ.ಸಿ.ಎಂ. ನಲ್ಲೇ ಸೀಟು ಸಿಕ್ಕೋ ಏರ್ಪಾಟು ಮಾಡಬೇಕು"

"ಅದೇ ಬೇಕು ಅಂತ ಕೇಳಿದರೆ ಕೊಡೋದಿಲ್ಲವೇ ?"

"ಕೊಡ್ತಾರೆ. ಆದರೆ ಇಲ್ಲಿ ಸೈನ್ಸ್‌ನಲ್ಲಿ ಸಾಕಷ್ಟು ನಂಬರು ಬಂದಿರ ಬೇಕು."

"ಇಲ್ಲಿ ರಾಜಣ್ಣನಿಗೆ ಬಂದಿರೋದು ಸಾಲದೇ ?"

"ಊಹೂ, ಬರೀ ಪಾಸಿಂಗ್ ಮಾರ್ಕ್ಸ್ ಬಂದಿದೆ ?"

"ಹಾಗಾದರೆ ?"

"ಅಲ್ಲಿ ಸೂಪರಿಂಟೆಂಡೆಂಟರಿಗೆ ಬೇಕಾದವರ ಕೈಯಲ್ಲಿ ಒಂದು ಮಾತು ಹೇಳಿಸಿದರೆ ಆಗುತ್ತದೆ. ಅಷ್ಟು ಮಾಡಿದರೆ ನಾಕು."

"ಅಷ್ಟೇ ಸಾಕೇ ? ನಂಬರ್ ಬರದಿದ್ದರೂ ಚಿಂತೆ ಇಲ್ಲವೇ ?"

"ಈ ಕಾಲ ಹಾಗಿದೆ ಶೆಟ್ಟರೇ, ನಂಬರ್‌ಗಿಂತ, ಸವಿಯಾದ ಕಡೆಯ ಮಾತಿಗೇ ಹೆಚ್ಚು ಬೆಲೆ. ವ್ಯವಹಾರಸ್ಥರು, ನಿಮಗೆ ನಾನು ಹೇಳಿಕೊಡಬೇಕೇ ? ಏನೋ ಅವಸರ ಮಾಡಿ ಓಡಿಬರಬೇಡಿ. ಒಂದು ದಿನ ಅಂಗಡಿಯ ಕೆಲಸ ನಿಂತರೂ ಚಿಂತೆಯಿಲ್ಲ. ಬೆಂಗಳೂರಿನಲ್ಲಿದ್ದು, ಎಲ್ಲಾ ಕೆಲಸ ಪಕ್ಕಾ ಮಾಡಿ ಕೊಂಡು ಬನ್ನಿ. ಹುಡುಗ ಬುದ್ಧಿವಂತ. ಕಷ್ಟಪಟ್ಟು ಓದುತ್ತಾನೆ. ಅವನಿಗೆ, ನಾವು, ಹಿರಿಯರು ಆದಷ್ಟು ಸಹಾಯ ಮಾಡಬೇಕು. ಬೆಂಗಳೂರಿನಲ್ಲಿ ನಿಮಗೆ ತಿಳಿದವರಿಲ್ಲವೇ ?"

" ಇದಾರೆ."

" ಯಾರು ? "

" ಸರಾಫ್ ಶ್ರೀನಿವಾಸಶೆಟ್ಟರು ಅಂತ. ನನ್ನ ಹೆಂಡತಿ ಕಡೆಯ ನೆಂಟರು. ಬೆಂಗಳೂರಿಗೆ ಮಾಲು ತರಲು ಹೋದಾಗ ಅವರಲ್ಲೇ ಉಳಿದುಕೊಳ್ಳೋದು."

" ಅವರೂ ಅಂಗಡಿ ಇಟ್ಟಿದಾರೆಯೋ ? "

" ಹೂ. ಆದರೆ ನಮ್ಮಂಥದಲ್ಲ."

" ಅಂದರೆ . ........"

" ಚಿನ್ನ ಬೆಳ್ಳಿ ವ್ಯಾಪಾರ ನಗರ್ತರಪೇಟೇಲಿ ಎರಡು ಅಂಗಡಿ ಇದೆ."

" ಹಾಗಾದರೆ ಸರಿ ಅವರಿಗೆ ಯಾರದರೂ ದೊಡ್ಡ ಮನುಷ್ಯರ ಪರಿಚಯ ಇದ್ದೇ ಇರುತ್ತೆ. ಸರಿಯಾದವರನ್ನು ಹಿಡಿದು ಕೆಲಸ ಮಾಡಿ."

—ಎಂದು ನರಸಿಂಗರಾಯರು ಹಿತೋಪದೇಶಮಾಡಿದರು.

ರಾಯರ ಸಲಹೆಯಂತೇ ಮಾಡುವ ನಿಶ್ಚಯಮಾಡಿಕೊಂಡು, ಮಗನೊಂದಿಗೆ ಬೆಂಗಳೂರಿಗೆ ಬಂದು ಇಳಿದರು ಚಿನ್ನಸ್ವಾಮಿಶೆಟ್ಟರು.

ಬೆಂಗಳೂರಿನ ಬಸ್‌ಸ್ಟಾಂಡಿನಲ್ಲಿಳಿಯುತ್ತಿದ್ದಹಾಗೇ ಶೆಟ್ಟರು ಆದಷ್ಟು ಬೇಗ ಕೆಲಸಮುಗಿಸಿಕೊಂಡು ಚಿಂತಾಮಣಿಗೆ ಹಿಂದಿರುಗಬೇಕೆಂಬ ನಿರ್ಧಾರ ಮಾಡಿದ್ದರು. ಚಿಂತಾಮಣಿಯನ್ನು ಬಿಡುವಾಗ ದೂರವಾಗಿದ್ದ ಅಂಗಡಿಯ ಚಿಂತೆ, ಬೆಂಗಳೂರು ಹತ್ತಿರವಾಗುತ್ತಿದ್ದ ಹಾಗೇ ಹತ್ತಿರವಾಗಿ, ಆಳಿನಮೇಲೆ ಬಿಟ್ಟು ಬಂದ ಅಂಗಡಿಯ ಚಿಂತೆ ಅವರನ್ನು ಕಾಡಿಸತೊಡಗಿತ್ತು. ಅಂಗಡಿಯಲ್ಲಿದ್ದ ಒಂದೊಂದು ಸಾಮಾನಿನ ವಿವರ, ಕೊಡ ಕೊಳ್ಳುವ ಲೆಕ್ಕಾಚಾರ ಅವರ ಮಿದುಳನ್ನು ಹಿಂಡತೊಡಗಿದ್ದವು ಆದರೆ ಶ್ರೀನಿವಾಸಶೆಟ್ಟರಿಗೆ ಅಪರೂಪಕ್ಕೆ ಬಂದ ನೆಂಟರನ್ನು ಅಷ್ಟು ಬೇಗ ಹಿಂದಕ್ಕೆ ಕಳುಹಿಸುವ ಆತುರವಿರಲಿಲ್ಲ. ಅಲ್ಲದೆ ನಿಧಾನವಾಗಿ ಅವರೊಂದಿಗೆ ಕುಳಿತು ಮಾತನಾಡುವಷ್ಟು ವ್ಯವಧಾನವೂ ಇರಲಿಲ್ಲ. ಅವರು ಬೆಳಗ್ಗೆ ಆರುಗಂಟೆಗೆ ಸ್ನಾನ ತಿಂಡಿ ಮುಗಿಸಿ ಅಂಗಡಿಗೆ ಹೋದರೆ ಮತ್ತೆ ಮಧ್ಯಾಹ್ನ ಮೂರಕ್ಕೆ ಊಟಕ್ಕೆ ಬರುತ್ತಿದ್ದರು. ಅದು ಮುಗಿಸಿ ಮತ್ತೆ ಅಂಗಡಿಗೆ ಹೋದರೆ ರಾತ್ರಿ ಹಿಂದಕ್ಕೆ ಬರುತ್ತಿದ್ದುದು. ಇವರು ಊಟಮಾಡಿ ಮಲಗಿದಮೇಲೆ. ಈ ಗಡಿಬಿಡಿಯ ನಡುವೆ ಚಿನ್ನಸ್ವಾಮಿಶೆಟ್ಟರ ಮಾತು ಅಷ್ಟು ಆತುರದಲ್ಲಿ ಮುಗಿಯುವಂಥದಲ್ಲ. ಆದುದರಿಂದ ಮನಸ್ಸೆಲ್ಲಾ ಚಿಂತಾಮಣಿಯಲ್ಲಿದ್ದ ಅಂಗಡಿಯ ಮೇಲೆ ಇದ್ದರೂ, ತಮ್ಮ ಆತುರದ ಕುದುರೆಯನ್ನು ಶ್ರೀನಿವಾಸಶೆಟ್ಟರ ಬಿಡುವಿಲ್ಲದ ದಿನಚರಿಯ ಕಂಭಕ್ಕೆ ಬಿಗಿದು ಮೂರುದಿನ ಕಾದು ಹೊತ್ತು ಸಾಧಿಸಿ, ಕಡೆಗೊಂದು ದಿನ ಅವರು

ರಾತ್ರಿ ಮನೆಗೆ ಬರುವವರೆಗೂ ಕಾದು ಕುಳಿತರು.

ತಾವು ಮನೆಗೆ ಹಿಂದಿರುಗಿದಾಗ, ವರಾಂಡದಲ್ಲೇ, ತಮಗಾಗಿ ಕಾದು ಕುಳಿತಿದ್ದ ಚಿನ್ನಸ್ವಾಮಿಶೆಟ್ಟರನ್ನು ಕಂಡ ಶ್ರೀನಿವಾಸಶೆಟ್ಟರು ಆಶ್ಚರ್ಯ ವ್ಯಕ್ತಪಡಿಸಿ–

" ಏನು ಭಾವಯ್ಯ, ಇನ್ನೂ ಊಟಾ ಆಗಲಿಲ್ಲವೇ ? "

—ಎಂದು ಕೇಳಿದರು.

" ಊಟ ಆಯಿತು ."

—ಚಿನ್ನಸ್ವಾಮಿಶೆಟ್ಟರು ಮಾತು ಮುಂದುವರಿಸಲು ರಾಗ ಎಳೆದರು.

" ಮತ್ತೆ ? ನಿದ್ದೆ ಬರಲಿಲ್ವೇ ? "

" ಊಟ, ನಿದ್ದೆ–ಈಗ ಮೂರು ದಿನದಿಂದ ಅದೇ ಆಗಿದೆ."

" ಏಕೆ–ನಮ್ಮ ಉಪಚಾರ ಅಷ್ಟು ಬೇಸರಬಂತೇ ಭಾವಯ್ಯ ? "

" ಉಪಚಾರ ಬೇಸರ ಬರಲಿಲ್ಲ. ಬಂದ ಕೆಲಸ ಆಗಲಿಲ್ಲ. ದಿವಾನರನ್ನಾದರೂ ಹಿಡೀಬಹುದು ನಿನ್ನ ಹಿಡಿಯೋದು ಕಷ್ಟ ಆಗಿದೆ."

" ಏಕೆ ? "

" ಏಕೇಂದ್ರೆ ಏನು ಹೇಳಲಿ ಹೇಳು. ನಿನ್ನ ಹಿಡೀಬೇಕು ಅಂದ್ರೆ ನರಸಿಂಹಾವತಾರಾನೇ ತಾಳಬೇಕು."

" ಏಕೆ ? "

" ಮತ್ತೆ–ಹಗಲಾಗೊಲ್ಲ, ರಾತ್ರಿ ಆಗೊಲ್ಲ, ಮನೇಲಾಗೊಲ್ಲ–ಅಂಗಡೀಲಾಗೊಲ್ಲ–ಇನ್ನೇನ್ಮಾಡ್ಲಿ ಹೇಳು. ಅದಕ್ಕೇ ಇವತ್ತು ಎಷ್ಟುಹೊತ್ತಾದ್ರೂ ಆಗ್ಲಿ ಅಂತ ಕಾದುಬಿಟ್ಟೆ."

" ಈ ಹಾಳು ವ್ಯಾಪಾರದ ಹಣೇಬರಾನೇ ಅಷ್ಟು. ಹೆಂಡ್ರು ಮಕ್ಕಳ ಕೈಲಿ ಮಾತಾಡಲಿಕ್ಕೆ ಕೂಡ ಪುರಸೊತ್ತು ಸಿಗೋಲ್ಲ. ಹಾಗೇ ಊಟಾಮಾಡ್ತಾ ಮಾತಾಡೋಣ ಬಾ."

—ಎಂದು ಚಿನ್ನಸ್ವಾಮಿಶೆಟ್ಟರನ್ನು ತನ್ನೊಂದಿಗೆ ಊಟದ ಮನೆಗೆ ಕರೆದುಕೊಂಡು ಹೋಗಿ, ಪಕ್ಕದಲ್ಲಿ ಕೂಡಿಸಿಕೊಂಡು ಮತ್ತೆ ತಮ್ಮ ವ್ಯಾಪಾರ ವಹಿವಾಟಿನ ವಿಷಯವನ್ನೇ ಮಾತನಾಡತೊಡಗಿದರು. ಸವರ್ನ ಧಾರಣೆಯ ಏರಿಳಿತ, ರೋಲ್ಡ್‌ಗೋಲ್ಡ್ ಒಡವೆಗಳ ಆಗಮನದಿಂದ ಚಿನ್ನದ ಒಡವೆಗಳ ವ್ಯಾಪಾರದ ಮೇಲಾದ ಆಘಾತ, ಕಳ್ಳಮಾಲು ಕೊಳ್ಳುವುದರಿಂದಾಗುವ ಲಾಭ ನಷ್ಟ, ಇನ್‌ಕಂಟ್ಯಾಕ್ಸ್‌ನವರ ಸುಲಿಗೆಗಳ ವಿಚಾರವಾಗಿ ಶ್ರೀನಿವಾಸಶೆಟ್ಟರಿಂದ ಸಾಕಷ್ಟು ಸುದೀರ್ಘವಾದ ಭಾಷಣವನ್ನು ಕೇಳಿಯಾದ ಬಳಿಕ, ಕೊನೆಕಾಣದ

ಅವರ ವಾಕ್-ದೃಷ್ಟಿಯ ನಡುವೆ ತಮ್ಮ ಮಾತು ನುಸುಳಿಸಿ, ಚಿನ್ನಸ್ವಾಮಿ ಶೆಟ್ಟರು, ತಮ್ಮ ವಿಚಾರವನ್ನು ಮುಂಡಿಸಿದರು.

" ನೀನು ಹೇಳೋದೆಲ್ಲಾ ನಿಜ ಶೀನಣ್ಣ. ಈ ಕಾಲದಲ್ಲಿ ವ್ಯಾಪಾರ ಮಾಡ್ತೀನೀಂತ ಅಂಗಡಿ ಬಾಗಿಲು ತೆಗೆಯೋದಕ್ಕಿಂತ ತಿರುಪತಿ ತಿಮ್ಮಪ್ಪನಿಗೆ ತಲೆ ಒಪ್ಪಿಸಿ ಅಡ್ಡ ಬೀಳೋದು ಲೇಸು. ಬರೋರೆಲ್ಲಾ ರಂಗೋಲಿ ಕೆಳಗೆ ನುಸಿಯೋ ಗಿರಾಕಿಗಳೆ. ನನಗೂ ಇದನ್ನೆಲ್ಲಾ ನೋಡಿ ನೋಡಿ ಸಾಕಾಗಿ, ನನ್ನ ಕಾಲಕ್ಕೆ ಈ ವೃತ್ತಿ ಸಾಕು ರಾಜಶೇಖರನಿಗೆ ಬೇರೆದಾರಿ ಮಾಡಬೇಕು ಅಂತ ನಿಶ್ಚಯ ಮಾಡಿದೇನೆ."

" ಏನು ? "

" ಚೆನ್ನಾಗಿ ಓದಿಸಿ, ಎಲ್ಲಾದರೂ ಸರಕಾರಿ ಕೆಲಸಕ್ಕೆ ಸೇರಿಸಬೇಕೂಂತ."

" ಒಳ್ಳೇ ಯೋಚನೇನೇ. ನಮ್ಮನವ್ರೋರು ಸರಕಾರಿ ಕೆಲಸದಲ್ಲಿ ರೋದು ಹೊತ್ತಿನಲ್ಲಿ ಅನುಕೂಲ ಆಗುತ್ತೆ. ಮೊನ್ನೆ ಏನಾಯಿತು ಗೊತ್ತೆ ಭಾವಯ್ಯ ? "

" ಏನಾಯಿತು ? "

" ಇಲ್ಲಿಗೆ ಒಬ್ಬ ಹೊಸ ಇಣಕಂಟ್ಯಾಕ್ಸ್ ಆಫೀಸರ್ ಬಂದಿದಾನೆ. ಕಳ್ಳ ಬಡ್ಡೀಮಗ. ಒಂದು ದಿನ ಯಾರೋ ಬಂದ ಹಾಗೆ ಅಂಗಡೀಗೆ ಬಂದು, ಭಾಳ ವ್ಯಾಪಾರ ಮಾಡೋನ ಹಾಗೆ ಅದೂ ಇದೂ ತೆಗಿಸಿನೋಡಿ, ಲೋಕಾಭಿ ರಾಮವಾಗಿ, ವ್ಯಾಪಾರದ ವಿಷಯ ವಿಚಾರಿಸಿದ .. "

" ಅವನ ಮುಂದೆ ಬಾಯಿ ಬಿಟ್ಟೆಯ ಶೀನಣ್ಣ ? "

—ಆಶ್ಚರ್ಯದಿಂದ ಕೇಳಿದರು ಚಿನ್ನಸ್ವಾಮಿಶೆಟ್ಟಿ

" ಅವನು ಇಂಥೋನು ಅಂತ ಗೊತ್ತಾಗಿದ್ರೆ ಹೇಳ್ತಾ ಇದ್ದೇನೆ ? ಬಾಯಿ ಬಿಡಿಸಲಿಕ್ಕೆ ಅವನಲ್ಲ, ಅವನಪ್ಪ ಬರಬೇಕಾಗಿತ್ತು. ಏನೋ ಕೊಂಚ ಬೇಹು ಷಾರಿ ಆಯ್ತು. ಸುಳುವು ಕಂಡುಕೊಂಡು ಬರೆ ಎಳೆದುಬಿಟ್ಟೆ ನೋಡು."

" ಆಮೇಲೆ ! ಸಿಕ್ಕುಬಿದ್ದು ಬಿಟ್ಟೆಯಾ ? "

" ಸ್ವಲ್ಪದರಲ್ಲಿ ತಪ್ಪಿತು."

" ಹೇಗೆ ? "

" ಇದೆಯಲ್ಲಾ-ಹಳೆಕಾಗದ, ಹಳೆಮಸೀಲಿ ಹೊಸ ಲೆಕ್ಕ ಬರೆಸಿ, ಒಪ್ಪಿಸಿದೆ. ಅವರ ಆಫೀಸ್‌ನಲ್ಲಿ ಕಾಂತರಾಜಶೆಟ್ಟಿ ಅಂತ ಒಬ್ಬ ಕದೀಮ ಗುಮಾಸ್ತ ಇದಾನೆ. ' ನಾವೂ ನೀವೂ ಒಂದೇ ಜನ ' ಅಂತ ಅವನಿಗೆ ಅಡ್ಡಬಿದ್ದೆ. ಅವನುದ್ದಕ್ಕೊ ದುಡ್ಡು ತಿಂದ ಪಾಪಿಷ್ಟ. ಆದರೆ ಹೇಗೋ ಬಚಾವು ಮಾಡಿದ. ಉಪ್ಪುತಿಂದು

ಎರಡು ಬಗೀಲಿಲ್ಲ. ಅದಕ್ಕೇ ಅಂಥ ಕಡೇಲಿ ನಮ್ಮ ತಮ್ಮೋರು ಇರಬೇಕು ಅನ್ನೋದು."

"ನಿಜ ಅನ್ನು. ಅದಕ್ಕೇ ನಾನೂ ಈ ಗೋಳೇ ಬೇಡ ಅಂತ ರಾಜ ಶೇಖರನ ವಿಷಯ ಹೀಗೆ ಯೋಚನೆ ಮಾಡಿದೆ. ಅದಕ್ಕೆ ನಿನ್ನಿಂದ ಒಂದು ಸಹಾಯ ಆಗಬೇಕಲ್ಲ."

"ಅದೇನು ಹೇಳು. ಆಗೋದಾದರೆ ಖಂಡಿತ ಮಾಡಿ ಕೊಡ್ತೇನೆ."

—ಎಂದರು ಆ ವೇಳೆಗೆ ಊಟ ಮುಗಿಸಿ, ಕೈತೊಳೆದು ತಾಂಬೂಲ ಚರ್ವಣಕ್ಕೆ ಬಂದು ಕುಳಿತ ಶ್ರೀನಿವಾಸಶೆಟ್ಟರು.

"ಇನ್ನೇನೂ ಇಲ್ಲ. ರಾಜಶೇಖರನ್ನ ಈ ಊರಿನಲ್ಲೇ ಕಾಲೇಜಿಗೆ ಸೇರಿಸಬೇಕು. ಅಂತ ಇದೀನಿ! ............."

"ಅದಕ್ಕೇನು ಆಗಬಹುದು. ಈ ಊರಿನಲ್ಲಾದರೆ ನಮ್ಮವರದೇ ಹಾಸ್ಟಲ್ ಇದೆ. ಅಲ್ಲಿ ಹಾಯಾಗಿದ್ದುಕೊಂಡು ಓದಬಹುದು. ಹಬ್ಬ ಹುಣ್ಣಿಮೆ ಅಂದರೆ ನಮ್ಮ ಮನೆಗೆ ಬಂದು ಹೋಗುತ್ತಿರಬಹುದು. ಅಲ್ಲೇನೇ?"

—ಎಂದು ಇನ್ನೂ ಅಡಿಗೆ ಮನೆಯಲ್ಲಿದ್ದ ಹೆಂಡತಿಯನ್ನು ಕೂಗಿ, ಚಿನ್ನಸ್ವಾಮಿಶೆಟ್ಟರು ಮಾತು ಮುಗಿಸುವ ಮುನ್ನವೇ ಅವಸರವಾಗಿ ಹೇಳಿದರು ಶ್ರೀನಿವಾಸಶೆಟ್ಟರು. ಅವರ ಅವಸರದ ಮಾತಿನ ಅರ್ಥ ಚಿನ್ನಸ್ವಾಮಿಶೆಟ್ಟರಿಗೂ ಆಗದಿರಲಿಲ್ಲ. ತಮ್ಮ ಮಾತಿಗೆ ಅವರು ಏನೋ ಅರ್ಥ ಊಹಿಸಿಕೊಂಡು ಆಡಿದ ಮಾತಿನಿಂದ ಮನಸ್ಸಿಗೆ ಮುಳ್ಳು ಮುರಿದಂತಾದರೂ, ಅದನ್ನು ತೋರ ಗೊಡದೆ—

"ಹೂ ಅದನ್ನೆಲ್ಲಾ ನಾನೂ ಯೋಚನೆ ಮಾಡಿಯೇ, ಬೆಂಗಳೂರಿನಲ್ಲೇ ಓದಲಿ ಎಂದು ನಿಶ್ಚಯಿಸಿದೆ. ಪರಸ್ಥಳದಲ್ಲಿ ಹುಡುಗನಿಗೇನಾದರೂ ಅನುವು ಆಪತ್ತು ಆದರೆ, ಇನ್ನೇನಿಲ್ಲವಾದರೆ ಹೋಗಲಿ ಹೀಗಾಗಿದೆ ಅಂತ ಕಾಗದ ಹಾಕುವುದಕ್ಕಾದರೂ ನಮ್ಮವರು ಅಂತ ಇರುತ್ತಾರಲ್ಲ ಅನ್ನೋದೆ ನನಗೂ ದೊಡ್ಡ ಸಮಾಧಾನ – ಅಷ್ಟೇ ಅಲ್ಲ ಶೀನಣ್ಣ–ನಿನ್ನಿಂದ ಇನ್ನೊಂದು ಕೆಲಸ ಆಗಬೇಕಾಗಿದೆ"

—ಎಂದರು ಶ್ರೀನಿವಾಸಶೆಟ್ಟರ ಮಾತಿಗೆ ಮಾತು ಮುಟ್ಟಿಸಿ, ಲೆಕ್ಕ ಬಗೆಹರಿಸಿ ಚಿನ್ನಸ್ವಾಮಿಶೆಟ್ಟರು. ಅವರ ಮಾತಿನ ನಯಗಾರಿಕೆ ಶ್ರೀನಿವಾಸ ಶೆಟ್ಟರಿಗೂ ಮನವರಿಕೆಯಾಗಿ, ಅವರೂ ಅದನ್ನು ತೋರಿಸಿಕೊಳ್ಳದೆ—

"ನೆಂಟರು ಇಷ್ಟರು ಅಂದರೆ ಅಷ್ಟನ್ನಾದರೂ ಮಾಡದಿದ್ದರೆ ಹೇಗೆ ಹೇಳು ಭಾವಯ್ಯ. ನಾವು ಇರೋದೇ ಅದಕ್ಕೆ ತಾನೇ, ಅದಾಯಿತಲ್ಲ, ಇನ್ನೇನಾಗ

ಬೇಕು ಹೇಳು."

—ಎಂದರು ರಾಜಶೇಖರನ ವಸತಿ, ಊಟದ ಪ್ರಶ್ನೆ ಮತ್ತೆ ಏಳದಂತೆ ಬೀಗಮುದ್ರೆ ಮಾಡಿ.

ಅವರ ಪ್ರಶ್ನೆಗೆ ಉತ್ತರವಾಗಿ ಚಿನ್ನಸ್ವಾಮಿಶೆಟ್ಟರು, ಚಿಂತಾಮಣಿಯಲ್ಲಿ ರಾಜಶೇಖರನ ಭವಿಷ್ಯದ ಬಗ್ಗೆ ತಮಗೂ ನರಸಿಂಗರಾಯರಿಗೂ ನಡೆದ ಚರ್ಚೆಯನ್ನೆಲ್ಲಾ ವಿವರಿಸಿ—

"ನಾನಂತೂ ಹಳ್ಳಿಗಾಡು ಸೇರಿಬಿಟ್ಟೆ. ಕಾಲೇಜಿನ ವಿಷಯ ನನಗೇನೂ ತಿಳಿಯದು. ಅಲ್ಲಿ ನಿನಗೆ ಯಾರಾದರೂ ಗೊತ್ತಿದ್ದರೆ, ರಾಜಶೇಖರನ ವಿಷಯ ಅವರಿಗೆ ಒಂದು ಮಾತು ಹೇಳಬೇಕು."

—ಎಂದರು.

"ಅಷ್ಟೇ ತಾನೇ. ಇಂಟರ್‌ಮೀಡಿಯೆಟ್ ಕಾಲೇಜ್‌ನಲ್ಲಿ ನಮ್ಮೋರೇ ಒಬ್ಬರು ಇದಾರೇಂತ ಕೇಳಿದೀನಿ. ಯಾರೂ ಅಂತ ಗೊತ್ತಿಲ್ಲ. ನಾಳೆ ನಮ್ಮ ಗುಮಾಸ್ತೆ ನಾರಣಪ್ಪನ್ನ ವಿಚಾರಿಸು ಅಂತ ಹೇಳ್ತೀನಿ. ಯಾರೂ ಅಂತ ತಿಳಿದುಕೊಂಡು ಹೋಗಿ ನೋಡಿದರಾಯಿತು.

"ಹಾಗಂತ ಅಂದು, ನಾಳೆ ನಿನ್ನ ಕೆಲಸದಲ್ಲಿ ಇದನ್ನು ಮರೆತು, ನನ್ನ ಇಲ್ಲಿ ಮತ್ತೆ ಕೊಳೆಹಾಕಬೇಡ ಮಹರಾಯ. ಅಂಗಡೀನ ಆಳಿನ ಮೇಲೆ ಬಿಟ್ಟು ಬಂದಿದೀನಿ. ಶುದ್ಧ ಹೆಗ್ಗಣ ಅವನು. ಒಂದು ಗಳಿಗೆ ಕಣ್ಣುಮರೆ ಆದರೆ ಕೊಬ್ಬರಿ ಕಲ್ಲುಸಕ್ಕರೆ ಮುಗಿಸಿಬಿಡ್ತಾನೆ. ಈಗಂತೂ ಮೂರು ದಿನ ಆಯ್ತು ಈಗ ಹೋಗಿ ಬರೀ ಡಬ್ಬದ ಧೂಳು ಹೊಡೀಬೇಕೋ ಏನೋ."

"ನನಗೆ ಗೊತ್ತಿಲ್ಲವೇ ಅದು. ನಿನಗಿರೋಷ್ಟು ಆತುರ ನನಗಿಲ್ಲವೇ ? ನಾಳೇನೇ ವಿಚಾರಿಸಿ ಹೇಳ್ತೀನೆ. ನೀನೇನೂ ಚಿಂತೆ ಮಾಡಬೇಡ ಭಾವಯ್ಯ."

—ಎಂದರು ಶ್ರೀನಿವಾಸಶೆಟ್ಟರು, ಆ ರಾತ್ರಿಗೆ ಮಾತು ಮುಗಿಸಿ.

ಚಿನ್ನಸ್ವಾಮಿಶೆಟ್ಟರ ಅಂಗಡಿಯ ಆತುರ ಮನಸ್ಸಿಗೆ ತಟ್ಟಿಯೋ, ಅಥವಾ ಅವನು ಮೂರು ದಿನ ಇದ್ದುದೇ ಸಾಕು ಎಂದುಕೊಂಡೋ—ಯಾವ ಕಾರಣಕ್ಕಾಗಿಯೋ ಅಂತೂ, ಶ್ರೀನಿವಾಸಶೆಟ್ಟರು, ಆ ರಾತ್ರಿ ಚಿನ್ನಸ್ವಾಮಿಶೆಟ್ಟರಿಗೆ ಕೊಟ್ಟ ಮಾತನ್ನು ಮಾರನೆಯ ದಿನ ಮರೆಯಲಿಲ್ಲ. ಅಂಗಡಿಗೆ ಬರುತ್ತಿದ್ದ ಹಾಗೇ ತಮ್ಮ ಗುಮಾಸ್ತ ನಾರಣಪ್ಪನನ್ನು ಕಾಲೇಜಿನ ಬಳಿಗೆ ಅಟ್ಟಿ, ಇಂಟರ್ ಮೀಡಿಯಟ್ ಕಾಲೇಜಿನಲ್ಲಿ ಉಪಾಧ್ಯಾಯರಾಗಿದ್ದ ನಾಗರಾಜಶೆಟ್ಟರ ವಿಳಾಸ ಪತ್ತೆಮಾಡಿಸಿ ತರಿಸಿ, ಮಧ್ಯಾಹ್ನ ಊಟಕ್ಕೆ ಹೋದಾಗ ಆ ವಿಷಯವನ್ನು ಚಿನ್ನಸ್ವಾಮಿಶೆಟ್ಟರಿಗೆ ತಿಳಿಸಿದರು.

ನಾಗರಾಜ ಶೆಟ್ಟರನ್ನು ನೋಡಲು ಮರುದಿನದವರೆಗೂ ಕಾಯದೆ, ಚಿನ್ನ ಸ್ವಾಮಿಶೆಟ್ಟರು, ರಾಜಶೇಖರನನ್ನೂ ತಮ್ಮೊಂದಿಗೆ ಕರೆದುಕೊಂಡು, ಆಗಲೇ ಮಲ್ಲೇಶ್ವರದಲ್ಲಿದ್ದ ನಾಗರಾಜಶೆಟ್ಟರನ್ನು ಕಾಣಲು ಹೊರಟರು.

೪

ನಾಗರಾಜಶೆಟ್ಟರು ತಮ್ಮನ್ನು ಹೇಗೆ ಕಾಣುವರೋ, ಅವರೊಂದಿಗೆ ಹೇಗೆ ವಿಷಯ ಪ್ರಸ್ತಾಪ ಮಾಡುವುದೋ ಎಂದು ಅಂಜುತ್ತಿದ್ದ ಚಿನ್ನಸ್ವಾಮಿ ಶೆಟ್ಟರಿಗೆ, ಒಮ್ಮೆ ಅವರನ್ನು ಕಂಡ ಬಳಿಕ ಅಂಜಿಕೆ ಅಗತ್ಯವಿಲ್ಲವೆಂದು ತೋರಿತು. ಇವರ ಕೂಗು ಕೇಳಿ ಹೊರಗೆ ಬಂದ ನಾಗರಾಜ ಶೆಟ್ಟರು ಮುಖ ಸಿಂಡರಿಸಿ ಕೊಂಡೇ 'ಏನಾಗಬೇಕು ?' ಎಂದು ಮೇಲೆ ಬೀಳುವ ಧ್ವನಿಯಲ್ಲೇ ಕೇಳಿ ಕೊಂಡು ಬಂದರೂ, ಚಿನ್ನಸ್ವಾಮಿ ಶೆಟ್ಟರ ಮುಖ ನೋಡಿದ ಬಳಿಕ, ಅವರ ಮುಖದ ಬಿಗಿ ಕಡಿಮೆಯಾಗಿ, ಕೊಂಚ ಪ್ರಸನ್ನತೆ ಮೂಡಿ, ವರಾಂಡಾದಲ್ಲಿದ್ದ ಕುರ್ಚಿಯಲ್ಲಿ ಅವರನ್ನು ಕೂಡಲು ಹೇಳಿ 'ಯಾವ ಊರು, ಏನಾಗಬೇಕು ?' ಎಂದು ವಿಚಾರಿಸಿದರು. ಯಾವ ರೀತಿ ಹೇಳಿದರೆ, ಅದರ ಪರಿಣಾಮ ಹೇಗೋ ಎಂದು ಚಿನ್ನಸ್ವಾಮಿಶೆಟ್ಟರು, ತಾವು ಅಲ್ಲಿಗೆ ಬಂದ ಕಾರಣ ವಿವರಿಸಿ—

" ಏನೋ ನಮ್ಮ ಜನವೇ ಎಂದು ತಿಳಿಯಿತು. ಅದಕ್ಕಾಗಿ ಇಷ್ಟು ಸಲಿಗೆ ವಹಿಸಿಕೊಂಡು ಬಂದು ತೊಂದರೆ ಕೊಟ್ಟೆ. ಕ್ಷಮಿಸಿ, ಹುಡುಗನನ್ನು ಮುಂದಕ್ಕೆ ತರಬೇಕು "

—ಎಂದು ಕೇಳಿಕೊಂಡರು. ಆ ಮಾತು ಆಡಿಯಾದ ಮೇಲೂ ಅವರು ಏನು ಹೇಳವರೋ ಎಂಬ ಭೀತಿ ಇವರನ್ನು ಬಾಧಿಸುತ್ತಿತ್ತು. ಆದರೆ ನಾಗರಾಜ ಶೆಟ್ಟರು ಕೂಡಲೇ ಆ ಭೀತಿಯನ್ನು ನಿವಾರಿಸಿ—

" ನೀವೇನೂ ಚಿಂತೆ ಇಟ್ಟುಕೊಳ್ಳಬೇಡಿ ನನ್ನಿಂದ ಆದ ಸಹಾಯ ಮಾಡುತ್ತೇನೆ "

—ಎಂದರು. ಅಷ್ಟು ಅನಿರೀಕ್ಷಿತವಾಗಿ, ಸುಲಭವಾಗಿ ಅವರು ತಮ್ಮ ಕೆಲಸ ಮಾಡಿಕೊಡಲು ಒಪ್ಪಿದ್ದನ್ನು ಕಂಡು ಚಿನ್ನಸ್ವಾಮಿಶೆಟ್ಟರಿಗೆ ಸಂತೋಷ ದೊಂದಿಗೆ ಆಶ್ಚರ್ಯವೂ ಆಯಿತು. ಆ ಮಿಶ್ರ ಭಾವನೆಯಲ್ಲೇ—

" ಏನೋ ನಮ್ಮ ಪಾಲಿನ ದೇವರು ದೊಡ್ಡವನಿದ್ದ. ಎಂತಲೇ ನಿಮ್ಮ ಮನೆ ಬಾಗಿಲು ತೋರಿಸಿದ. ನಮ್ಮ ಹುಡುಗನ ಕೆಲಸ ಮಾಡಿಕೊಟ್ಟರೆ, ನಿಮ್ಮ ಉಪಕಾರ ಈ ಘಟ ಇರುವವರೆಗೂ ಮರೆಯುವುದಿಲ್ಲ "

—ಎಂದರು.

" ಇದರಲ್ಲಿ ಉಪಕಾರವೇನು ಬಂತು. ನಮ್ಮ ಜಾತಿಯ ಜನ ಅಂದ ಮೇಲೆ, ನಮ್ಮ ಕೈಲಾದಷ್ಟು ಅವರಿಗೆ ಸಹಾಯ ಮಾಡುವುದು ನಮ್ಮ ಕರ್ತವ್ಯ ಆದರೇನು ಮಾಡೋದು ? ನಾನೆಷ್ಟು ಸಹಾಯ ಮಾಡಬೇಕೆಂದರೂ ನಮ್ಮವರೇ ಮುಂದೆ ಬರೋದಿಲ್ಲ. ಅದೇ ನನಗೆ ದೊಡ್ಡ ದುಃಖ "

" ಉಂಟೆ ? ತಮ್ಮಂಥೋರ ಆಶ್ರಯ ಸಿಗೋದಕ್ಕೆ ಹತ್ತು ಹತ್ತು ಜನ್ಮದ ಪುಣ್ಯ ಪಡೆದಿರಬೇಕು. ಇನ್ನು ತಾವೇ ಉಪಕಾರ ಮಾಡ್ತೀನಿ ಅಂತ ಮುಂದೆ ಬಂದಾಗ ಬೇಡ ಅಂದವರುಂಟೆ ? "

" ನಿಮಗೆ ಗೊತ್ತಿಲ್ಲ ಶೆಟ್ಟರೆ. ಕಾಲ ಎಷ್ಟು ಬೇಗ ಬದಲಾಯಿಸುತ್ತಿದೆ, ಅದಕ್ಕೆ ಹೇಗೆ ಹೊಂದಿಕೊಳ್ಳಬೇಕು ಎನ್ನುವ ಬುದ್ಧಿ ಇನ್ನೂ ನಮ್ಮ ಜನಕ್ಕೆ ಬಂದಿಲ್ಲ. ಇನ್ನೂ ಕಂದಾಚಾರದ ಸಂಪ್ರದಾಯಗಳಿಗೇ ಉರುಲು ಹಾಕಿಕೊಂಡು ಸಾಯ್ತಾ ಇದಾರೆ. ವೈಶ್ಯರಾಗಿ ಹುಟ್ಟಿದ ಮಾತ್ರಕ್ಕೆ, ಈ ಜಾತಿಯಲ್ಲಿ ಹುಟ್ಟಿದವ ರೆಲ್ಲರೂ ತಕ್ಕಡಿ ಹಿಡಿದೇ ಸಾಯಬೇಕೇ ? ಜೀವನದ ಬೇರೆ ಬೇರೆ ರಂಗಗಳಲ್ಲೂ ವ್ಯಾಪಿಸಬೇಡವೇ ? ನಾನೂ ಎಷ್ಟೋ ಜನ ನಮ್ಮವರಿಗೆ ಈ ಮಾತು ಹೇಳಿ ನೋಡಿದೆ. ಆದರದು ಪತ್ಯವಾಗಲಿಲ್ಲ. ಅಂಥವರಿಗೆ ಏನು ಹೇಳಿ ತಾನೇ ಏನು ಸಾರ್ಥಕ ಹೇಳಿ."

—ಒಳಗೆ ಉಕ್ಕುತ್ತಿದ್ದ ಯಾವುದೋ ಆಕ್ರೋಶದ ಕುದಿಯನ್ನು ಹತ್ತಿಕ್ಕ ಲಾರದೆ ಹೇಳಿದರು ನಾಗರಾಜಶೆಟ್ಟರು,

" ನೀವಾಡೋ ಮಾತು ಸಾವಿರ ಸಾವಿರ ಬಾರಿ ಸತ್ಯ. ಅದಕ್ಕೇ ನಾನೂ ನಮ್ಮ ಹುಡುಗನ್ನ ಮುಂದಕ್ಕೆ ಓದಿಸಿ, ಎಲ್ಲಾದರೂ ಸರಕಾರೀಕೆಲಸಕ್ಕೆ ಸೇರಿಸ ಬೇಕು ಅಂತ ಬಂದಿರೋದು."

" ನೂರರಲ್ಲಿ ಒಬ್ಬರಿಗಾದರೂ ಇಷ್ಟು ಬುದ್ಧಿ ಬರೋದು ನಿಜಕ್ಕೂ ಸಂತೋಷದ ಸಂಗತಿ. ಕೆಲವರಿಗಾದರೂ ಈ ಬುದ್ಧಿ ಬಂದರೆ ಎಷ್ಟೋ ಕೆಲಸ ಸಾಧಿಸಬಹುದು ನೀವು ನನ್ನ ಮಾತು ಕೇಳಿದರೆ, ನಿಮ್ಮ ಹುಡುಗನನ್ನು ಮುಂದಕ್ಕೆ ತರೋ ಜವಾಬ್ದಾರಿ ನನಗಿರಲಿ. ನಿಮ್ಮ ಹುಡುಗನೂ ಅಷ್ಟೇ."

ಆ ವಿಚಾರ ಬಿಡಿ ಸ್ವಾಮಿ. ನಾನಾಗಲಿ ನಮ್ಮ ಹುಡುಗನಾಗಲಿ ನೀವು ಹಾಕಿದ ಗೆರೆ ದಾಟುವುದಿಲ್ಲ, ಮೇಷ್ಟ್ರು ಹೇಳಿದ್ದನ್ನು ಕೇಳಿದೆಯೇನೋ ರಾಜ ಶೇಖರ ? ಅವರು ಹೇಳಿದ ಹಾಗೆ ಕೇಳಿಕೊಂಡಿರಬೇಕು."

—ಎಂದರು ಚಿನ್ನಸ್ವಾಮಿಶೆಟ್ಟರು, ಮೂಕನಂತೆ ಅವರ ಮಾತನ್ನು ಆಲಿಸುತ್ತಾ ಕುಳಿತಿದ್ದ ರಾಜಶೇಖರನತ್ತ ತಿರುಗಿ. ರಾಜಶೇಖರ ಆ ಪ್ರಶ್ನೆಗೆ ಬೇರೇನೂ ಮಾತಿನ ಉತ್ತರ ಹೇಳದೆ ತಲೆಯಲ್ಲಾಡಿಸಿ, ಅವರ ಮಾತಿಗೆ ತನ್ನ

ಸಮ್ಮತಿಯನ್ನು ಸೂಚಿಸಿದ. ನಾಗರಾಜಶೆಟ್ಟರು, ಆಗಲೇ ಮೊದಲ ಬಾರಿಗೆ ರಾಜಶೇಖರನನ್ನು ನೋಡಿದವರಂತೆ, ಅವನತ್ತ ತಿರುಗಿ—

" ಆಗಲೇ ಅಪ್ಲಿಕೇಷನ್ ಹಾಕಿದ್ದಾಯಿತೇನು ? "

—ಎಂದರು.

" ಇನ್ನೂ ಇಲ್ಲ. ತಮ್ಮನ್ನು ಕಂಡು, ಮನಸ್ಸಿಗೆ ಖಚಿತ ಮಾಡಿಕೊಂಡು ಆಮೇಲೆ ಅಪ್ಲಿಕೇಷನ್ ಹಾಕಿಕೊಳ್ಳುವುದು ಅಂತ, ಮೊದಲು ತಮ್ಮನ್ನು ಕಾಣಲು ಬಂದೆವು "

—ಎಂದು ರಾಜಶೇಖರನ ಬದಲು ಚಿನ್ನಸ್ವಾಮಿಶೆಟ್ಟರೇ ಉತ್ತರ ಕೊಟ್ಟರು.

" ಸರಿ ಹಾಗಾದರೆ–ಅಪ್ಲಿಕೇಷನ್ ಹಾಕಿಕೋ. ಹಾಗೇ ಅದರಲ್ಲಿ ಸಿ. ಬಿ. ಜೆಡ್ ಕಾಂಬಿನೇಷನ್ ಬೇಕು ಅಂತ ಕೇಳು. ಮುಂದಿನ ಜವಾಬ್ದಾರಿ ನನಗಿರಲಿ. ಅಪ್ಲಿಕೇಷನ್ ಕೊಟ್ಟಮೇಲೆ ಬಂದು ಒಂದು ಸಲ ನನಗೆ ನೆನಪು ಮಾಡು. ಈಗ ಹುಡುಗನನ್ನು ಎಲ್ಲಿ ಬಿಡುತ್ತೀರಿ ? "

" ಎಲ್ಲಿ ಅನ್ನೋದು ಇನ್ನೂ ಯೋಚನೆ ಮಾಡಿಲ್ಲ. ಸೀಟು ಸಿಕ್ಕಿದಮೇಲೆ ಮುಂದಿನ ಮಾತು. ಅದೆಲ್ಲಾ ಅನುಕೂಲವಾದರೆ ನಮ್ಮವರ ಹಾಸ್ಟಲಿನಲ್ಲೇ ಇಡೋದು ಅಂದುಕೊಂಡಿದೀನಿ."

" ಹಾಸ್ಟಲಿನಲ್ಲಿಟ್ಟು ಓದಿಸಲು ತುಂಬಾ ಖರ್ಚು ಬರುವುದಿಲ್ಲವೇ " ?

" ಆಗುತ್ತದೆ. ಆದರೇನು ಮಾಡುವುದು ? "

" ಏಕೆ ? ಇಲ್ಲಿ ನಿಮ್ಮವರು ಯಾರೂ ಇಲ್ಲವೇ ? "

" ಇದಾರೆ. ಆದರೆ ನಮ್ಮ ಕಷ್ಟ ಅವರ ಹೆಗಲಮೇಲೆ ಹೊರಿಸೋದು ಹೇಗೆ ? ಏನೋ ನಮ್ಮ ಕಷ್ಟವೋ, ನಿಷ್ಠುರವೋ ನಮಗೇ ಇರಲಿ."

" ಅದೂ ಸರಿಯಾದ ಮಾತೇ ಅನ್ನಿ. ಆ ವಿಷಯದಲ್ಲಿ ನಿಮಗೆ ಹೇಗೆ ಅನುಕೂಲ ತೋರುತ್ತದೋ ಹಾಗೆ ಮಾಡಿ."

" ಏನೋ ದೇವರಿಟ್ಟದ್ದಾಗುತ್ತದೆ. ಆದರೆ ತಾವು ಮಾತ್ರ ಹುಡುಗನನ್ನು ನಿಮ್ಮ ಹೊಟ್ಟೆಯಲ್ಲಿಟ್ಟುಕೊಂಡು ಕಾಪಾಡಬೇಕು."

" ಹುಡುಗ ನಾನು ಹೇಳಿದಹಾಗೆ ಕೇಳಿದರೆ ಸರಿ. ಉಳಿದ ಜವಾಬ್ದಾರಿ ನನಗಿರಲಿ ಎಂದು ಆಗಲೇ ಹೇಳಿದೆನಲ್ಲ."

" ಹಾಲಲ್ಲಾದರೂ ಹಾಕಿ, ನೀರಲ್ಲಾದರೂ ಹಾಕಿ, ನಮ್ಮ ಹುಡುಗನಿಗೆ ನೀವೇ ದಿಕ್ಕು."

—ಎಂದರು ಚಿನ್ನಸ್ವಾಮಿಶೆಟ್ಟರು, ತಮ್ಮೆಲ್ಲ ಜವಾಬ್ದಾರಿಯನ್ನು ನಾಗ

ರಾಜಶೆಟ್ಟರಿಗೆ ಒಪ್ಪಿಸಿ. ನಾಗರಾಜಶೆಟ್ಟರೂ ಸಂತೋಷವಾಗಿಯೇ ಆ ಜವಾಬ್ದಾರಿಯನ್ನು ಒಪ್ಪಿಕೊಂಡರು. ಅವರು ನೀಡಿದ ಭರವಸೆಯಿಂದಾದ ಸಂತೋಷದಲ್ಲಿ, ರಾಜಶೇಖರನನ್ನು ಅವರ ಕಾಲಿಗೆ ಅಡ್ಡಬೀಳಿಸಿ, ಬಂದ ಕೆಲಸವನ್ನು ನೆರವೇರಿಸಿಕೊಂಡ ಸಂತೋಷದಿಂದ ಚೆನ್ನಸ್ವಾಮಿಶೆಟ್ಟರು, ರಾಜಶೇಖರನ ಊಟ, ವಸತಿಗೆ ಆರ್ಯವೈಶ್ಯ ಹಾಸ್ಟೆಲಿನಲ್ಲಿ ಏರ್ಪಾಡು ಮಾಡಿ, ಚಿಂತಾಮಣಿಗೆ ಹಿಂದಿರುಗಿದರು.

ಅಂದಿನಿಂದ ರಾಜಶೇಖರ ಇಂಟರ್ ಕಾಲೇಜಿನ ವಿದ್ಯಾರ್ಥಿಯಾದ, ಅಲ್ಲಿ ನಾಗರಾಜಶೆಟ್ಟರ ಶಿಷ್ಯನಾದ.

ನಾಗರಾಜಶೆಟ್ಟರು ರಾಜಶೇಖರನ ವಿಷಯದಲ್ಲಿ ಅಷ್ಟು ಆಸಕ್ತಿ ವಹಿಸಲು ಕಾರಣವಿಲ್ಲದೆ ಇರಲಿಲ್ಲ.

ನಾಗರಾಜಶೆಟ್ಟರು ಇಂಟರ್‌ಮೀಡಿಯಟ್ ಕಾಲೇಜಿನ ಜೂಆಲಜಿ ವಿಷಯದ ಅಧ್ಯಾಪಕರು. ಅವರು ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದಾಗ ಅವರಿಗೊಂದು ಅನ್ಯಾಯವಾಗಿ, ಆ ಆಘಾತ ಅವರ ಮನಸ್ಸಿನ ಮೇಲೆ ಬಹು ಕಟುವಾದ ಪರಿಣಾಮವನ್ನುಂಟುಮಾಡಿತ್ತು.

ಅವರು ಬಡಕುಟುಂಬದವರು. ಜೀವನದಲ್ಲಿ ಬೇರೆ ದಾರಿಯೇ ಇಲ್ಲದೆ, ಸರಕಾರೀ ಚಾಕರಿಯನ್ನೇ ನೆಚ್ಚಿಕೊಂಡು, ಅದಕ್ಕೆ ಸಾಧನವೆಂದು ವಿದ್ಯಾಭ್ಯಾಸಮಾಡಲು ಬಂದಿದ್ದರು. ಚಿಕ್ಕಂದಿನಲ್ಲಿಯೇ ಜೀವನದ ಹೊಣೆಗಾರಿಕೆ ಅವರಿಗೆ ಅರಿವಾಗಿದ್ದುದರಿಂದ ವಿದ್ಯಾಭ್ಯಾಸವನ್ನು ಲಕ್ಷ್ಯಗೊಟ್ಟು ಮಾಡುತ್ತಿದ್ದರು. ಅವರ ಅಭ್ಯಾಸ ತತ್ಪರತೆ, ಕುಶಾಗ್ರಮತಿಯನ್ನು ಅರಿತವರೆಲ್ಲರೂ ಅವರಿಗೆ ಬಿ.ಎಸ್‌ಸಿ ಯಲ್ಲಿ 'ಸಬ್ಜೆಕ್ಟ್ ಸ್ಕಾಲರ್‌ಷಿಪ್' ದೊರೆಯುವುದು ಖಂಡಿತ ಎಂದುಕೊಂಡಿದ್ದರು. ಇವರೂ ಅದನ್ನು ದೃಷ್ಟಿಯಲ್ಲಿಟ್ಟುಕೊಂಡೇ ಕಷ್ಟಪಟ್ಟು ಅಭ್ಯಾಸ ಮಾಡುತ್ತಿದ್ದರು. ಆದರೆ ಪ್ರೊಫೆಸರರ ಸ್ವಜಾತಿ ಅಭಿಮಾನದಿಂದ, ಅದು ನಾಗರಾಜಶೆಟ್ಟರಿಗೆ ತಪ್ಪಿ ಬೇರೆಯವರ ಪಾಲಾದುದಷ್ಟೇ ಅಲ್ಲ, ಅದೇ ಅನ್ಯಾಯವೇ ಮುಂದುವರಿದು ಇವರು ಬಿ.ಎಸ್‌ಸಿ. ಯಲ್ಲಿ ಎರಡನೆ ದರ್ಜೆಯಲ್ಲಿ ತೇರ್ಗಡೆಯಾಗಲು ಕಾರಣವಾಯಿತು. ಅದರಿಂದಾಗಿಯೇ ಅವರು ಒಂದು ವರ್ಷ ನೌಕರಿ ಸಿಗದೆ ಬಾಳಿನ ಬೇಗುದಿಯನ್ನು ಅನುಭವಿಸಬೇಕಾಗಿ ಬಂದಿತ್ತು. ಪ್ರೊಫೆಸರರ ಸ್ವಜಾತಿ ವಾತ್ಸಲ್ಯದಿಂದ ಈ ಅನ್ಯಾಯ ಇವರ ಹೃದಯದ ಮೇಲೆ ಉಗ್ರ ಪರಿಣಾಮವನ್ನುಂಟುಮಾಡಿ, ಪ್ರತೀಕಾರ ತೃಷೆಯನ್ನು ಹೊತ್ತಿಸಿತ್ತು.

ಆ ಪ್ರತೀಕಾರ ತೃಷೆಯೇ ಅವರು ರಾಜಶೇಖರನ ಮೇಲೆ ವಿನಾ ಕಾರಣ

ವಿಶೇಷ ಅಭಿಮಾನ ವ್ಯಕ್ತ ಪಡಿಸಲು ಕಾರಣವಾಗಿತ್ತು. ತಮಗೆ ಅನ್ಯಾಯ ಬಗೆದ ಜಾತಿಯವರ ಮೇಲೆ ಪ್ರತೀಕಾರ ತೀರಿಸಲು ರಾಜಶೇಖರನನ್ನು ಒಂದು ಅಸ್ತ್ರವಾಗಿ ಮಾಡಿಕೊಂಡರು ನಾಗರಾಜಶೆಟ್ಟರು. ರಾಜಶೇಖರ ಅವರ ಅಭಿಮಾನದ ವಿದ್ಯಾರ್ಥಿ ಎಂದು ಉಳಿದವರಿಗೂ ತಿಳಿಯಲು ಬಹು ಕಾಲ ಬೇಕಾಗಲಿಲ್ಲ. ಪಿ ಸಿ. ಎಂ. ಬಯಸಿ ಬಂದ ರಾಜಶೇಖರನನ್ನು ಬೇಕೆಂದೇ ತಾವು ಕಾಲೇಜಿನಲ್ಲಿ ಬೋಧಿಸುತ್ತಿದ್ದ ಜೂಆಲಜಿಯ ವಿದ್ಯಾರ್ಥಿಯನ್ನಾಗಿ ಮಾಡಿಕೊಂಡ ಶೆಟ್ಟರು, ಅವನ ಶಿಕ್ಷಣದಲ್ಲಿ ಅತ್ಯಂತ ಆಸಕ್ತಿ ವಹಿಸಿದರು. ಹಾಗೇ ನಯವಾದ ರೀತಿಯಲ್ಲಿ ತಮ್ಮ ದ್ವೇಶವನ್ನು ರಾಜಶೇಖರನ ಎದೆಯಲ್ಲೂ ಬಿತ್ತ ತೊಡಗಿದರು ಮಾತು, ರೀತಿಯಲ್ಲಿ ತಮ್ಮ ಒಲವು, ಪಕ್ಷಪಾತ ಎತ್ತ ಕಡೆಗಿದೆ ಎಂಬುದನ್ನು ಅವನಿಗೆ ಸೂಚಿಸಿದುದೇ ಅಲ್ಲದೇ ಅವನ ಬುದ್ಧಿಯೂ ಆ ಮಾರ್ಗದಲ್ಲಿಯೇ ಬೆಳೆಯಬೇಕೆಂಬುದೇ ತಮ್ಮ ಅಭಿಲಾಷೆ ಎಂಬುದನ್ನು ಸೂಚ್ಯವಾಗಿ ಅರಿವು ಮಾಡಿಕೊಡತೊಡಗಿದರು. ಜೂನಿಯರ್ ತರಗತಿಯ ವಾರ್ಷಿಕ ಪರೀಕ್ಷೆ ಮುಗಿದ ಬಳಿಕ ಒಂದು ದಿನ ನಾಗರಾಜಶೆಟ್ಟರು ಪ್ರಕಟವಾಗಿಯೇ ಆ ಮಾತನ್ನು ರಾಜಶೇಖರನಿಗೆ ಹೇಳುವ ಪ್ರಸಂಗವೂ ಬಂದಿತು—ರಾಜಶೇಖರ ತನ್ನ ಸಹಪಾಠಿ ಶ್ರೀಧರಮೂರ್ತಿಯ ಪರವಾಗಿ ರಾಯಭಾರ ಹೊತ್ತು ಶೆಟ್ಟರ ಬಳಿ ಬಂದಾಗ,

೫

ಬೆಂಗಳೂರಿನಲ್ಲಿಯ ಒಂದು ವರ್ಷದ ವಿದ್ಯಾರ್ಥಿ ಜೀವನದಲ್ಲಿ, ಕಾಲೇಜು ಹಾಸ್ಟಲಿನಲ್ಲಿ ಅವನ ಸುತ್ತ ಓಡಾಡುತ್ತಿದ್ದ ನೂರಾರು ಜನ ವಿದ್ಯಾರ್ಥಿಗಳಲ್ಲಿ, ರಾಜಶೇಖರನಿಗೆ ಆಪ್ತಮಿತ್ರನಾಗಿದ್ದವನು ಶ್ರೀಧರನೊಬ್ಬನೇ

ಚಿಂತಾಮಣಿಯ ಕೆರೆಯಿಂದ ಬೆಂಗಳೂರಿನ ಮಹಾ ಸಾಗರಕ್ಕೆ ಧುಮ್ಮಿಕಿದ ರಾಜಶೇಖರನಿಗೆ ಮೊದಲಷ್ಟು ದಿನ ಉಸಿರು ಕಟ್ಟಿದಂತಾಗಿತ್ತು. ಏನೋ ಸಂಕೋಚ, ಯಾವುದೋ ಭೀತಿ, ಅವನು ಯಾರೊಂದಿಗೂ ಹೆಚ್ಚಾಗಿ ಬೆರೆಯದಂತೆ ಮಾಡಿತ್ತು. ಬೆಂಗಳೂರಿಗೆ ಬಂದ ಮೇಲೆ ರಾಜಶೇಖರನೂ ಪಟ್ಟಣವಾಸವ್ಕೆ ಉಂಡ ಹುಡುಗರಂತೆಯೇ ಬಟ್ಟೆ ಬರೆ ಧರಿಸುತ್ತಿದ್ದರೂ, ಅವರು ಓಡಾಡುವ ವಾತಾವರಣದಲ್ಲಿಯೇ ಓಡಾಡುತ್ತಿದ್ದರೂ, ಅವನನ್ನು ನೋಡಿದ ಕೂಡಲೇ ಇವನು ಇದಕ್ಕೆಲ್ಲಾ ಪಳಗಿದವನಲ್ಲ ಎಂಬುದು ಕೂಡಲೇ ಗೊತ್ತಾಗುವಂತಿತ್ತು. ನೀರಿನಿಂದ ತೆಗೆದು ಕೆಳಗೆ ಒಗೆದ ಮೀನಿನಂತಿದ್ದ ರಾಜಶೇಖರ. ಅದರಿಂದಾಗಿಯೇ ಯಾರೊಂದಿಗೂ ಹೆಚ್ಚು ಬೆರೆಯುತ್ತಿರಲಿಲ್ಲ. ತನ್ನ ಪಾಡಿಗೆ ತಾನಿದ್ದ.

ಆದರೆ ಉಳಿದವರು ಹಾಗಿರಬೇಕಲ್ಲ. ಅಷ್ಟು ದಿನ ಸುಮ್ಮನಿದ್ದ ಹುಡುಗರು, ಕೆಲ ದಿನ ಕಳೆದ ಬಳಿಕ, ರಾಜಶೇಖರನ ಸಂಕೋಚ, ಅವನ ರೀತಿ ನೀತಿಯಲ್ಲಿ ಅಸ್ಪಷ್ಟವಾಗಿ ವ್ಯಕ್ತವಾಗುತ್ತಿದ್ದ ಭೀತಿಯನ್ನು ಕಂಡುಕೊಂಡು, ಕ್ರಮೇಣ ಅವನನ್ನು ಛಿಡಾಯಿಸ ತೊಡಗಿದರು. ಅವನ ಸುತ್ತಮುತ್ತ ಕುಹಕ ನಗೆ, ಪಿಸುಮಾತುಗಳ ಬಾಣಗಳು ಹಾರ ತೊಡಗಿದವು. 'ಷೈಲಾಕ್', 'ಪಾಕಂಪೊಪ್ಪು' ಮೊದಲಾದ ಅಡ್ಡ ಹೆಸರುಗಳು ಅವನ ಕಿವಿಗೆ ಬೀಳ ತೊಡಗಿದವು. ಇವೆಲ್ಲದರಿಂದ ರಾಜಶೇಖರನ ಹೊಸ ವಾತಾವರಣದ ಭೀತಿ ನಿವಾರಣೆಯಾಗಿ ಅವನು ಹೆಚ್ಚು ಹೆಚ್ಚಾಗಿ ವಿದ್ಯಾರ್ಥಿಗಳೊಂದಿಗೆ ಬೆರೆಯಲಾಗದೆ, ಮತ್ತಷ್ಟು ದೂರವಾಗಲು, ಯಾವುದೋ ತನ್ನದೇ ಆದ ಮಾನಸಿಕ ಮೂಲೆಯಲ್ಲಿ ಹುದುಗಿ ಕೊಳ್ಳಲು ಕಾರಣವಾದವು. ಆ ಅಡ್ಡ ಹೆಸರು, ಕುಹಕನಗು, ಪಿಸು ಮಾತುಗಳ ಧಾಳಿಯನ್ನು, ಗಂಡು ನಗುವಿನಿಂದ ಎದುರಿಸಿ ಗೆಲ್ಲಬಲ್ಲ ಮನೋಬಲವಿಲ್ಲದ ರಾಜಶೇಖರ, ಈ ಅಪಮಾನದಿಂದಾದ ಗಾಯವನ್ನು ಮೂಕವಾಗಿ ಅನುಭವಿಸುತ್ತಿದ್ದ. ದಿನದಿನಕ್ಕೆ ತಾನಿರುವುದು ಶತ್ರು ಪಾಳಯದ ನಡುವೆ, ತನ್ನವರು ಯಾರೂ ಇಲ್ಲ, ತಾನು ಒಂಟಿಜೀವ, ಏಕಾಂಗಿ ಎನ್ನುವ ಭಾವನೆ ಅವನಲ್ಲಿ ಬೆಳೆಯುತ್ತಿದ್ದ ಕಾಲದಲ್ಲಿ, 'ಅಲ್ಲಿ, ನನಗೂ ಒಬ್ಬನು ಜೊತೆಗಾರನಿದ್ದಾನೆ' ಎಂಬ ಭಾವನೆಯನ್ನು ಮೂಡಿದವನು ಶ್ರೀಧರಮೂರ್ತಿಯೊಬ್ಬನೇ.

ಶ್ರೀಧರಮೂರ್ತಿ ರಾಜಶೇಖರನೊಂದಿಗೆ ಓದುತ್ತಿದ್ದ ವಿದ್ಯಾರ್ಥಿ. ಹಾಜರಿ ರಿಜಿಸ್ಟರ್‌ನಲ್ಲಿ ರಾಜಶೇಖರನ ಹೆಸರಾದ ಕೂಡಲೇ ಅವನ ಹೆಸರಿದ್ದುದರಿಂದ, ಕಾಲೇಜಿಗೆ ಕಾಲಿಟ್ಟ ಮೊದಲ ದಿನವೇ ರಾಜಶೇಖರ ಶ್ರೀಧರನ ಮುಖವನ್ನು ನೋಡಿದ್ದ. ಎಷ್ಟೋ ಬಾರಿ ಅವರಿಬ್ಬರೂ ಒಬ್ಬರ ಪಕ್ಕದಲ್ಲಿ ಒಬ್ಬರು ಕೂಡುತ್ತಿದ್ದರು. ಪ್ರಯೋಗ ಶಾಲೆಯಲ್ಲೂ ಒಂದೇ ಮೇಜಿನ ಮೇಲೆ ಅವರು ಕೆಲಸ ಮಾಡಬೇಕಾಗುತ್ತಿತ್ತು. ಆದರೂ ಅವರಿಬ್ಬರಿಗೂ ಪರಿಚಯ ಬೆಳೆಯಲು ಕೆಲವು ತಿಂಗಳುಗಳ ಕಾಲ ಬೇಕಾಯಿತು.

ಅದಕ್ಕೆ ರಾಜಶೇಖರನ ಸ್ವಭಾವದಷ್ಟೇ ಶ್ರೀಧರನ ಸ್ವಭಾವವೂ ಕಾರಣವಾಗಿತ್ತು. ರಾಜಶೇಖರನಂತೆಯೇ ಶ್ರೀಧರನದೂ ಹೆಚ್ಚು ಜನದೊಂದಿಗೆ ಬೆರೆಯುವ ಸ್ವಭಾವವಲ್ಲ. ಆದರೆ ಆ ಸ್ವಭಾವ ರಾಜಶೇಖರನಲ್ಲಿ ದುರ್ಬಲತೆಯಾಗಿದ್ದರೆ, ಶ್ರೀಧರನಲ್ಲಿ ಅದೇ ಅವನ ಒಂದು ವಿಶಿಷ್ಟ ಶಕ್ತಿಯಾಗಿತ್ತು. ಜನದಿಂದ ಅವನು ದೂರವಿರುತ್ತಿದ್ದ ರೀತಿಯಲ್ಲಿ ಬೆದರಿಕೆ ಇರದೆ, ಏನೋ ಒಂದು ಬಗೆಯ ತಾತ್ಸಾರವಿತ್ತು ; ಮೇಲೆ ಬಿದ್ದು ಮಾತನಾಡಿಸಿದರೆ ಹೇಗೋ ಏನೋ

ಎಂಬ ಭೀತಿಯನ್ನುಂಟುಮಾಡುವ ಖಳೆ ಅವನ ಮುಖದ ಮೇಲಿತ್ತು. ಅವನ ಈ ಸ್ವಭಾವದಿಂದಾಗಿ ಹುಡುಗರು ಅವನಿಗೆ ' ಮುಳ್ಳು ಹಂದಿ ' ಎಂದು ಅಡ್ಡ ಹೆಸರಿಟ್ಟಿದ್ದರೂ, ರಾಜಶೇಖರನ ಅಡ್ಡ ಹೆಸರಿನಂತೆ, ಅದನ್ನು ಅವನ ಮುಂದೆ ಆಡಲು ಹೆದರುತ್ತಿದ್ದರು. ಅವನ ಬಲವಾದ ಮೈಕಟ್ಟು, ಉದ್ದವಾದ, ಮಾಂಸ ಖಂಡ ತುಂಬಿದ ತೋಳು, ಹರಿತವಾದ ಚೂರಿಯಂತೆ ನೋಡಿದವರ ಕಣ್ಣನ್ನು ಇರಿಯುವ ಕಣ್ಣ ನೋಟ ಅವನನ್ನು ಸುತ್ತುವರಿದ ಕೋಟೆಯಂತಿದ್ದವು ಆ ಕೋಟೆಯಿಂದಾಚೆಗೆ ದಾಟಿ ಬಂದು, ಯಾರ ಪರಿಚಯವನ್ನು ಮಾಡಿಕೊಳ್ಳಲೂ ಶ್ರೀಧರ ಯತ್ನಿಸುತ್ತಿರಲಿಲ್ಲ. ತನ್ನ ತಂಟೆಗೆ ಯಾರೂ ಬರದಿದ್ದರಾಯಿತು, ಯಾರಿಂದ ತನಗೇನಾಗಬೇಕು ಎಂಬ ರೀತಿಯಲ್ಲಿದ್ದ.

ಇದರಿಂದಾಗಿಯೇ ರಾಜಶೇಖರ – ಶ್ರೀಧರ ಹೆಚ್ಚು ಕಡಮೆ ಅಕ್ಕಪಕ್ಕ ದಲ್ಲೇ ಇದ್ದರೂ, ಬಹು ದಿನ ಒಬ್ಬರಿಗೊಬ್ಬರಿಗೆ ಪರಿಚಯವಾಗಿರಲಿಲ್ಲ. ಹುಡುಗರ ವಾಗ್ಬಾಣ ಹತಿಯಿಂದ, ಕುಹಕ ನಗೆಯ ಕಶಾಘಾತದಿಂದ ರಾಜ ಶೇಖರ, ಮೂಕನಾಗಿ ಮಿಡುಕುತ್ತಿದ್ದುದು ಶ್ರೀಧರನ ಕಣ್ಣಿಗೆ ಬೀಳದೆ ಇರಲಿಲ್ಲ. ಒಮ್ಮೊಮ್ಮೆ ರಾಜಶೇಖರ ಆ ಪೆಟ್ಟನ್ನು ಮೂಕವಾಗಿ ಸಹಿಸಿದಾಗಲೂ ಶ್ರೀಧರ ರಾಜಶೇಖರನ ಮುಖವನ್ನು ವಿಚಿತ್ರ ದೃಷ್ಟಿಯಿಂದ ನೋಡುತ್ತಿದ್ದ. ಅರ್ಥ ವಾಗದ ಭಾವನೆಯೊಂದು ಅವನ ಕಣ್ಣುಗಳಲ್ಲಿ ಮೂಡಿ, ತುಟಿಯ ಕುಡಿ ಕೊಂಕಾಗುತ್ತಿತ್ತು. ಏನೋ ಮಾತು ತುಟಿಯ ವರೆಗೂ ಬಂದಿತೆಂಬುದು ಕಾಣುತ್ತಿತ್ತು ಆದರೆ ಅವನ ಮುಖದಿಂದ ಯಾವ ಮಾತೂ ಹೊರಬೀಳುತ್ತಿರ ಲಿಲ್ಲ. ಒಂದು ಗಳಿಗೆ ಹಾಗೆ ರಾಜಶೇಖರನ ಮುಖವನ್ನು ನೋಡಿದವನೇ ಮರು ಗಳಿಗೆ, ತೋಳಿಗೆ ಹತ್ತಿದ ಧೂಳನ್ನು ಕೊಡವಿಕೊಳ್ಳುವವನಂತೆ ಭುಜವನ್ನು ಒದರಿ ಅಲ್ಲಿಂದ ಹೊರಟುಹೋಗುತ್ತಿದ್ದ. ಆದರೆ, ರಾಜಶೇಖರನ ಹೃದಯಕ್ಕೆ ಮಾತ್ರ ಸುತ್ತ ಕವಿದ ಈ ಶತ್ರು ಪಾಳಯದಲ್ಲಿ ಅವನೊಬ್ಬನೇ ತನ್ನ ಮಿತ್ರ ಎನಿಸುತ್ತಿತ್ತು. ಆ ಬಗೆಯ ಭಾವನೆಗೆ ಕಾರಣವೇನೆಂದು ಕೇಳಿದರೆ, ಬಹುಶಃ ರಾಜಶೇಖರ ಉತ್ತರ ಕೊಡುವುದು ಸಾಧ್ಯವಾಗುತ್ತಿರಲಿಲ್ಲ. ಅವನೊಬ್ಬನು ತನ್ನ ಪರವಾಗಿ ನಿಂತರೆ ಹುಡುಗರ ' ಛಿಡಾಯಿಸುವಿಕೆ 'ಯ ಕಾಟದಿಂದ ತಪ್ಪಿಸಿ ಕೊಳ್ಳಬಹುದೆಂದೂ ತೋರುತ್ತಿತ್ತು. ಆದರೆ ಹಾಗೆಂದು ತಾನಾಗಿಯೇ ಮೇಲೆ ಬಿದ್ದು ಶ್ರೀಧರನ ಗೆಳೆತನ ಮಾಡಿಕೊಳ್ಳುವ ಸಾಹಸ ರಾಜಶೇಖರನಿಗಿರಲಿಲ್ಲ ಹೀಗೇ ನಡೆದಿತ್ತು, ಈ ಕಣ್ಣಮುಚ್ಚಾಲೆ.

ಒಂದು ದಿನ ಸಂಜೆ ರಾಜಶೇಖರ ಯೂನಿವರ್ಸಿಟಿ ರೆಸ್ಟೆರಾನಲ್ಲಿ ಕಾಫಿ ಕುಡಿಯುತ್ತಾ ಕುಳಿತಿದ್ದಾಗ, ಸಮೀಪದ ಮೇಜಿನಲ್ಲಿ ತಿಂಡಿ ತಿನ್ನುತ್ತಾ ಕುಳಿತಿ

ದ್ದರು–ಅವನ ಸಹಪಾಠಿಗಳಿಬ್ಬರು. ರಾಜಶೇಖರನನ್ನು ಕಂಡು, ಅವನ ಮುಖ ನೋಡಿ, ಅವನಿಗೆ ಕೇಳಿಸುವಂತೆಯೇ—

" ಲೋ, ಬಿ. ಟಿ. ಆರ್.ನಲ್ಲಿ ಪಾಕಂಪೊಪ್ಪು ಮಾಡ್ತಾರೇನೋ ? "

—ಎಂದ ಒಬ್ಬ. ಇನ್ನೊಬ್ಬ ಅದನ್ನು ಕೇಳಿ—

" ಚಿಂತಾಮಣೀಲಿ ಬಹಳ ಸೊಗಸಾದ್ದು ಸಿಗುತ್ತೆ ಕಣೋ—ಮೇಲು ಕೋಟೆ ಬ್ರಾಂಡಿಂದು."

—ಎಂದ ಮುಸಿ ಮುಸಿ ನಗುತ್ತಾ.

ಅವರ ಮಾತು ಕೇಳಿ ರಾಜಶೇಖರನಿಗೆ ಕುಡಿಯುತ್ತಿದ್ದ ಕಾಫಿ ವಿಷವಾಯಿತು. ತನ್ನ ಸಹಪಾಠಿಯೊಬ್ಬನೇ ಅಲ್ಲ, ಹೋಟೆಲಿನಲ್ಲಿ ಕುಳಿತ ಅಪರಿಚಿತರೆಲ್ಲರೂ ತನ್ನನ್ನು ನೋಡಿ ನಗುತ್ತಿರುವಂತೆ ತೋರಿತು ಅರ್ಧ ಕುಡಿದಿದ್ದ ಕಾಫಿಯನ್ನು ಹಾಗೇ ಬಿಟ್ಟು ಬಿಟ್ಟು, ಹಣ ಕೊಟ್ಟು ಹೊರಗೆ ಬಂದ ಹೋಟೆಲಿನ ಇದಿರು ಗಡೆಯ ಯೂನಿಯನ್‌ನಲ್ಲಿ ಹತ್ತಾರು ಮಂದಿ ಹುಡುಗರು ಕಲೆತಿದ್ದರು. ಅವರ ಮಾತು, ನಗೆ ಗಾಳಿಯನ್ನು ತುಂಬಿತ್ತು. ಆದರೆ ರಾಜಶೇಖರನಿಗೆ ಅದೆಲ್ಲದರಿಂದ ಮನಸ್ಸು ಹಗುರಾಗದೆ, ಏಕೋ ಉಸಿರು ಕಟ್ಟಿಸಿದಂತಾಯಿತು. ತಲೆ ತಗ್ಗಿಸಿ ಹೊರಗೆ ಹೆಜ್ಜೆ ಹಾಕಿದ ಯೂನಿಯನ್‌ನ ಗೇಟು ದಾಟಿ ಬೀದಿಗೆ ಬಂದಾಗ, ಯಾರೋ " ಹಲೋ ರಾಜಶೇಖರ್ " ಎಂದು ಕರೆದು, ಹತ್ತಿರ ಬಂದು ಅವನ ಹೆಗಲಮೇಲೆ ಕೈಹಾಕಿದರು. ಅಣಕಿಸುವವರ ಗುಂಪಿನವನೇನೋ ಎಂದು ಹೆಗಲ ಮೇಲೆ ಕೈ ಹಾಕಿದವನ ಮುಖ ನೋಡಲೂ ರಾಜಶೇಖರನಿಗೆ ಭಯವಾಯಿತು. ಆದರೂ ತಲೆ ಎತ್ತಿ ನೋಡಿದ. ಅವನ ಹೆಗಲ ಮೇಲೆ ಕೈ ಹಾಕಿದ್ದವನು ಶ್ರೀಧರಮೂರ್ತಿ. ಅದನ್ನು ಕಂಡು ಒಂದು ಗಳಿಗೆ ರಾಜ ಶೇಖರನಿಗೆ ಆಶ್ಚರ್ಯವಾಯಿತು. ಎಂದೂ ತನ್ನೊಂದಿಗೆ ಮಾತನಾಡದವನು ಇಂದು ತಾನಾಗಿಯೇ ತನ್ನನ್ನು ಮಾತನಾಡಿಸಿ ಹೆಗಲ ಮೇಲೆ ಕೈ ಹಾಕಿದ್ದೇಕೆ ಎಂದು. ಆ ಆಶ್ಚರ್ಯದಲ್ಲೇ ಮಾತನಾಡದೆ ಶ್ರೀಧರನ ಮುಖ ನೋಡಿದ. ಶ್ರೀಧರ ರಾಜಶೇಖರನ ಆಶ್ಚರ್ಯವನ್ನು ಗಮನಿಸದೆ—

" ರಾಜಶೇಖರ್ ನೀನೊಬ್ಬ ಹೇಡಿ "

—ಎಂದ. ಆ ಮಾತು ರಾಜಶೇಖರನ ಹೃದಯವನ್ನು ಭೇದಿಸಿತು. ಶ್ರೀಧರಮೂರ್ತಿಯ ಸಾಮೀಪ್ಯವನ್ನಾಗಲಿ, ಅವನಿಂದ ಆ ಬಗೆಯ ಮಾತನ್ನಾಗಲಿ ಅವನು ನಿರೀಕ್ಷಿಸಿರಲಿಲ್ಲ ಕೃತಿಯಷ್ಟೇ ಅನಿರೀಕ್ಷಿತವಾದ ಆ ಮಾತನ್ನು ಕೇಳಿ ರಾಜಶೇಖರ ತಬ್ಬಿಬ್ಬಾಗಿ, ಶ್ರೀಧರನ ಮಾತನಲ್ಲಿಯ ಆಪಾದನೆಯಿಂದ ಮನ ನೊಂದು—

" ನೀವೂ ಆ ಗುಂಪಿಗೆ ಸೇರಿದಿರಾ ? "

—ಎಂದು ಕೇಳಿದ. ಅವನ ಪ್ರಶ್ನೆಯಲ್ಲಿನ ಆರ್ತತೆ, ನೋವು ಶ್ರೀಧರನ ಎದೆಗೆ ತಟ್ಟಿ, ಅವನ ಮಾತು ಕೊಂಚ ಮೃದುವಾಯಿತು.

" ನಾನು ಯಾವ ಗುಂಪಿಗೂ ಸೇರಿದವನಲ್ಲ. ಆದರೆ ಉಳಿದವರು ಮಾಡಿದ ಅಪಮಾನವನ್ನು ಮೂಕ ಕುರಿಯಂತೆ ಸಹಿಸುವುದೂ ನನಗೆ ಸೇರುವುದಿಲ್ಲ."

" ಅದಕ್ಕೆ ನಾನೇನು ಮಾಡಬೇಕಾಗಿತ್ತು ? "

" ಏನು ಮಾಡಬೇಕಾಗಿತ್ತೆ ? ನಾನಾಗಿದ್ದರೆ ಏನು ಮಾಡುತ್ತಿದ್ದೆ ಗೊತ್ತೆ ? "

" ಏನು ? "

" ಕೈ ಇರುವುದು ಬರೀ ನೋಟ್ಸ್ ಬರೆದುಕೊಳ್ಳಲಲ್ಲ ಎಂದು ತೋರಿಸುತ್ತಿದ್ದ ನಿಮ್ಮ ಹಾಗೆ ಅನ್ನಿಸಿಕೊಂಡು ಮುಖ ಕೆಳಗೆ ಮಾಡಿಕೊಂಡು ಹೊರ ಬರುತ್ತಿರಲಿಲ್ಲ "

" ನಿಜ. ಆದರೆ ನಿಮ್ಮಷ್ಟು ನಾನು ಬಲಶಾಲಿಯಲ್ಲ."

—ಕಟುವಾದ ಆಪಾದನೆಯನ್ನು ಒಪ್ಪಿಕೊಳ್ಳುವ, ನಸುನಾಚಿಕೆಯಿಂದ ತಗ್ಗಿದ ಧ್ವನಿಯಲ್ಲಿ ಹೇಳಿದ ರಾಜಶೇಖರ.

" ಇರಬಹುದು. ನನ್ನಷ್ಟು ನಿಮಗೆ ದೈಹಿಕಬಲವಿಲ್ಲದೆ ಇರಬಹುದು. ಆದರೆ ಇಂಥ ಗುಳ್ಳೆ ನರಿಗಳ ಬಾಯಿ ಮುಚ್ಚಿಸಲು ಭೀಮ ಬಲವೇನೂ ಬೇಕಾಗಿಲ್ಲ. ಮನೋಬಲವೊಂದಿದ್ದರೆ ಸಾಕು. ಅವರ ಬುಡುಬುಡಿಕೆಯ ಬಾಯಿಗೆ ನಾವು ಹೆದರುವುದಿಲ್ಲ ಎಂದು ಒಮ್ಮೆ ತೋರಿಸಿಕೊಟ್ಟರೆ ಬಳಿಕ ತಾವೇ ಬಾಯಿಮುಚ್ಚಿಕೊಳ್ಳುತ್ತಾರೆ "

" ಅಂಥ ಮನೋಬಲವಿದ್ದರೂ ತಾನೇ ನಾನು ಏನು ಮಾಡಬಲ್ಲೆ ? "

—ಶುದ್ಧ ಅಸಹಾಯಕತೆಯ ಧ್ವನಿಯಲ್ಲಿ ಕೇಳಿದ ರಾಜಶೇಖರ.

" ಏಕೆ ? "

—ಅವನ ಮಾತು ಅರ್ಥವಾಗದವನಂತೆ ಕೇಳಿದ ಶ್ರೀಧರ.

" ನಾನು ಒಬ್ಬ. ಅವರು ಹಲವರು "

" ಅಂತೂ ನೀವೂ ಒಬ್ಬ ಗುಂಪಿಗೆ ಹೆದರುವ ಹೇಡಿ ಅನ್ನಿ."

—ಅರ್ಥವಾಗದ ನಿರಾಶೆಯ ಧ್ವನಿಯಲ್ಲಿ ಕೇಳಿದ ಶ್ರೀಧರ.

" ಹೆದರದೆ ಮತ್ತೇನು ಮಾಡಲಿ ? "

" ಊಹೂ—ಹೆದರದೆ ನೀವು ಬೇರೆ ಏನೂ ಮಾಡಲಾರಿರಿ. ಹೆದರಿಕೆ

ನಿಮ್ಮಲ್ಲಿ ರಕ್ತಗತವಾಗಿದೆ."

"ನೀವು ಹೆದರುವುದಿಲ್ಲವೆ?"

"ಊಹೂ—ಹೆದರುವುದಿಲ್ಲ."

—ಅಚಲ ಸತ್ಯವನ್ನು ಸಾರುವ ಸ್ವರದಲ್ಲಿ ಹೇಳಿದ ಶ್ರೀಧರ.

"ಒಬ್ಬನಿಗೆ ಇದಿರಾಗಿ ಹತ್ತು ಜನ ಬಂದರೂ—"

—ಶ್ರೀಧರನ ಮಾತನ್ನು ನಂಬಲಾಗದವನಂತೆ ಕೇಳಿದ ರಾಜಶೇಖರ.

"ಒಬ್ಬರಲ್ಲ, ಹತ್ತು ಜನರಲ್ಲ, ನೂರು ಜನ ಬಂದರೂ ನಾನು ಹೆದರುವುದಿಲ್ಲ. ಇದಿರಾಳಿಗಳು ಹೆಚ್ಚಾದಷ್ಟೂ ನನ್ನ ತೋಳಿಗೆ ಬಲ ಬರುತ್ತದೆ. ಒಬ್ಬನಿಗಾಗಲಿ, ನೂರು ಜನಕ್ಕಾಗಲಿ ಹೆದರಿಕೆ ಒಂದೆ. ಒಬ್ಬರಾದರೇನು, ಸಾವಿರ ಜನವಾದರೇನು—ನಾವು ಸಾಯುವುದು ಒಂದೇಬಾರಿ. ಹೇಡಿತನದಿಂದ ಹುದುಗಿ ಕುಳಿತರೂ ಸಾವು ನಮ್ಮನ್ನು ಬಿಡುವುದಿಲ್ಲ. ಹಾಗಿದ್ದು ಹೆದರಿ ಸಾಯುವುದೇಕೆ, ಹೋರಾಡಿಯೇ ಸಾಯೋಣ."

ಶ್ರೀಧರ ಯಾವುದೋ ಆಂತರಿಕ ಆಕ್ರೋಶದಿಂದ ಬಿಗಿದ ಧ್ವನಿಯಲ್ಲಿ ಹೇಳಿದ. ಅಂದಿನ ಸಂದರ್ಭಕ್ಕೂ ಶ್ರೀಧರನ ಮಾತು ಮುಟ್ಟಿದ ನಿಲುವಿಗೂ ಏನೂ ಸಂಬಂಧವಿದ್ದಂತೆ ರಾಜಶೇಖರನಿಗೆ ತೋಚಲಿಲ್ಲ. ಆದರೂ ಜಲಪಾತದಿದಿರು ನಿಂತ ಹಸುಮಗುವಿನಂತೆ ಮುಗ್ಧನಾಗಿ ಅವನಾಡಿದುದನ್ನು ಕೇಳಿದ. ಶ್ರೀಧರನ ಮಾತು ಅವನಿಗೆ ಅರ್ಥವಾಗಲಿಲ್ಲವೆನ್ನುವುದು, ಆವನು ಶ್ರೀಧರನ ಮೊಗವನ್ನು ನೋಡುತ್ತಿದ್ದ ನೋಟದಲ್ಲೇ ಸ್ಪಷ್ಟವಾಗಿತ್ತು. ವೇಗವಾಗಿ ಆಡುತ್ತಿದ್ದ ಮಾತನ್ನು ತಡೆದು ಶ್ರೀಧರನೂ ರಾಜಶೇಖರನ ಮೊಗವನ್ನು ದಿಟ್ಟಿಸಿ ನೋಡಿ, ತಟಕ್ಕನೆ ನಕ್ಕು—

"ನನ್ನ ಮಾತು ನಿಮಗೆ ಅರ್ಥವಾಗಲಿಲ್ಲ. ಅಲ್ಲವೇ? ನಿಜ. ಜೀವನದಲ್ಲಿ ಸ್ವಾನುಭವ ಕಲಿಸದ ಮಾತು ಯಾರಿಗೂ ಅರ್ಥವಾಗುವುದಿಲ್ಲ. ನೀವಿನ್ನೂ ಶುದ್ಧ ಹಸುಮಗು. ನಿಮ್ಮನ್ನು ಕಂಡರೆ ನನಗೆ ಕನಿಕರವಾಗುತ್ತದೆ. ನಿಜವಾಗಿಯೂ ನಿಮಗೆ ಮನೆ ಬಿಟ್ಟು ಪರಸ್ಥಳದಲ್ಲಿ ಒಂಟಿಯಾಗಿ ವಾಸಿಸುವ ಶಕ್ತಿ ಬಂದಿಲ್ಲ. ಹೀಗಿರುವಾಗ ನಿಮ್ಮನ್ನು ಈ ಸಮುದ್ರದಲ್ಲಿ ಒಂಟಿಯಾಗಿ ದಬ್ಬಿದುದು ನಿಮ್ಮ ತಂದೆಯವರ ತಪ್ಪು. ಹೋಗಲಿ ಬಿಡಿ. ಅವರ ತಪ್ಪಿಗೆ ನಿಮ್ಮನ್ನು ಅಂದು ಏನು ಫಲ. ಆದರೆ—ಒಂದು ಮಾತು ಹೇಳುತ್ತೇನೆ ಕೇಳಿ. ಇನ್ನು ಮೇಲೆ ಇಂಥ ಅಪಮಾನವನ್ನು ಸಹಿಸಬೇಡಿ."

"ಏನು ಮಾಡಲಿ?"

"ಏನು ಮಾಡಬೇಕೆಂಬುದನ್ನು ತೋರಿಸುತ್ತೇನೆ. ಕೊಂಚ ಇಲ್ಲೇ ಇರಿ."

—ಎಂದು ಶ್ರೀಧರ ಗೇಟಿನ ಬಳಿಯಲ್ಲಿ ನಿಂತ. ಮಂತ್ರಮುಗ್ಧನಾದವ ನಂತೆ ರಾಜಶೇಖರನೂ ಮುಂದೆ ಅವನೇನು ಮಾಡುವನೋ ನೋಡೋಣ ಎಂದು ಕುತೂಹಲದಿಂದ ಕಾಯುತ್ತಾ ನಿಂತ. ಹಾಗೇ ಇಬ್ಬರೂ ಯೂನಿರ್ಯನ ಗೇಟಿನ ಹೊರಗಡೆ ನಿಂತಿದ್ದರು. ಸ್ವಲ್ಪ ಹೊತ್ತಿನಲ್ಲೇ ಹೋಟಲಿನಲ್ಲಿ ರಾಜ ಶೇಖರನನ್ನು ಛಿಡಾಯಿಸಿದ ಹುಡುಗ, ತನ್ನ ಸಹಪಾಠಿಯೊಡನೆ ಹೊರಬಂದು ಗೇಟಿನ ಒಂದು ಪಕ್ಕಕ್ಕೆ ನಿಂತಿದ್ದ ಶ್ರೀಧರನನ್ನಾಗಲಿ, ರಾಜಶೇಖರನನ್ನಾಗಲಿ ಗಮನಿಸದೆ ಹೋಗುವುದರಲ್ಲಿದ್ದ. ಅವನನ್ನು ಶ್ರೀಧರನೇ ಕೂಗಿದ—

" ಹಲೋ ಮಿಸ್ಟರ್. ಜಸ್ಟ್ ಎ ಮಿನಿಟ್ ಪ್ಲೀಸ್."

ಆಕಸ್ಮಿಕವಾಗಿ ಶ್ರೀಧರನ ಕರೆಯನ್ನು ಕೇಳಿದ ಹುಡುಗ ಅವನತ್ತತಿರುಗಿ, "ಏನು" ಎಂದು ಶ್ರೀಧರನ ಹತ್ತಿರ ಬಂದ. ಅವನು ತನ್ನ ಹತ್ತಿರ ಬರುತ್ತಿದ್ದ ಹಾಗೇ, ಶ್ರೀಧರ ತಟಕ್ಕನೆ ಅವನ ಕಾಲರಿಗೆ ಎಡಗೈ ಹಾಕಿ, ಉಸಿರುಕಟ್ಟು ವಂತೆ ಬಿಗಿಯಾಗಿ ಹಿಡಿದು, ಬಟ್ಟೆಯನ್ನು ಒದರುವಂತೆ ಅಲ್ಲಾಡಿಸಿ—

" ಹುಷಾರ್–ಇನ್ನು ಮೇಲೆ ರಾಜಶೇಖರನ ತಂಟೆಗೆ ಬಂದರೆ ..."

—ಎಂದ ಆ ಹುಡುಗ ಅನಿರೀಕ್ಷಿತವಾದ ಈ ಘಟನೆಯಿಂದ ಗಾಬರಿ ಯಾಗಿ, ಮಾತು ಸತ್ತು, ಪಿಳಿಪಿಳಿ ಕಣ್ಣುಗಳಿಂದ ಶ್ರೀಧರನ ಉಗ್ರವಾದ ಮುಖ ವನ್ನು ನೋಡಿದ. ಅವನು ಮರುಮಾತಾಡಿದರೆ ಪ್ರಹರಿಸಲೆಂಬಂತೆ ಶ್ರೀಧರನ ಬಲಗೈಮುಷ್ಟಿ ಬಿಗಿದು, ಕಡಿಯಲು ಸಿದ್ಧವಾದ ಹಾವಿನ ಹೆಡೆಯಂತೆ ಮೇಲೆದ್ದು ನಿಂತಿತ್ತು. ಆ ಮುಷ್ಟಿಯನ್ನು ಕಂಡೇ ಅವನು ಗರಬಡಿದಂತೆ ತಣ್ಣಗಾದ. ಅಷ್ಟು ದೂರದಲ್ಲಿದ್ದ ಅವನ ಜೊತೆಗಾರ ಮತ್ತೂ ನಾಲ್ಕು ಹೆಜ್ಜೆ ಹಿಂದೆ ಸರಿದ

" ಇಷ್ಟೇ ಹೇಳಬೇಕೆಂದಿದ್ದುದು. ನನ್ನ ಮಾತು ಅರ್ಥವಾಯಿತು ತಾನೇ. ಇನ್ನು ಹೊರಡಬಹುದು "

—ಎಂದ ಶ್ರೀಧರ ಅವನ ಕಾಲರನ್ನು ಹಿಡಿದಿದ್ದ ತನ್ನ ಹಿಡಿಯ ಬಿಗಿತ ವನ್ನು ಸಡಲಿಸಿ. ಆ ಹಿಡಿತ ಸಡಲಿದಕೂಡಲೇ ಆ ಹುಡುಗ ಜಾರಿಹೋಗ ಲೆಂದು ನೋಡಿದ. ಅದನ್ನು ಕಂಡು—

" ಹೋಗಲು ಅಷ್ಟು ಅವಸರ ಬೇಡ. ಇನ್ನೊಂದು ಕೆಲಸ ಉಳಿದಿದೆ."

—ಎಂದ ಶ್ರೀಧರ.

" ಏನು ? "

—ಮತ್ತೇನು ವಿಪತ್ತೋ ಎಂಬ ಹೆದರಿಕೆಯಿಂದ ಒಣಗಿ ನಡುಗುವ ಧ್ವನಿಯಲ್ಲಿ ಕೇಳಿದ ಹುಡುಗ.

" ಹೆಚ್ಚೇನೂ ಇಲ್ಲ. ರಾಜಶೇಖರನಿಗೆ ನೀನು ಮಾಡಿದ ಅಪಮಾನ

ಕ್ಕಾಗಿ ಕ್ಷಮಾಪಣೆ ಕೇಳಿಕೊಂಡು ಹೊರಡಬಹುದು. ನಿನ್ನ ಜೀವಕ್ಕೇನೂ ಅಪಾಯವಿಲ್ಲ, ಅಷ್ಟು ನಡುಗಬೇಡ."

—ಎಂದ ಶ್ರೀಧರ ಭಯಂಕರ ವ್ಯಂಗ್ಯದ ಕೂರಲಗಿನಿಂದ ಅವನ ಎದೆಯನ್ನು ಇರಿಯುತ್ತಾ. ಆ ಹುಡುಗನಿಗೂ ಪರಿಸ್ಥಿತಿಯ ಅಪಮಾನ ಅರಿವಾಗಿ, ಕೂಡಲೇ ಶ್ರೀಧರ ಹೇಳಿದಂತೆ ಮಾಡದೆ ಹಿಂದೆ ಮುಂದೆ ನೋಡಿದ.

" ಬೇಗ. ಇಲ್ಲವಾದರೆ ಮುಂದಿನ ಮಾತನ್ನು ಈ ಮುಷ್ಟಿ ಹೇಳುತ್ತದೆ."

—ಶ್ರೀಧರ ಬೆದರಿಸುವ ಧ್ವನಿಯಲ್ಲಿ ಹೇಳಿದ. ಮುಖದ ಮುಂದೆ ತೂಗುತ್ತಿದ್ದ ಮುಷ್ಟಿಯ ಇದಿರು ಬೇರೇನೂ ದಾರಿ ತೋಚದೆ, ಆ ಹುಡುಗ—

" ಮಿಸ್ಟರ್ ರಾಜಶೇಖರ್, ಪ್ಲೀಸ್ ಪಾರ್ಡನ್ ಮಿ."

ಎಂದ.

" ಅಷ್ಟೆ. ಇನ್ನು ದಯಮಾಡಿಸಬಹುದು."

—ಎಂದ ಶ್ರೀಧರ, ಅವನ ಕಾಲರನ್ನು ಬಿಟ್ಟು. ಶ್ರೀಧರನ ಕೈ ಬಿಗಿತ ಬಿಗಿತ ತಪ್ಪಿದ ಕೂಡಲೇ ಆ ಹುಡುಗ, ಕತ್ತನ್ನು ಸವರಿಕೊಳ್ಳುತ್ತಾ ದುರ್ದಾನ ತೆಗೆದುಕೊಂಡವನಂತೆ ಹೊರಟುಹೋದ. ಆವನು ತನ್ನ ಜೊತೆಗಾರನೊಂದಿಗೆ ಕಲೆತು, ಅಷ್ಟು ದೂರ ಹೋಗುವವರೆಗೂ ಸುಮ್ಮನೆ ಅವನನ್ನೇ ನೋಡುತ್ತಿದ್ದು ಬಳಿಕ, ಮುಟ್ಟಬಾರದುದನ್ನು ಮುಟ್ಟಿದವನಂತೆ ಕೈಯನ್ನು ಕೊಡವಿಕೊಂಡು,

" ಇನ್ನು ನಿಮಗೆ ಅವರಿಂದ ತೊಂದರೆ ಇಲ್ಲ. ಹಾಯಾಗಿ ಹೋಗಿ "

—ಎಂದ ಶ್ರೀಧರ.

" ನಿಮ್ಮ ಈ ಉಪಕಾರಕ್ಕಾಗಿ ನಾನು ತುಂಬಾ ಕೃತಜ್ಞನಾಗಿದೇನೆ."

— ಎಂದ ಶ್ರೀಧರ ಅದುವರೆಗೆ ಮಾಡುತ್ತಿದ್ದುದನೆಲ್ಲವನ್ನೂ ಮೂಕವಾಗಿ ನಿಂತು ನೋಡುತ್ತಿದ್ದ ರಾಜಶೇಖರ.

" ನಿಮ್ಮ ಕೃತಜ್ಞತೆಯಿಂದ ನನಗೆ ಆಗಬೇಕಾದದ್ದೇನೂ ಇಲ್ಲ. ಆದ್ದರಿಂದ ಅದನ್ನಿಲ್ಲಿ ಅನಗತ್ಯವಾಗಿ ಖರ್ಚು ಮಾಡಬೇಡಿ. ಮುಂದೆ ಇಂಥ ಪ್ರಸಂಗ ಬಂದರೆ ಏನು ಮಾಡಬೇಕೆಂಬುದು ಗೊತ್ತಾಯಿತು ತಾನೇ ? ಈ ಕುರಿಗಳಿಗೆ ಹೆದರುವ ಅಗತ್ಯವಿಲ್ಲ ಅಷ್ಟು ನಿಮಗೆ ತಿಳಿದರೆ ನಾನು ಧನ್ಯ. ನಾನಿನ್ನು ಬರಲೆ ? "

" ನನಗಾಗಿ ನೀವಿಷ್ಟು ತೊಂದರೆ ತೆಗೆದುಕೊಂಡಿರಿ. ನನ್ನ ಜೊತೆಗೆ ಒಂದು ಕಪ್ಪು ಕಾಫಿ ಕುಡಿಯುವುದಿಲ್ಲವೇ ? "

" ಒಂದು ಲೋಟ ಕಾಫಿ ಕುಡಿಸಿ ಈ ಸಾಲ ತೀರಿಸಬೇಕೆಂದು ನಿಮ್ಮ ಬಯಕೆಯೇ ? ಹಾಗಿದ್ದರೆ ಬನ್ನಿ. ಅಷ್ಟಕ್ಕೇ ಈ ಋಣ ಬಗೆಹರಿದುಹೋಗಲಿ.

ಎ ಕಪ್ ಆಫ್ ಕಾಫಿ ಈಸ್ ಆಲ್‌ವೇಸ್ ವೆಲ್‌ಕಂ."

—ಎಂದ ಶ್ರೀಧರ ತಾನೇ ರಾಜಶೇಖರನನ್ನು ಹೋಟೆಲಿನತ್ತ ನಡೆಸಿ.

ಆಮೇಲಾಗಲಿ, ಕಾಫಿ ಕುಡಿಯುವಾಗಲಾಗಲಿ ಶ್ರೀಧರ ಬೇರೇನೂ ಮಾತನಾಡಲಿಲ್ಲ. ಒಂದೆರಡು ಬಾರಿ ಅವನನ್ನು ಮಾತನಾಡಿಸಲು ಯತ್ನಿಸಿದ ರಾಜಶೇಖರನ ಪ್ರಯತ್ನ ವಿಫಲವಾಯಿತು. ಅಲ್ಲದೆ ಅವನನ್ನು ಕೆಣಕಿ ಮಾತನಾಡಿಸುವಷ್ಟು ಧೈರ್ಯ ರಾಜಶೇಖರನಿಗಿರಲಿಲ್ಲವಾದುದರಿಂದ ಅವನೂ ಸುಮ್ಮನಾದ. ಮೌನವಾಗಿ ಇಬ್ಬರೂ ಕಾಫಿ ಕುಡಿದು ಮುಗಿಸಿದ ಬಳಿಕ, ಹೋಟೆಲಿನಿಂದ ಹೊರಗೆ ಬಂದ ಮೇಲೆ ಶ್ರೀಧರ ರಾಜಶೇಖರನಿಗೆ "ಥ್ಯಾಂಕ್ಸ್, ಬರುತ್ತೇನೆ" ಎಂದು ಕೂಡಾ ಹೇಳದೆ, ತನಗೂ ಅವನಿಗೂ ಏನೂ ಸಂಬಂಧವಿಲ್ಲದವನಂತೆ ಹೊರಟುಹೋದ. ಆಕಸ್ಮಿಕವಾಗಿ ವಿಚಿತ್ರ ಮೃಗವೊಂದನ್ನು ಕಂಡವನಂತೆ ರಾಜಶೇಖರ ಬೆಪ್ಪು ಬೆರಗಾಗಿ ತನ್ನಿಂದ ದೂರವಾಗುತ್ತಿದ್ದ ಶ್ರೀಧರನ ಬೆನ್ನನ್ನೇ ನೋಡುತ್ತಾ ನಿಂತಿದ್ದ.

೭

ಅಂದಿನಿಂದ ರಾಜಶೇಖರನಿಗೆ ಶ್ರೀಧರನ ಪರಿಚಯ ಬೆಳೆಯಿತು. ಆದರೆ ಅದನ್ನು ಸ್ನೇಹವೆಂದು ಕರೆಯಲಾಗಲಿ, ತನಗೆ ಶ್ರೀಧರನ ನೈಜವಾದ ಸ್ವರೂಪದ ಪರಿಚಯವಿದೆಯೆಂದಾಗಲಿ ಹೇಳಲು ರಾಜಶೇಖರನಿಗೆ ಧೈರ್ಯವಿರಲಿಲ್ಲ. ದಿನ ಕಳೆದಂತೆ ಪರಿಚಯ ಬೆಳೆಯಿತು ಎಂದುಕೊಳ್ಳುತ್ತಿರುವಾಗಲೆ, ಏನೋ ಒಂದು ಸಣ್ಣ ಘಟನೆ, ಯಾವುದೋ ಮಾತು, ಅದುವರೆಗಿನ ಲೆಕ್ಕವನ್ನೆಲ್ಲ ತಲೆಕೆಳಗು ಮಾಡಿ, ನಿಜವಾದ ಶ್ರೀಧರ ತನ್ನಿಂದ ಬಹು ದೂರವಿದ್ದಾನೆ ಎನ್ನಿಸುವುದು ರಾಜಶೇಖರನಿಗೆ. ಆದರೆ ಹಾಗೆಂದು ಅವನು ಶ್ರೀಧರನ ಪರಿಚಯ ಮಾಡಿಕೊಳ್ಳಬೇಕೆಂಬ ಪ್ರಯತ್ನವನ್ನು ಮಾತ್ರ ಬಿಡಲಿಲ್ಲ. ಆದರೆ ಶ್ರೀಧರ ಮಾತ್ರ ಆ ದಾರಿಯಲ್ಲಿ ಯಾವ ಪ್ರಯತ್ನವನ್ನೂ ಮಾಡುತ್ತಿರಲಿಲ್ಲ. ಹೆಚ್ಚು ಕಡಿಮೆ ಮೊದಲು ಹೇಗಿದ್ದನೋ ಹಾಗೇ ಇದ್ದ. ಆದರೆ ಉಳಿದ ಹುಡುಗರಿಗೆ ಮಾತ್ರ ಶ್ರೀಧರನ ಇಟರು ರಾಜಶೇಖರನನ್ನು ಕೆಣಕುವುದು ತಮ್ಮ ಮೈಗೆ ಆರೋಗ್ಯಕರವಲ್ಲವೆಂಬುದು ಅರಿವಾಯಿತು. ಹೀಗೇ ತಿಂಗಳುಗಳು ಕಳೆದು, ಆ ವರ್ಷದ ಪರೀಕ್ಷೆ ಮುಗಿದು, ರಾಜಶೇಖರನ ಊರಿಗೆ ಹೊರಡುವ ದಿನ ಹತ್ತಿರ ಬಂದಿತು. ರಾಜಶೇಖರನನ್ನು ಹುಡುಕಿಕೊಂಡು ಹಾಸ್ಟೆಲ್ಲಿಗೆ ಬಂದ. ಅವನ ಅನಿರೀಕ್ಷಿತವಾದ ಆಗಮನದಿಂದ ರಾಜಶೇಖರನಿಗೆ ಆಶ್ಚರ್ಯವಾಯಿತು.

"ಇದೇನು ಶ್ರೀಧರ್ ಅಪರೂಪವಾಗಿ ಬಂದಿರಲ್ಲಾ, ಬನ್ನಿ ಕುಳಿತುಕೊಳ್ಳಿ. ಊರಿಗೆ ಹೊರಡುವ ಸಿದ್ಧತೆಗಳ ಗದ್ದಲದಲ್ಲಿ ರೂಮೆಲ್ಲಾ ಹೊಲಸಾಗಿದೆ."

—ಎಂದ, ನೆಲದಮೇಲೆ ಹರಡಿದ ಪುಸ್ತಕಗಳನ್ನೆಲ್ಲಾ ಸರಿಸಿ, ಒಂದೆಡೆ ಗುಡ್ಡೆ ಮಾಡಿ, ಶ್ರೀಧರನಿಗೆ ಚಾಪೆಯಮೇಲೆ ಕುಳಿತುಕೊಳ್ಳಲು ಸ್ಥಳ ತೋರಿಸಿ.

" ಇದಕ್ಕಿಂತ ಹೊಲಸು ಸ್ಥಳದಲ್ಲಿ ಕುಳಿತು ನನಗೆ ಅಭ್ಯಾಸವಾಗಿದೆ."

—ಎಂದ ಶ್ರೀಧರ ಕುಳಿತುಕೊಳ್ಳುತ್ತಾ.

" ನನ್ನ ಮುಖ ಮರ್ಯಾದೆಗಾಗಿ ಆ ಮಾತು ಹೇಳುತ್ತಿದ್ದೀರಿ–"

" ಛೇ ! ಉಂಟೆ. ಅದಕ್ಕೇ ನೋಡಿ ಜನ ಸತ್ಯಹೇಳಿದರೆ ನಂಬುವುದಿಲ್ಲ ಎನ್ನುವುದು. ಒಮ್ಮೆ ನಾನು ಓದುವ ಸ್ಥಳವನ್ನು ನೀವೇ ಕಣ್ಣಾರೆ ನೋಡಿದರೆ ನಿಮಗೇ ನಂಬಿಕೆಯಾಗುತ್ತದೆ."

" ನಿಮ್ಮ ಕೋಣೆಯನ್ನು ನೋಡುವ ಅವಕಾಶವೇ ನನಗಿಲ್ಲವಲ್ಲಾ ? "

" ಅದೇನೂ ಅಂಥ ಬಯಸುವಂಥ ಭಾಗ್ಯವಲ್ಲ. ಎಂದಾದರೊಂದು ದಿನ ಅಗತ್ಯ ಬಿದ್ದರೆ ನೋಡುವಿರಂತೆ. ಈಗ ನಿಮ್ಮಿಂದ ನನಗೆ ಒಂದು ಕೆಲಸ ವಾಗಬೇಕಾಗಿತ್ತು."

" ಅದೇನು ಹೇಳಿ. ನನ್ನಿಂದ ಆಗುವುದಾದರೆ ಖಂಡಿತ ಮಾಡುತ್ತೇನೆ."

" ಹೇಳುತ್ತೇನೆ. ಹೇಳುವುದಕ್ಕೇನೂ ಸಂಕೋಚವಿಲ್ಲ, ಅಗತ್ಯ ಯಾವ ಸಂಕೋಚವನ್ನೂ ಮನ್ನಿಸುವುದಿಲ್ಲ, ಅಲ್ಲವೇ ? ಆದರೆ ನಾನು ಬಂದ ಕೆಲಸ ಹೇಳುವ ಮೊದಲು ಒಂದು ಮಾತು ನಾನೇ ಹೇಳಿ ಬಿಡುತ್ತೇನೆ. ಮೊದಲ ನೆಯದಾಗಿ ನನಗಾಗಿ ನೀವು ತೊಂದರೆ ತೆಗೆದುಕೊಳ್ಳಬೇಕಾದ ಅಗತ್ಯವಿಲ್ಲ, ಅಲ್ಲದೆ, ನನ್ನ ಮಾತು ಕೇಳಿದ ಬಳಿಕ ಆಗುವುದಿಲ್ಲ ಎಂದು ಹೇಳಿದರೂ ನಾನು ಬೇರೆ ಏನೂ ತಿಳಿದುಕೊಳ್ಳುವುದಿಲ್ಲ, ಆದ್ದರಿಂದ ನಿರ್ದಾಕ್ಷಿಣ್ಯವಾಗಿ ಹೇಳ ಬಹುದು.

" ಮಾತು ಅದೇನೆಂದು ಹೇಳಿದ ಬಳಿಕ ತಾನೇ ಮುಂದಿನ ಮಾತು. ಅಲ್ಲದೆ ನೋಡಿ—ನಿಮಗಾಗಿ ನಾನು ಏನು ಕೆಲಸ ಬೇಕಾದರೂ ಮಾಡಲು ಸಿದ್ಧನಾಗಿದ್ದೇನೆ. ನೀವಿಲ್ಲದೆ ಹೋಗಿದ್ದರೆ ನನ್ನ ಬಾಳು ನರಕವಾಗುತ್ತಿತ್ತು ಇಲ್ಲಿ. ಆದ್ದರಿಂದ ನನ್ನಲ್ಲಿ ಯಾವ ಬಗೆಯ ಸಂಕೋಚವನ್ನೂ ವ್ಯಕ್ತಪಡಿಸ ಬಾರದು."

" ಹಾಗಲ್ಲ. ಜೀವನದಲ್ಲಿ ಆಸೆಗಿಂತ ನಿರಾಶೆಯನ್ನು ನಿರೀಕ್ಷಿಸುವುದೇ ಒಳಿತೆಂಬುದು ನಾನು ಜೀವನದಲ್ಲಿ ಕಲಿತ ಪಾಠ. ಅಲ್ಲದೆ ಅದರಿಂದ ಎಷ್ಟೋ ಬಾರಿ ವಿನಾಕಾರಣ ವ್ಯಥೆಪಡುವ ಸಂದರ್ಭವೂ ತಪ್ಪುತ್ತದೆ."

" ನನ್ನಲ್ಲಿ ಅಂಥ ನಿರೀಕ್ಷೆಗೆ ಏನೂ ಕಾರಣವಿಲ್ಲ.

" ಥ್ಯಾಂಕ್ಸ್."

" ಹಾಗಾದರೆ ನಿಮ್ಮ ಕೆಲಸವೇನೆಂಬುದನ್ನು ಹೇಳಿ."

" ಜೂಆಲಜಿ ಲೆಕ್ಚರರ್ ನಾಗರಾಜಶೆಟ್ಟರಿಗೂ, ನಿಮಗೂ ತುಂಬಾ ಆತ್ಮೀಯತೆ ಇದೆ ಎಂದು ನಾನು ಅರಿತಿದೇನೆ. ಅಲ್ಲವೇ ? "

" ನಿಜ."

" ಆದುದರಿಂದ ಅವರಿಗೆ ನನ್ನ ಪರವಾಗಿ ನೀವು ಒಂದು ಮಾತು ಹೇಳ ಬೇಕು." ಈ ಬಾರಿ ಉಳಿದ ವಿಷಯಗಳಲ್ಲಿ ಚೆನ್ನಾಗಿ ಮಾಡಿದ್ದರೂ, ಆಪ್ಷನಲ್ಸ್‌ನ ವಿಷಯದಲ್ಲಿ ನನಗಷ್ಟು ನಂಬಿಕೆಯಿಲ್ಲ. ಎಲ್ಲಕ್ಕಿಂತ ಜೂಆಲಜಿಯದೇ ಗಾಬರಿಯಾಗಿದೆ. ಪ್ರಾಕ್ಟಿಕಲ್ಸ್‌ನಲ್ಲೂ ಸಾಕಷ್ಟು ನಂಬರು ಬಂದಿಲ್ಲ ..."

" ಒಂದು ಸಬ್ಜೆಕ್ಟ್‌ನಲ್ಲಿ ಕೊಂಚ ಮಾರ್ಕ್ಸ್ ಕಡಮೆ ಬಂದಿದ್ದರೂ ಇಲ್ಲಿ ನಿಲ್ಲಿಸುವುದಿಲ್ಲ, ಎಷ್ಟಾದರೂ ಇದು ಕ್ಲಾಸ್ ಎಕ್ಸಾಮಿನೇಷನ್ ಎಂದು ಕೇಳಿದೆನಲ್ಲಾ ನಾನು."

ಶ್ರೀಧರನ ಮಾತಿನ ನಡುವೆಯೇ ಬಾಯಿ ಹಾಕಿ ಹೇಳಿದ ರಾಜಶೇಖರ.

" ಪಾಸು ಫೇಲಿನ ಚಿಂತೆ ನನಗಿಲ್ಲ."

" ಮತ್ತೆ ? "

" ಪಾಸಾದರೂ ಸಾಕಷ್ಟು ನಂಬರು ಬರದಿದ್ದರೆ ಮುಂದಿನ ವರ್ಷ ನನಗೆ ಈಗಿರುವ ಹಾಫ್ ಫ್ರೀಷಿಪ್ಪಿಗೇ ಖೋತಾ ಬರಬಹುದು ಎಂಬ ಭಯ. ಪಾಸಾಗಿಯೂ ಫ್ರೀಷಿಪ್ಪಾದರೂ ಬರದಿದ್ದರೆ ಅಲ್ಲಿಗೆ ನನ್ನ ವಿದ್ಯಾಭ್ಯಾಸಕ್ಕೆ ತಿಲತರ್ಪಣ ಕೊಟ್ಟಂತೆಯೇ ? "

" ಏಕೆ ? "

" ಆ ಪ್ರಶ್ನೆಗೆ ಉತ್ತರ ಬಹು ಸುಲಭವಾದದ್ದು. ಯೋಚಿಸಿದರೆ ನಿಮಗೇ ಹೊಳೆಯಬಹುದು."

" ಅದೇನೆಂದು ಹೇಳಬಾರದೇ ? "

" ಬೇಡವೆಂದರೆ ಗುಟ್ಟಾಗಿರುವುದಲ್ಲ ಅದು. ಲೋಕದಲ್ಲಿ ಕಳವು, ಕೊಲೆ, ವ್ಯಭಿಚಾರ ಯಾವುದನ್ನಾದರೂ ಮುಚ್ಚಿಡಬಹುದು. ಬಡತನವನ್ನು ಮುಚ್ಚಿಡುವುದು ಸಾಧ್ಯವೇ? ಎಂದಿದ್ದರೂ ಅದು ಎಲ್ಲರಿಗೂ ತಿಳಿಯುವ ವಿಚಾರ. ಆದುದರಿಂದ ಅದು ಈಗಲೇ ನಿಮಗೆ ತಿಳಿಯುವುದರಲ್ಲಿ ತೊಂದರೆ ಏನೂ ಇಲ್ಲ "

" ಹಾಫ್ ಫ್ರೀಷಿಪ್ಪಾದರೂ ಸಿಗದೆ ಇದ್ದರೆ ಮುಂದೆ ಓದುವುದು ಸಾಧ್ಯವೇ ಇಲ್ಲವೇ ? "

—ಶ್ರೀಧರನ ಮಾತನ್ನು ನಂಬಲಾಗದವನಂತೆ ಕೇಳಿದ ರಾಜಶೇಖರ.

" ತಿರುಪೆ ಬೇಡಿ ಓದಬಹುದು. ನಿಜ. ತಿರುಪೆಯನ್ನು ಬೇಡಬಹುದು.

ಆದರೆ ಕೊಡುವವರು ಮಾತ್ರ ಇಲ್ಲ, ಆದ್ದರಿಂದ ಸಾಧ್ಯವಿಲ್ಲ."

" ಅಷ್ಟೇಕೆ ನಿರಾಶರಾಗುತ್ತೀರೀ. ನಿಮ್ಮ ನೈಜಸ್ಥಿತಿ ತಿಳಿದರೆ ಖಂಡಿತ ಆ ಸವಲತ್ತು ತಪ್ಪಿಸುವುದಿಲ್ಲ."

" ನೋಡಿ ರಾಜಶೇಖರ್, ಜೀವನದಲ್ಲಿ ನಿಮಗಿರುವ ಭ್ರಮೆಯೊಂದೂ ನನಗಿಲ್ಲ. ಫ್ರೀಷಿಪ್, ಹಾಫ್–ಫ್ರೀಷಿಪ್ಪುಗಳನ್ನು ಕೊಡುವ ಉದ್ದೇಶ ಬಡವರಿಗೆ, ಬುದ್ಧಿವಂತರಿಗೆ ಅನುಕೂಲವಾಗಲಿ ಎಂದೇ ನಾನೂ ಅದನ್ನು ಬಲ್ಲೆ. ಆದರೆ ಅದನ್ನು ವಿನಿಯೋಗಿಸುವಾಗ ಗಣನೆಗೆ ಬರುವ ವಿಚಾರಗಳೇ ಬೇರೆ."

" ಏನು ? "

" ಜಾತಿ—ನಂಟಸ್ತಿಕೆ—ಪ್ರಭಾವ. ಇವು ಮೂರಕ್ಕೇ ಅಲ್ಲಿ ಬೆಲೆ. ಅವಸರದಲ್ಲಿ ನನ್ನ ಮಾತು ಸುಳ್ಳು ಎಂದು ಹೇಳಬೇಡಿ. ಇಂದು ನಿಮಗದು ಗುರುತಿರದಿರಬಹುದು. ಇಂದಲ್ಲ ನಾಳೆ ನಿಮಗೇ ತಿಳಿಯುತ್ತದೆ. ಈಗ ಆ ಮಾತೆಲ್ಲಾ ಏಕೆ ? ಈಗ ಬೇಕಾದುದಿಷ್ಟೆ—"

" ಏನು ಹೇಳಿ ? "

" ನಾಗರಾಜಶೆಟ್ಟರಿಗೆ ಹೇಳಿ, ನನ್ನ ಪೇಪರಿಗೆ ಕೊಂಚ ಉದಾರವಾಗಿ ನಂಬರು ಕೊಡುವಂತೆ ಹೇಳಿ. ಈಗ ಅವರು ಅಷ್ಟು ಔದಾರ್ಯ ತೋರಿದರೆ, ಮುಂದೆಯೂ ಅವರಿಂದಾದ ಸಹಾಯ ಪಡೆಯಬಹುದು."

" ಅಷ್ಟೇ ತಾನೇ. ಅದೇನು ದೊಡ್ಡ ಕೆಲಸ."

" ಅಷ್ಟು ತಾತ್ಸಾರ ಬೇಡ. ಅದು ಅಷ್ಟು ಸುಲಭದ ಕೆಲಸವಾಗಿದ್ದರೆ ನಾನೇ ನಾಗರಾಜಶೆಟ್ಟರನ್ನು ಕಾಣುತ್ತಿದ್ದೆ. ನೀವು ಅಂದುಕೊಂಡಷ್ಟು ಸುಲಭದ ಕೆಲಸವಲ್ಲ ಅದು. ಸುಲಭದ ಕೆಲಸ ಎಂದುಕೊಂಡಿದ್ದರೆ ಇಷ್ಟು ಆಪ್ತನಾಗಿಯೂ ನೀವಿನ್ನೂ ನಾಗರಾಜಶೆಟ್ಟರನ್ನು ಅರ್ಥಮಾಡಿಕೊಂಡಿಲ್ಲವೆಂದು ಹೇಳಬೇಕಾಗುತ್ತೆ."

" ನನಗೇನೊ ಅದು ಅಷ್ಟು ಕಷ್ಟದ ಕೆಲಸವಲ್ಲವೆಂದೇ ತೋರುತ್ತದೆ. ನನಗೆ ತಿಳಿದ ಮಟ್ಟಿಗೆ ಅವರು ದೇವರಂಥವರು. ಕಷ್ಟದಲ್ಲಿರುವವರ ಬಗ್ಗೆ ತುಂಬಾ ಅನುತಾಪವಿದೆ. ನನಗೆ ಕೈ ನೀಡಿ ನಿಲ್ಲಿಸಿದವರೇ ಅವರು."

" ಅವರ ಕರುಣೆ, ಅನುತಾಪ ಎಲ್ಲವೂ ಒಂದು ಮಿತಿಗೊಳಪಟ್ಟಿರುವುದು ನಿಮಗೆ ಕಾಣದು " ಹೋಗಲಿ ಬಿಡಿ ಈಗ ಆ ಮಾತೆಲ್ಲಾ ಏಕೆ ? ದಯವಿಟ್ಟು ಸಾಧ್ಯವಾದರೆ ಅಷ್ಟು ಕೆಲಸ ಮಾಡಿಕೊಡಿ.

" ಅಗತ್ಯವಾಗಿ. ನಿಮಗಿಷ್ಟು ತೊಂದರೆ ಇರುವುದು ನನಗೆ ತಿಳಿದಿರಲಿಲ್ಲ........"

" ತಿಳಿದಿದ್ದರೆ ಏನು ಮಾಡುತ್ತಿದ್ದಿರಿ ? " ಇದ್ದಕ್ಕಿದ್ದ ಹಾಗೆ ಕರ್ಕಶವಾಗಿ ಕೇಳಿದ ಶ್ರೀಧರ. " ನೋಡಿ ರಾಜಶೇಖರ್, ನನ್ನ ನಿಮ್ಮ ಪರಿಚಯ ಉಳಿದಿರ ಬೇಕೆಂದರೆ – ಅದು ಉಳಿಯಲೇ ಬೇಕಾದ ಅಗತ್ಯವೇನೂ ಇಲ್ಲ – ಆದರೂ ಉಳಿಯಬೇಕು ಎಂಬ ಆಸೆ ಇದ್ದರೆ ಒಂದು ಮಾತನ್ನು ನೆನಪಿನಲ್ಲಿಟ್ಟುಕೊಳ್ಳಿ. ನಾನು ಬಂದಿರುವುದು ನಿಮ್ಮ ಸಹಾಯವನ್ನು ಅಪೇಕ್ಷಿಸಿ—ಕರುಣೆಯನ್ನಾಗಲಿ, ಮರುಕವನ್ನಾಗಲಿ ಯಾಚಿಸಿಯಲ್ಲ."

" ಈ ಮಾತು ಕೇಳುತ್ತೇನೆ ಎಂದು ಬೇಸರ ಮಾಡಿಕೊಳ್ಳಬೇಡಿ. ಕಷ್ಟ ದಲ್ಲಿರುವವರನ್ನು ಕಂಡು ಮರುಗುವುದು, ಕನಿಕರಿಸುವುದು ತಪ್ಪೆ ? "

" ಉಳಿದವರ ಪಾಲಿಗೆ ಅಂಥ ಕನಿಕರ ಅಮೃತವೇ ಇರಬಹುದು. ನನ್ನ ಪಾಲಿಗಂತೂ ಅದು ಹಾಲಾಹಲ. ನನ್ನ ಬಳಿ ಅದರ ಹೆಸರೇ ಎತ್ತಬೇಡಿ "

" ಹೋಗಲಿ ಬಿಡಿ. ಹೇಗೂ ನಾನು ಊರಿಗೆ ಹೋಗುವ ಮುನ್ನ ನಾಗ ರಾಜಶೆಟ್ಟರನ್ನು ಕಂಡು 'ಹೋಗುತ್ತೇನೆ' ಎಂದು ಹೇಳಲು ಹೋಗಬೇಕಾ ಗಿತ್ತು. ಹೋದಾಗ ನಿಮ್ಮ ವಿಷಯ ಮಾತಾಡುತ್ತೇನೆ."

" ಥ್ಯಾಂಕ್ಸ್. ಹಾಗಾದರೆ ನಾನಿನ್ನು ಬರಲೇ ? "

" ಅಷ್ಟು ಅವಸರವೇ ? "

" ಅವಸರವೇನೂ ಇಲ್ಲ—"

" ಹಾಗಾದರೆ ಕುಳಿತುಕೊಳ್ಳಿ."

" ಹೋಗಬೇಕಾದ ಅವಸರವೂ ಇಲ್ಲ, ಇನ್ನು ಹೆಚ್ಚು ಹೊತ್ತು ಇಲ್ಲಿರ ಬೇಕಾದ ಅಗತ್ಯವೂ ಇಲ್ಲ, ಬಂದ ಕೆಲಸ ಆಯಿತು. ಹೊರಡುತ್ತೇನೆ."

" ಒಂದು ನಿಮಿಷ ತಾಳಿ. ಬಟ್ಟೆ ಹಾಕಿಕೊಳ್ಳುತ್ತೇನೆ. ಅಪರೂಪಕ್ಕೆ ಬಂದಿದ್ದೀರ. ಒಂದು ಕಪ್ಪು ಕಾಫಿ ಕುಡಿದು ಬರೋಣ."

" ಕಾಫಿಗೆ ಹೊಗಲೇ ಬೇಕೆ ? "

" ತಪ್ಪೆ ? "

" ನಾನು ಬಂದಾಗಲೆಲ್ಲ ಕಾಫಿಗೆ ಕರೆಯುವ ವಾಡಿಕೆಯನ್ನೇ ಮಾಡಿ ಕೊಳ್ಳದಿದ್ದರೆ ತಪ್ಪೇನೂ ಇಲ್ಲ."

" ಒಂದುವೇಳೆ ಕರೆದುಕೊಂಡು ಹೊದರೂ ತಾನೇ ತಪ್ಪೇನು. ಸ್ನೇಹಿತರು ಸ್ನೇಹಿತರಿಗೆ ಕಾಫಿ ಕೊಡಿಸಬಾರದೇ ? "

" ನಾವಿಬ್ಬರೂ ಸ್ನೇಹಿತರಾದಾಗ ಆ ಮಾತು."

" ಅಂದರೆ ! ಈಗ ನಾವಿಬ್ಬರೂ ಸ್ನೇಹಿತರಲ್ಲವೇ ? "

—ಶ್ರೀಧರನಾಡಿದ ಮಾತನ್ನು ಕೇಳಿ ಚಕಿತನಾಗಿ ಕೇಳಿದ ರಾಜಶೇಖರ.

" ಅಿಲ್ಲ."

—ಎಂದ ಶ್ರೀಧರ ಖಚಿತವಾದ ಧ್ವನಿಯಲ್ಲಿ.

ಶ್ರೀಧರನ ಮೊದಲ ಮಾತಿನಿಂದಲೇ ಚಕಿತನಾಗಿದ್ದ ರಾಜಶೇಖರ, ಈ ಮಾತ್ತು ಕೇಳಿ ಮತ್ತಷ್ಟು ತಬ್ಬಿಬ್ಬಿಲಾಗಿ ಕೇಳಿದ

" ಹಾಗೇಕೆ ಹೇಳುತ್ತೀರ ? "

" ನೋಡಿ ರಾಜಶೇಖರ್. ಸ್ನೇಹ—ಸಮಾನ ಧರ್ಮೀಯರಲ್ಲಿ, ಸಮಾನ ಬಲರಲ್ಲಿ, ಸಮಾನ ವಿಚಾರ, ಸಮಾನ ಧನರಲ್ಲಿ ಸಾಧ್ಯ. ಆದರೆ ನಾವಿಬ್ಬರೂ ಹಾಗಿಲ್ಲ. ನಮ್ಮಿಬ್ಬರ ನಡುವೆ ಅಜಗಜಾಂತರವಿದೆ. ನಿಮಗೆ ಹತ್ತುಬಾರಿ ನನ್ನನ್ನು ಕರೆದು ಕಾಫಿ ಕೊಡಿಸುವ ಶಕ್ತಿ ಇದೆ. ಆದರೆ ನಿಮ್ಮ ಹತ್ತು ಭಾರಿಗೆ ಒಂದು ಬಾರಿಯಾದರೂ ಪ್ರತಿ ಮಾಡುವ ಶಕ್ತಿ ನನಗಿಲ್ಲ. ಆದ್ದರಿಂದ ನಮ್ಮಲ್ಲಿ ಸ್ನೇಹವೆಲ್ಲಿ ಸಾಧ್ಯ ? "

" ಶಕ್ತಿ ಇಲ್ಲದಿದ್ದರೇನು ? ಮನಸ್ಸಿದ್ದರೆ ಸಾಲದೇ ? "

" ಅದಕ್ಕೇನು ಬೆಲೆ ? ಹೆಲ್ ಈಸ್ ಪೇವ್ಡ್ ವಿತ್ ಗುಡ್ ಇಂಟೆಂಷನ್ಸ್ (ಉತ್ತಮ ಆಶಯಗಳಿಂದ ನರಕದ ನೆಲಗಟ್ಟು ರಚಿತವಾಗಿದೆ) ಎಂಬ ಗಾದೆ ಕೇಳಿಲ್ಲವೇ ? ಉತ್ತಮ ಆಶಯಗಳನ್ನು ನರಕದಲ್ಲಿ ನೆಲಕ್ಕಾದರೂ ಹಾಸುತ್ತಾರೆ. ಅಷ್ಟು ಬೆಲೆಯಾದರೂ ಇದೆ. ಆದರೆ ಇಲ್ಲಿ ಅವಕ್ಕೆ ಅಷ್ಟು ಬೆಲೆಯೂ ಇಲ್ಲ."

" ತುಂಬಾ ನಿರಾಶಾವಾದಿಗಳಂತೆ ಮಾತಾಡುತ್ತೀರಿ ನೀವು, ಶ್ರೀಧರ್."

" ವಾಸ್ತವಿಕತೆಯ ಅರಿವನ್ನು ನಿರಾಶಾವಾದವೆಂದು ಭ್ರಮಿಸಿದರೆ ತಪ್ಪು ನಿಮ್ಮದು; ನನ್ನದಲ್ಲ, ಈಗ ಆ ಮಾತೇಕೆ ? ಏಳಿ. ನಿಮ್ಮ ಜೇಬಿನಲ್ಲಿ ಭಾರವಾಗಿರುವ ದುಡ್ಡು ಸೇಟ್ ಗಲ್ಲಾ ಸೇರಲು ತವಕಪಡುತ್ತಿದೆ. ಅದರ ಆತುರ ತೀರಿಹೋಗಲಿ."

—ಎಂದ ಶ್ರೀಧರ ಹೊರಗೆ ಹೊರಡಲು ಸಿದ್ಧನಾಗಿ ಎದ್ದು ನಿಂತು. ರಾಜಶೇಖರನೂ ಕೋಟು ಧರಿಸಿ ಅವನೊಂದಿಗೆ ಹೊರಟ.

ಕಾಫಿ ಕುಡಿದಾದ ಮೇಲೆ, ಹೊರಡುವ ಮುನ್ನ ಶ್ರೀಧರ ಮತ್ತೊಮ್ಮೆ ತನ್ನ ಕೆಲಸವನ್ನು ರಾಜಶೇಖರನಿಗೆ ನೆನಪಿಸಿ, ತನ್ನ ಮನೆಯತ್ತ ಹೊರಟ.

" ಖಂಡಿತ ಮರೆಯುವುದಿಲ್ಲ, ನಾಳೆ ಸಂಜೆ ಸಿಕ್ಕರೆ ಏನು ಹೇಳುತ್ತಾರೊ ಕೇಳಿ ಹೇಳುತ್ತೇನೆ."

—ಎಂದು ರಾಜಶೇಖರ ಅವನ ಮಾತಿಗೆ ಉತ್ತರವಿತ್ತ. ಆದರೆ ಅವನ ಮನಸ್ಸಿನಲ್ಲಿ ಶ್ರೀಧರನ ಮಾತಿಗಿಂತ ಹೆಚ್ಚಾಗಿ, ಅವನೇ ಒಂದು ದೊಡ್ಡ ಒಗಟಾಗಿ ತುಂಬಿದ್ದ.

" ಬಾ ರಾಜಶೇಖರ್, ಕುಳಿತುಕೋ "

—ಎಂದು ಮನೆಗೆ ಬಂದ ರಾಜಶೇಖರನನ್ನು ವಿಶ್ವಾಸದಿಂದ ಕರೆದು ಕೂಡಿಸಿ, ಒಳಗೆ ಹೋಗಿ ಅವನಿಗೆ ಕಾಫಿ ತಂದುಕೊಟ್ಟು—

" ಪರೀಕ್ಷೆ ಮುಗಿಯಿತು. ಊರಿಗೆ ಯಾವಾಗ ಹೊರಡುತ್ತೀಯ ? "

—ಎಂದು ಕೇಳಿದರು ನಾಗರಾಜಶೆಟ್ಟರು.

" ನಾಳೆ ಬೆಳಗಿನ ಬಸ್ಸಿಗೆ ಹೊರಡಬೇಕೆಂದು ಮಾಡಿದ್ದೇನೆ. ಆ ವಿಷಯ ವನ್ನೇ ನಿಮಗೆ ಹೇಳಿ ಹೋಗಲೆಂದು ಬಂದೆ."

" ತುಂಬಾ ಸಂತೋಷ. ಊರಿಗೆ ಹೋದಾಗ ನಿಮ್ಮ ತಂದೆಯವರಿಗೆ ನಾನು ಕೇಳಿದೆನೆಂದು ಹೇಳು. ರಜಾ ಎಂದುಕೊಂಡು ಓದನ್ನು ಮರೆಯಬೇಡ. ಆದಷ್ಟು ಅಭ್ಯಾಸ ಮಾಡುತ್ತಿರು. ಅಂದಹಾಗೆ ಪರೀಕ್ಷೆಯಲ್ಲಿ ಹೇಗೆ ಮಾಡಿ ದೀಯ ? ಎಲ್ಲಾ ಪೇಪರುಗಳಲ್ಲೂ ಚೆನ್ನಾಗಿ ಮಾಡಿದೀಯ ತಾನೇ ? "

" ಆದಷ್ಟು ಮಟ್ಟಿಗೆ ಚೆನ್ನಾಗಿಯೇ ಮಾಡಿದೀನಿ ಎಂದುಕೊಂಡಿದೇನೆ. "

" ಯಾವುದರಲ್ಲಾದರೂ ಅನುಮಾನವಿದ್ದರೆ ಈಗಲೇ ಹೇಳು, ಮೊದಲೇ ವಿಚಾರಿಸುತ್ತೇನೆ. ನೀನು ಉತ್ತಮ ರೀತಿಯಲ್ಲಿ ತೇರ್ಗಡೆಯಾಗಿ ಮುಂದೆ ಬರಬೇಕೆಂಬುದೇ ನನ್ನ ಅಭಿಲಾಷೆ."

" ನಿಮ್ಮ ಆಶೀರ್ವಾದವೊಂದಿದ್ದರೆ, ನಿಮ್ಮ ಬಯಕೆ ಸಫಲವಾಗುತ್ತದೆ ಸಾರ್."

" ನನ್ನ ಆಶೀರ್ವಾದದ ವಿಷಯದಲ್ಲಿ ಸಂಶಯವೇ ಬೇಡ. ಬರೀ ಆಶೀ ರ್ವಾದವೇನು, ನಿನಗಾಗಿ ನಾನು ಬೇಕಾದುದನ್ನು ಮಾಡಲು ಸಿದ್ಧವಾಗಿದೇನೆ."

" ತುಂಬಾ ಥ್ಯಾಂಕ್ಸ್ ಸಾರ್. ನಿಮ್ಮಂಥವರು ಇಲ್ಲಿ ಮಾರ್ಗದರ್ಶಕ ರಾಗಿ ದೊರೆತುದು ನನ್ನ ಪುಣ್ಯ. ತಾವು ಏನೂ ತಿಳಿದುಕೊಳ್ಳುವುದಿಲ್ಲವೆಂದರೆ ತಮ್ಮಲ್ಲಿ ಒಂದು ಮಾತು ಕೇಳುವುದಿತ್ತು . . . ."

" ಅದೇನು ಕೇಳು. ನನ್ನಲ್ಲಿ ಯಾವ ಮಾತನ್ನು ಕೇಳಲೂ ನೀನು ಸಂಕೋಚಪಡಬೇಕಾದುದಿಲ್ಲ."

" ಸಲಿಗೆ ಕೊಟ್ಟರೆ ಇಲ್ಲದ ಅಧಿಕಪ್ರಸಂಗ ಬೆಳೆಸುತ್ತಾನೆ ಎಂದು ತಾವೆಲ್ಲಿ ಅಸಮಾಧಾನಪಟ್ಟುಕೊಳ್ಳುತ್ತೀರೋ ಎಂದು ನನಗೆ ಭಯ ! "

" ಅದಕ್ಕೇನೂ ಕಾರಣವಿಲ್ಲ, ಏನಾಗಬೇಕಾಗಿತ್ತು ಹೇಳು ? ಊರಿಗೆ ಹೋಗಲು ಹಣವೇನಾದರೂ ಕಡಿಮೆ ಬಂದಿದೆಯೇ? ಹಾಗಿದ್ದರೆ ಎಷ್ಟು ಬೇಕು ಹೇಳು ಕೊಡುತ್ತೇನೆ. ಊರಿನಿಂದ ಬಂದ ಮೇಲೆ ಹಿಂದಿರುಗಿಸುವಿಯಂತೆ."

" ಹಣದ್ದೇನೂ ತೊಂದರೆ ಇಲ್ಲ ಸಾರ್."

" ಹಾಗಾದರೆ ಮತ್ತೇನು ? "

" ನನ್ನ ಸ್ನೇಹಿತನೊಬ್ಬನ ವಿಷಯ ತಮ್ಮಲ್ಲಿ ಮಾತನಾಡುವುದಿತ್ತು."

" ನಿನ್ನ ಸ್ನೇಹಿತರ ವಿಷಯವೇ ? "

—ಆ ಮಾತು ಆಡುವವರೆಗೂ ಆತ್ಮೀಯತೆಯಿಂದ ಸಡಿಲವಾಗಿದ್ದ ನಾಗರಾಜಶೆಟ್ಟರ ಧ್ವನಿ ಕೊಂಚ, ಕಂಡೂ ಕಾಣದಷ್ಟೂ ಬಿರುಸಾದುದೂ ರಾಜ ಶೇಖರನ ಹೃದಯಕ್ಕೆ ವೇದ್ಯವಾಯಿತು. ಅದರಿಂದಾಗಿ ಮೊದಲಿನಷ್ಟು ಸಲೀ ಸಾಗಿ ಮಾತನಾಡಲು ಅವನ ನಾಲಿಗೆ ಹಿಂಜರಿಯಿತು. ತಮ್ಮ ಪ್ರಶ್ನೆಗೆ ಉತ್ತರ ಕೊಡದೆ ಮೂಕನಾಗಿ ನಿಂತ ರಾಜಶೇಖರನನ್ನು ಕಂಡು, ನಾಗರಾಜಶೆಟ್ಟರೇ ಮಾತನ್ನು ಮುಂದುವರಿಸಿ ಪ್ರಶ್ನೆಮಾಡಿದರು :

" ಯಾರು ನಿನ್ನ ಸ್ನೇಹಿತ ? ಅವನಿಗೆ ಏನಾಗಬೇಕಾಗಿತ್ತು ? "

" ನಿಮಗೂ ಅವನ ಪರಿಚಯವಿದೆ ಸಾರ್."

" ಅವನೂ ನನ್ನ ವಿದ್ಯಾರ್ಥಿಯೇ ? "

" ಹೌದು ಸಾರ್."

" ಯಾರು ? "

" ಶ್ರೀಧರಮೂರ್ತಿ ಅಂತ. ಪ್ರಾಕ್ಟಿಕಲ್ ಕ್ಲಾಸಿನಲ್ಲಿ ನಾವಿಬ್ಬರೂ ಜೊತೆಗೇ ಇರುತ್ತೇವೆ. ನಮ್ಮಿಬ್ಬರದೂ ಒಂದೇ ಟೇಬಲ್."

ಓ ! ಅವನೋ. ಗೊತ್ತಾಯಿತು. ಏನಾಗಬೇಕಂತೆ ಅವನಿಗೆ ? "

" ಪರೀಕ್ಷೆಯಲ್ಲಿ ನಿಮ್ಮ ಪೇಪರ್‌ನಲ್ಲಿ ಅಷ್ಟು ಚೆನ್ನಾಗಿ ಮಾಡಿಲ್ಲವಂತೆ. ಅದಕ್ಕೇ........"

" ಕೈ ಬಿಟ್ಟು, ಹೆಚ್ಚು ನಂಬರು ಹಾಕಲು ಹೇಳು ಅಂತ ಹೇಳಿದ ತಾನೇ."

—ತಾತ್ಸಾರ ಧ್ವನಿಯಲ್ಲಿ ಆ ಮಾತಾಡಿ, ರಾಜಶೇಖರನ ಅರ್ಧ ಮಾತನ್ನು ತಾವೇ ಮುಗಿಸಿದರು ನಾಗರಾಜಶೆಟ್ಟರು.

" ಹೌದು ಸಾರ್."

—ಎಂದ ರಾಜಶೇಖರ, ತನಗೆ ಹೇಳಲು ಕಷ್ಟವಾದ ಮಾತನ್ನು ಅವರೇ ಆಡಿ, ಆ ಸಂದಿಗ್ಧದಿಂದ ಅವನನ್ನು ತಪ್ಪಿಸಿದುದಕ್ಕಾಗಿ, ಮನದಲ್ಲೇ ಅವರಿಗೆ ಕೃತಜ್ಞತೆಯನ್ನು ಸೂಚಿಸಿ.

" ಇಲ್ಲಿ ನೋಡು ರಾಜಶೇಖರ್. ಈ ದಿನ ನಿನಗೊಂದು ಮಾತು ಹೇಳುತ್ತೇನೆ. ಈ ಮಾತನ್ನು ಎಂದೂ ಮರೆಯಬಾರದು."

—ಸಾಕಷ್ಟು ಬಿರುಸಾಗಿಯೇ ಆ ಮಾತನ್ನು ಹೇಳಿದರು ನಾಗರಾಜ

ಶೆಟ್ಟರು. ಅವರ ಧ್ವನಿಯಲ್ಲಾದ ಆ ಅನಿರೀಕ್ಷಿತ ಬದಲಾವಣೆಯನ್ನು ಕಂಡು ರಾಜಶೇಖರ ಗಾಬರಿಯಾಗಿ, ಪ್ರತಿಮಾತನಾಡಲಾಗದೆ ತಲೆತಗ್ಗಿಸಿ ಕುಳಿತ

" ಶ್ರೀಧರಮೂರ್ತಿ ನಿನಗೆ ತುಂಬಾ ಸ್ನೇಹಿತನೋ ? "

" ಸ್ನೇಹಿತನೇನೋ ನಿಜ. ಆದರೆ ತುಂಬಾ ಸ್ನೇಹಿತನೆಂದು ಹೇಳಲಾರೆ."

" ಹಾಗಾದರೆ ಇನ್ನೂ ಒಳ್ಳೆಯದೇ ಆಯಿತು. ಯಾವ ಮುಚ್ಚು ಮರೆಯೂ ಇಲ್ಲದೆ ಮಾತನಾಡಬಹುದು. ಶ್ರೀಧರ ನಿನ್ನ ಸ್ನೇಹಿತ ಎಂದು ತಿಳಿಯಿತು. ಹೊತ್ತು ಬಂದಾಗ ನಾನೇ ನಿನ್ನನ್ನು ಕರೆಸಿ ಹೇಳಬೇಕು ಎಂದು ಮಾಡಿದ್ದೆ. ಈ ದಿನ ನೀನೇ ಆ ಮಾತನ್ನೆತ್ತಿದುದು ಒಳ್ಳೆಯದೇ ಆಯಿತು. ಶ್ರೀಧರನ ಕೆಲಸ ಮಾಡಿಕೊಡುವುದಿರಲಿ, ಎಲ್ಲಕ್ಕೂ ಮೊದಲು ನೀನು ಅವನ ಸ್ನೇಹ ಮಾಡಿದುದೇ ನನಗೆ ಸರಿಕಾಣುವುದಿಲ್ಲ."

" ಏಕೆ ಸಾರ್ ? "

" ಶುದ್ಧ ದುರಹಂಕಾರಿ. ಲೋಕದಲ್ಲಿ ಯಾರೂ ಅವನಿಗೆ ಲಕ್ಷ್ಯವೇ ಇಲ್ಲ. ಅವನ ವಿಷಯ ಎಲ್ಲಾ ನನಗೆ ಗೊತ್ತಿದೆ. ಎರಡು ಹೊತ್ತು ನೆಟ್ಟಗೆ ತಿನ್ನಲು ಅನ್ನವಿಲ್ಲದೆ ಹೋದರೂ, ಊರು ಹಿಡಿಯದಷ್ಟು ಅಹಂಕಾರ. ಇದುರಿಗೆ ಕಂಡರೂ ಕಾಣದಂತೆ ಓಡಾಡುತ್ತಾನೆ."

" ಕ್ಷಮಿಸಬೇಕು ಸಾರ್. ನಾನೊಂದು ಮಾತು ಹೇಳಬಹುದೇ ? "

" ಏನು—ಹೇಳು ? "

" ತಾವು ಶ್ರೀಧರಮೂರ್ತಿಯ ವಿಷಯ ತಪ್ಪು ತಿಳಿದುಕೊಳ್ಳಬಾರದು. ನನಗೆ ತಿಳಿದ ಮಟ್ಟಿಗೆ ಆತ ದುರಹಂಕಾರಿಯಲ್ಲ."

" ಹಾಗಾದರೆ ನಿಮ್ಮ ತಿಳುವಳಿಕೆ ತಪ್ಪು. ಅದು ತಪ್ಪೋ ನೆಪ್ಪೋ ಏನಾದರಾಗಲಿ–ಅವನ ವಿಷಯದಲ್ಲಿ ನಾನೇನೂ ಮಾಡಲಾರೆ."

" ತಾವು ಹಾಗನ್ನಬಾರದು ಸಾರ್. ಅವನ ವಿಷಯದಲ್ಲಿ ಕೊಂಚ ಕನಿಕರ ತೋರಿಸಬೇಕು. ತಾವೇ ಅವನಿಗೆ ವಿದ್ಯಾದಾನ ಮಾಡಿದಂತಾಗುತ್ತದೆ ಈ ಬಾರಿ ಸಾಕಷ್ಟು ನಂಬರ್ ಬರದೆ ವಿದ್ಯಾರ್ಥಿ ವೇತನದ ಸೌಲಭ್ಯ ತಪ್ಪಿಹೋದರೆ, ಮುಂದಕ್ಕೆ ಓದುವುದೇ ಇಲ್ಲವಾಗುತ್ತದೆ " ಎಂದು ಹೇಳಿದ.

" ಅವನ ವಿದ್ಯೆ ಮುಂದುವರಿಯದೆ ಹೋದರೆ ಹೋಗಲೇಳು. ಅದರಿಂದ ಏನು ನಷ್ಟ ? ಯಾವ ಲೋಕ ಮುಳುಗಿ ಹೋಗುತ್ತದೆ ? "

" ಅವನ ಭವಿಷ್ಯವೇ ಹಾಳಾಗಿ ಹೋಗುತ್ತದೆಯಲ್ಲ."

" ಹೋಗಲಿ ಬಿಡು."

" ಅವನ ಜೀವನೋಪಾಯಕ್ಕೆ ದಾರಿಯೇ ಇಲ್ಲವಾದಂತಾಗುತ್ತದೆ."

" ಏಕೆ ? ಹೇಗೂ ಅವನ ತಾಯಿ ದಾರಿ ತೋರಿಸಿಕೊಟ್ಟಿದಾಳಲ್ಲ."

" ಏನು ದಾರಿ ಸಾರ್ ? "

" ಅವನ ತಾಯಿ ಈ ಮಗನನ್ನು ಸಾಕಲು ಅವರಿವರ ಮನೆಯಲ್ಲಿ ಅವಲಕ್ಕಿ, ಮೆಣಸಿನಪುಡಿ ಕುಟ್ಟುತ್ತಾಳಂತೆ. ಈ ಮಗ ಅವಳನ್ನು ಸಾಕಲು ಯಾವುದಾದರೂ ಹೋಟಲಿನಲ್ಲಿ ದೋಸೆ ಹಿಟ್ಟು ರುಬ್ಬಲಿ. ಬೆಂಗಳೂರಿನಲ್ಲಿ ಹೋಟಲುಗಳಿಗೇನು ಬರ ? "

ನಾಗರಾಜಶೆಟ್ಟರು ನಿರ್ದಾಕ್ಷಿಣ್ಯವಾಗಿ ಆಡಿದ ಆ ಮಾತನ್ನು ಕೇಳಿ, ಇದ್ದಕ್ಕಿದ್ದ ಹಾಗೇ ರಾಜಶೇಖರನಿಗೆ ಹೆಜ್ಜೆ ಜಾರಿ ಕತ್ತಲ ಕೂಪದಲ್ಲಿ ಬಿದ್ದಂತಾಯಿತು. ತಾನು ಹೊತ್ತು ತಂದ ರಾಯಭಾರ ವಿಫಲವಾದ ನಿರಾಶೆ ಅವನೆದೆಯಲ್ಲಿ ಕವಿಯಿತು. ಇವರು ಕೊಟ್ಟ ಉತ್ತರವನ್ನು ಶ್ರೀಧರನಿಗೆ ಹೇಗೆ ಹೇಳುವುದೆನಿಸಿ, ಹಾಗೇ ಶ್ರೀಧರನ ಪರಿಸ್ಥಿತಿ ನೆನಪಾಗಿ ಕಣ್ಣು ತೇವವಾಯಿತು. ಆ ದುಃಖದಲ್ಲೇ ಉದ್ವಿಗ್ನನಾಗಿ ಕೇಳಿದ—

" ಸಾರ್ – ನನಗಾಗಿ ಅವನಲ್ಲಿ ಕನಿಕರ ತೋರಿಸಿ."

" ಯಾರಿಗಾಗಿಯೂ ನಾನು ಆ ಕೆಲಸಮಾಡಲು ಸಿದ್ಧವಿಲ್ಲ ರಾಜಶೇಖರ್. ಮತ್ತೆ ಆ ಮಾತು ಬೆಳೆಸಬೇಡ. ಅವನಿಗಾಗಲಿ, ಅವನ ಜಾತಿಯವರಿಗಾಗಲಿ ನಾನು ಎಂದೂ ಏನೂ ಉಪಕಾರ ಮಾಡಲಾರೆ. ಇಂದು ನಾನು ಈ ಬಿಕನಾಸಿ ಲೆಕ್ಚರರ್ ಕೆಲಸದಲ್ಲಿ ಕೊಳೆಯುತ್ತಿರುವುದಕ್ಕೆ ಕಾರಣ, ಅವನ ಜಾತಿಯ ಜನ. ಹೇಗೂ ಅವನ ಜಾತಿಯ ಲೆಕ್ಚರರ್‌ಗಳೇ ಇದ್ದಾರಲ್ಲ. ಅವರ ಕಾಲೇ ಕಟ್ಟಿಕೊಳ್ಳಲಿ. ಅದೇನು ಉದ್ಧಾರ ಮಾಡುತ್ತಾರೋ ಅವರೇ ಮಾಡಲಿ. ನಿನಗೆ ಗೊತ್ತಿಲ್ಲ ರಾಜಶೇಖರ್. ಅವರನ್ನು ಹತ್ತಿರಲೇ ಸೇರಿಸಬಾರದು. ಶುದ್ಧ ಮನೆಹಾಳು ಜನ. ಅವರಿಂದಲೇ ನಮ್ಮ ಜನ ಇವತ್ತು ಇಷ್ಟು ಕೀಳು ಮಟ್ಟಕ್ಕಿಳಿದಿರೋದು. ನೀನಿನ್ನೂ ಪ್ರಪಂಚ ವ್ಯವಹಾರವರಿಯದ ಹಸುಳೆ. ಸುಮ್ಮನೆ ನಾನು ಹೇಳಿದ ಹಾಗೆ ಕೇಳು. ಇಲ್ಲದ ಕೆಲಸವನ್ನೆಲ್ಲ ಹಚ್ಚಿಕೊಂಡು ಪರದಾಡಬೇಡ. ನಿನ್ನ ಭವಿಷ್ಯದ ದಾರಿ ನೀನು ನೋಡಿಕೋ. ಬೇರೆಯವರು ಇದ್ದರೆಷ್ಟು ಹಾಳಾದರೆಷ್ಟು, ನೀನು ಅನ್ಯನಾಗಿದ್ದರೆ ನಿನಗೆ ಇಷ್ಟೆಲ್ಲಾ ಹೇಳುವ ತೊಂದರೆಯನ್ನೇ ನಾನು ತೆಗೆದುಕೊಳ್ಳುತ್ತಿರಲಿಲ್ಲ. ಎಷ್ಟಾದರೂ ನಮ್ಮ ಜಾತಿಯ ಹುಡುಗ. ನೀನು ಮುಂದೆ ಬಂದು ನಮ್ಮ ಜನಾಂಗಕ್ಕೇ ದಾರಿ ತೋರುವವನಾಗಬೇಕು. ಊರು ದನ ಕಾದು ದೊಡ್ಡ ಜೋರ ಎನ್ನಿಸಿಕೊಳ್ಳಲು ಹೊರಡಬೇಡ."

ನಾಗರಾಜಶೆಟ್ಟರು ಹೇಳಿದ ಮಾತನ್ನು ರಾಜಶೇಖರ ಮೌನವಾಗಿ

ಕುಳಿತು ಕೇಳಿದ. ಅವರ ಮಾತಿಗೆ ಏನು ಹೇಳಬೇಕೆಂಬುದೂ ಅವನಿಗೆ ತೋಚ ಲಿಲ್ಲ. ಅವರ ಮಾತು ಅವನ ಮಿದುಳನ್ನು ಕಂಗೆಡಿಸಿತ್ತು.

" ನಾನಿಷ್ಟು ಕಟುವಾಗಿ ಹೇಳಿದೆ ಎಂದುಕೊಳ್ಳಬೇಡ ರಾಜಶೇಖರ್. ಇರುವ ಮಾತನ್ನೇ ಹೇಳಿದೆ. ಈ ಕಾಲದಲ್ಲಿ ಕೈಯಲ್ಲಿ ಕೊಂಚ ಅಧಿಕಾರ ವಿರುವ ನಮ್ಮಂಥವರ ಮೇಲೆ ಬಹಳ ದೊಡ್ಡ ಜವಾಬುದಾರಿ ಇದೆ. ನಮ್ಮವರಿಗೆ ಕೊಂಚ ಸಹಾಯ ಮಾಡಬಹುದಾದ ಸ್ಥಾನದಲ್ಲಿರುವ ನಾವು ಆ ಕೆಲಸ ಮಾಡದೆ ಹೋದರೆ ಬಹಳ ದೊಡ್ಡ ಕರ್ತವ್ಯಲೋಪ ಮಾಡಿದಂತಾಗುತ್ತದೆ. ಹತ್ತಾರು ಜಾತಿಗಳವರು ನಮ್ಮನ್ನು ಮೆಟ್ಟಿ ತುಳಿಯುತ್ತಿರುವಾಗ, ನಾವೇ ನಮ್ಮವರಿಗೆ ನೆರವಾಗದೆ ಹೋದರೆ ಬೇರೆ ಯಾರು ಆಗಬೇಕು. ಕೊಂಚ ವಿಚಾರ ಮಾಡಿ ನೋಡು. ಈ ದೃಷ್ಟಿಯಿಂದಲೇ ನಾನು, ನೀನು, ನಿಮ್ಮ ತಂದೆ ನನಗೆ ಅಪರಿಚಯಸ್ಥರಾದರೂ ಸಹಾಯ ಮಾಡುವ ವಚನ ಕೊಟ್ಟಿದ್ದು. ನನ್ನಿಂದ ನಿನ್ನ ಭವಿಷ್ಯ ಉತ್ತಮವಾಗಲು ಏನು ಬೇಕೋ ಆ ಕೆಲಸ ಮಾಡಿಸಿಕೋ. ಉಳಿದವರ ವಿಚಾರದ ಉಪದ್ವ್ಯಾಪಿತನ ನಿನಗೆ ಬೇಡ. ಗೊತ್ತಾಯಿತೇ ? "

" ಸರಿ ಸಾರ್ "

—ಎಂದ ರಾಜಶೇಖರ, ಒಣಗಿದ ಧ್ವನಿಯಲ್ಲಿ ; ಬೇರೆನೂ ಹೇಳಲು ತೋಚದೆ.

" ನನ್ನ ಮಾತು ನಿನಗೆ ಅರ್ಥವಾದರೆ ಸರಿ. ಆ ಮಾತು ಮುಗಿದ ಹಾಗಾಯಿತಲ್ಲ. ಬೇರೇನಾದರೂ ಇದೆಯೆ ? "

" ಇಲ್ಲ ಸಾರ್."

" ಸರಿ ಹಾಗಾದರೆ. ಸಂತೋಷವಾಗಿ ಊರಿಗೆ ಹೋಗಿ ಬಾ. ನಿನ್ನ ತಂದೆಯವರಿಗೆ ನಾನು ಕೇಳಿದೆನೆಂದು ಹೇಳು."

" ಹೇಳುತ್ತೇನೆ ಸಾರ್. ನಾನಿನ್ನು ಬರಲೆ ? "

" ಹೂ, ಹೋಗಿ ಬಾ. ವಿಷ್ ಯು ದಿ ಬೆಸ್ಟ್ ಆಫ್ ಲಕ್."

" ಥ್ಯಾಂಕ್ಸ್ ಸರ್ "

—ಎಂದು ಹೇಳಿ ರಾಜಶೇಖರ ಭಾರವಾದ ಎದೆಯಿಂದ ಅವರಿಗೆ ನಮಸ್ಕಾರ ಮಾಡಿ, ಅವರ ಮನೆಯಿಂದ ಹೊರಬಿದ್ದ.

೮

ತನ್ನ ರಾಯಭಾರದ ಪರಿಣಾಮವನ್ನರಿಯಲು ರಾಜಶೇಖರ ಶ್ರೀಧರನಿಗೆ ಸಂಜೆ ಬರಲು ಹೇಳಿದ್ದ. ಆದರೆ ಹೋದ ಕೆಲಸ ಏರುಪೇರಾದುದರಿಂದ ಶ್ರೀಧರ

ನಿಗೆ ಈ ವಿಷಯ ಹೇಗೆ ಹೇಳುವುದು, ಅವನಿಗೆ ಮುಖ ತೋರಿಸುವುದು ಹೇಗೆ ಎಂಬ ಕೊರಗು, ಎಂದೂ ಇಲ್ಲದೆ ಕೇಳಿದ ಅವನ ಕೆಲಸವನ್ನು ಮಾಡಿಕೊಡಲು ತನಗೆ ಸಾಧ್ಯವಾಗಲಿಲ್ಲವಲ್ಲಾ ಎಂಬ ದುಃಖ ರಾಜಶೇಖರನ ಹೃದಯವನ್ನು ಹಿಂಡತೊಡಗಿದವು: ಒಮ್ಮೊಮ್ಮೆ ಶ್ರೀಧರನಿಗೆ ಏನಾದರೂ ಆಗಿ ಸಂಜೆಗೆ ಬರದೇ ಹೋದರೇ ಲೇಸು ಎಂದುಕೊಳ್ಳುವನು. ಇನ್ನೊಂದು ಗಳಿಗೆ ಅವನು ಬರುವುದಾಗಿ ಹೇಳಿದ ಹೊತ್ತಿಗೆ ಸರಿಯಾಗಿ ತಾನೇ ಎಲ್ಲಿಯಾದರೂ ಹೋಗಿ ಮುಖ ತಪ್ಪಿಸಿದರೆ ಹೇಗೆ ಎಂದು ಚಿಂತಿಸುವನು.

ಎಲ್ಲಕ್ಕಿಂತ ಹೆಚ್ಚಾಗಿ ನಾಗರಾಜಶೆಟ್ಟರಾಡಿದ ಮಾತು ಅದುವರೆಗೂ ಅವನರಿಯದ ಯಾವುದೋ ಹೊಸ ಭಾವನೆಯ ಲೋಕವನ್ನು ಅವನ ಕಣ್ಣೆದುರು ಚಿತ್ರಿಸಿತ್ತು ಅಂದಿನವರೆಗೂ ರಾಜಶೇಖರ ತನ್ನ ಭವಿಷ್ಯದ ಯೋಚನೆ ಮಾಡಿದ್ದರೂ, ತನ್ನ ಜಾತಿಯ ಚೌಕಟ್ಟಿನಲ್ಲಿಟ್ಟು ಅದನ್ನು ನೋಡಿರಲಿಲ್ಲ ಈ ಮಾತು ಎಷ್ಟು ದೂರ ಹೋಗಬಹುದು, ಎಂಥ ಪರಿಣಾಮದಲ್ಲಿ ಪರ್ಯವಸಾನವಾಗಬಹುದು ಎಂಬುದು ಅವನಿಗೆ ಅರಿವಾಗದಿದ್ದರೂ, ಏಕೋ ಅವನ ಮನಸ್ಸಿಗೆ ಕೆಸರಿನಲ್ಲಿ ಹೂತುಕೊಂಡ ಹಾಗಾಗಿತ್ತು. ಏನೋ ಒಂದು ಬಗೆಯ ಮೂಕ ವೇದನೆ ಅವನ ಮಿದುಳಿನಲ್ಲಿ ಮಿಡಿಯುತ್ತಿತ್ತು ಅದುವರೆಗೂ ನಾಗರಾಜ ಶೆಟ್ಟರ ವಿಷಯದಲ್ಲಿದ್ದ ಅಭಿಮಾನದ ವಿಗ್ರಹ ಏಕೋ ಭಗ್ನವಾಗಿ, ಆ ಕೊರಗು, ನಿರಾಶೆ ಅವನ ಮನಸ್ಸನ್ನು ಹಿಂಡುತ್ತಿತ್ತು ಆನೆಯನ್ನು ನೋಡ ಹೋದವನು ಇಲಿಯನ್ನು ಕಂಡು ಬಂದಂತೆ ಪೆಚ್ಚಾಗಿತ್ತು. ಯಾವ ಒಂದು ನೇರವಾದ ದಿಕ್ಕಿನಲ್ಲೂ ಓಡದೆ, ಹತ್ತಾರು ಕಡೆ ಹರಿಯುತ್ತಿರುವ ಚಿಂತೆಗೆ ಮನ ತೆತ್ತು, ಸುರುಳಿ ಸುತ್ತಿದ ಹಾಸಿಗೆಗೆ ತಲೆಯೊರಗಿಸಿ ಮೈ ಚಾಚಿದ.

ಎಷ್ಟು ಹೊತ್ತು ಹಾಗೆ ಮಲಗಿದ್ದನೋ, ಶ್ರೀಧರ ಬಂದು ಕೂಗಿದಾಗಲೇ ಅವನಿಗೆ ಎಚ್ಚರ ಬಂದದ್ದು.

" ಒಳಗೆ ಬನ್ನಿ."

—ಎಂದು ಶ್ರೀಧರನನ್ನು ಕೂಗಿದರೂ ಒಳಗೆ ಬಂದ ಅವನ ಮುಖವನ್ನು ದಿಟ್ಟಿಸಿ ನೋಡುವ ಮನಸ್ಸಿರಲಿಲ್ಲ ರಾಜಶೇಖರನಿಗೆ. ತಾನೇ ಏನೋ ತಪ್ಪು ಮಾಡಿದಂತೆ ಅವನ ಮುಖ ಮರೆಸಿಕೊಳ್ಳಲು ಬಯಸುತ್ತಿತ್ತು.

" ಇದೇನು ಕತ್ತಲಲ್ಲೇ ಮಲಗಿದೀರಿ. ದೀಪ ಇಲ್ಲವೇ ? "

—ಕೋಣೆಯಲ್ಲಿ ಸಂಜೆಯ ಮಬ್ಬು ಕವಿದಿದ್ದರೂ ದೀಪ ಹೊತ್ತಿಸದಿದ್ದುದನ್ನು ಕಂಡು ಕೇಳಿದ, ರಾಜಶೇಖರನ ಧ್ವನಿ ಕೇಳಿ ಅವನು ಕೋಣೆಯಲ್ಲಿದಾನೆ ಎಂದು ಮನಸ್ಸಿಗೆ ನೆಮ್ಮದಿ ಮಾಡಿಕೊಂಡು ಒಳಗೆ ಬಂದ ಶ್ರೀಧರ.

" ದೀಪವಿದೆ. ನಾನೇ ಹಾಕಲಿಲ್ಲ "

" ಕೋಣೆಯಲ್ಲಿ ದೀಪವಿಲ್ಲದ್ದನ್ನು ಕಂಡು ಇಲ್ಲವೇನೋ ಎಂದುಕೊಂಡು ವಾಪಸು ಹೋಗೋಣವೆಂದಿದ್ದೆ. ಕೋಣೆಗೆ ಬೀಗ ಹಾಕಿರಲಿಲ್ಲವಾದುದರಿಂದ ಕೂಗಿದೆ. ಅದೇನು ಕತ್ತಲಲ್ಲೇ ಮಲಗಿದೀರಲ್ಲಾ ? ಸ್ವಿಚ್ ಎಲ್ಲಿದೆ ? "

" ಇರಲಿ ಬಿಡಿ. ದೀಪವೇನೂ ಬೇಡ."

—ಶುಷ್ಕವಾದ ಧ್ವನಿಯಲ್ಲಿ ಮಾತನ್ನು ಎಳೆದು ಹೇಳಿದ ರಾಜಶೇಖರ, ಬೆಳಕು ಬೇಡವಾದವನಂತೆ. ಅವನ ಧ್ವನಿಯ ರೀತಿಯನ್ನು ಕೇಳಿ ಶ್ರೀಧರನಿಗೆ ಆಶ್ಚರ್ಯವಾಯಿತು,

" ಏಕೆ ಮೈಯಲ್ಲಿ ಚೆನ್ನಾಗಿಲ್ಲವೇ ? "

" ಚೆನ್ನಾಗಿದೆ."

" ಹಾಗಾದರೆ ಬೆಳಕಿನ ವೈರಾಗ್ಯಕ್ಕೆ ಕಾರಣ .. ? "

" ಏಕೋ ಬೇಡವೆಂದು ತೋಚಿತು. ಮಾತಿಗೆ ದೀಪವೇಕೆ ? ಬನ್ನಿ ಕುಳಿತುಕೊಳ್ಳಿ. ನಿಂತುಕೊಂಡೇ ಮಾತನಾಡುತ್ತಿದೀರಲ್ಲಾ ? "

" ಹಾಗಾದರೆ ಏನೋ ಯೋಚನೆ ಮಾಡುತ್ತಿದ್ದಿರಬೇಕು. ಬಂದು ಅದನ್ನು ಕೆಡಿಸಿದೆ ಎಂದು ಕಾಣುತ್ತದೆ. ಕ್ಷಮಿಸಿ."

" ಅಂಥ ಯೋಚನೆಯೇನೂ ಇಲ್ಲ. ಬನ್ನಿ ಕುಳಿತುಕೊಳ್ಳಿ.

" ಸರಿಯೆ. ಹಾಗಾದರೆ ಹೆಚ್ಚು ಹೊತ್ತು ಕುಳಿತು ನಿಮಗೆ ತೊಂದರೆ ಕೊಡುವುದಿಲ್ಲ. ನಾನು ಬಂದ ಕಾರಣ ನಿಮಗೆ ಗೊತ್ತಿದೆಯಲ್ಲ,"

" ಹೂ."

" ಏನಾಯಿತು ? "

—ಬೇಡ ಬೇಡವೆಂದು ತಡೆದರೂ ಬಿಡದೆ ಇಣುಕಿದ ಆತುರ ಶ್ರೀಧರನ ಧ್ವನಿಯಲ್ಲಿ ಕೇಳಿಬಂದಿತು.

" ನನ್ನನ್ನು ಕ್ಷಮಿಸಿ ಶ್ರೀಧರ "

—ಹಾಸಿಗೆಯಲ್ಲಿ ಮುಖ ಹುದುಗಿಸಿಕೊಂಡು ಸಣ್ಣ ಧ್ವನಿಯಲ್ಲಿ ಹೇಳಿದ ರಾಜಶೇಕರ.

" ಏಕೆ ? ಅವರನ್ನು ಕೇಳಲಾಗಲಿಲ್ಲವೇ ? "

—ಮಾತಿನಲ್ಲಿ ಕವಿದು ಬರುತ್ತಿದ್ದ ನಿರಾಶೆಯನ್ನು ಅಷ್ಟು ದೂರ ತಡೆದು ನಿಲ್ಲಿಸಿ ಕೇಳಿದ ಶ್ರೀಧರ.

" ಕೇಳಿದೆ."

" ಮತ್ತೆ ? "

" ನಾಗರಾಜಶೆಟ್ಟರ ವಿಷಯದಲ್ಲಿ ನಾನು ಇಟ್ಟುಕೊಂಡಿದ್ದ ಭಾವನೆ ತಪ್ಪೋ ಏನೋ ಎಂದು ತೋರುತ್ತಿದೆ."

—ಹೇಳಲಾಗದ ಮಾತನ್ನು ಎಳೆದೆಳೆದು ಹೇಳಿದ ರಾಜಶೇಖರ.

" ಏಕೆ ? "

—ರಾಜಶೇಖರನಾಡಿದ ಅನಿರೀಕ್ಷಿತವಾದ ಮಾತನ್ನು ಕೇಳಿ ಚಕಿತನಾಗಿ ಕೇಳಿದ ಶ್ರೀಧರ. ಆದರೆ ರಾಜಶೇಖರ ಅವನ ಪ್ರಶ್ನೆಗೆ ಏನೂ ಉತ್ತರ ಕೊಡಲಿಲ್ಲ. ಅವನಿಂದ ತನ್ನ ಪ್ರಶ್ನೆಗೆ ಉತ್ತರ ನಿರೀಕ್ಷಿಸಿ ಒಂದುಗಳಿಗೆ ಸುಮ್ಮನೆ ಕುಳಿತ ಶ್ರೀಧರನೇ, ಅವನಿಂದ ಉತ್ತರ ಬರದುದನ್ನು ಕಂಡು, ತಾನೇ ಮಾತನ್ನು ಮುಂದುವರಿಸಿ ಕೇಳಿದ—

" ನನ್ನ ಮಾತಿಗೆ ಆಗುವುದಿಲ್ಲ ಎಂದರೇ . . . ."

" ಆಗುವುದಿಲ್ಲ ಎಂದಿದ್ದರೆ ನನ್ನ ಮನಸ್ಸಿಗೆ ಅಷ್ಟು ನೋವಾಗುತ್ತಿರಲಿಲ್ಲ."

—ಶ್ರೀಧರನ ಪ್ರಶ್ನೆಗೆ ಉತ್ತರವೆಂಬುದಕ್ಕಿಂತ ಹೆಚ್ಚಾಗಿ, ಎದೆಯಲ್ಲಿ ಕವಿಯುತ್ತಿದ್ದ ಭಾವನೆ ತಾನೇ ತಾನಾಗಿ ಮಾತಾಗಿ ಮೂಡಿಬಂದಂತೆ ಹೇಳಿದ ರಾಜಶೇಖರ.

" ಹಾಗಾದರೆ ಮತ್ತೇನು ಹೇಳಿದರು ? "

" ಆಗುವುದಿಲ್ಲ, ನಾನೇನೂ ಮಾಡಲಾರೆ ಎಂದರು. ಮಾಡಲು ಸಾಧ್ಯ ವಿದ್ದರೂ ಮಾಡುವುದಿಲ್ಲ ಎಂದರು "

—ಕರ್ಕಶವಾಗಿ ಹೇಳಿದ ರಾಜಶೇಖರ.

" ಏಕೆ ? ನನ್ನ ಮೇಲೆ ಅವರಿಗೇಕೆ ಅಷ್ಟು ಅಸಮಧಾನ ? "

" ನೀವು ದುರಹಂಕಾರಿಯಂತೆ. ಎದುರಿಗೆ ಕಂಡರೂ ಅವರನ್ನು ನೋಡುವುದಿಲ್ಲವಂತೆ."

" ಅದಕ್ಕಾಗಿ ನಾನು ದುರಹಂಕಾರಿ ಎಂದು ಅವರು ತೀರ್ಮಾನಿಸಿ ದಾರೆಯೇ ?

" ಹೌದು "

" ಹೋಗಲಿ ಬಿಡಿ. ನನ್ನ ವಿಷಯದಲ್ಲಿ ಆ ಅಭಿಪ್ರಾಯವನ್ನಿಟ್ಟು ಕೊಂಡಿರುವವರಲ್ಲಿ ಅವರೇ ಮೊದಲಿಗರೂ ಅಲ್ಲ, ಕೊನೆಯವರೂ ಅಲ್ಲ."

" ಅಂದರೆ . . . ."

—ಶ್ರೀಧರನಾಡಿದ ಮಾತಿನ ಅರ್ಥ ತಿಳಿಯದೆ ಕೇಳಿದ ರಾಜಶೇಖರ.

" ಅದರ ಅರ್ಥ ಅಷ್ಟೇನೂ ತೊಡಕಾಗಿಲ್ಲ, ರಾಜಶೇಖರ್. ನಮ್ಮ ನಮ್ಮ ಸ್ಥಾನಮಾನಕ್ಕನುಸಾರವಾಗಿ ನಾವು ಒಂದು ರೀತಿಯಲ್ಲಿ ನಡೆದುಕೊಳ್ಳ

ಬೇಕೆಂದು ಲೋಕ ನಿರೀಕ್ಷಿಸುತ್ತದೆ. ನಾವು ಹಾಗೆ ನಡೆದುಕೊಳ್ಳದಿದ್ದಾಗ, ತಮ್ಮ ನಿರೀಕ್ಷೆ ಸಕಾರಣವೇ ಅಲ್ಲವೆ ಎಂಬುದನ್ನು ಯೋಚಿಸದೆ ಅಸಮಾಧಾನ ತಾಳುತ್ತಾರೆ. ನಾಗರಾಜಶೆಟ್ಟರೂ ಈ ಲೋಕದ ರೀತಿಗೆ ಹೊರತಲ್ಲ."

" ನಿಮ್ಮ ಮಾತು ನನಗೆ ಅರ್ಥವಾಗಲಿಲ್ಲ ಶ್ರೀಧರ್."

" ಇನ್ನಷ್ಟು ಒಡೆದು ಹೇಳಬೇಕೇ ? ನೋಡಿ ನಾನು ಬಡವ – ಬೇರೇನಿಲ್ಲವಾದರೂ ಬಡವನಾಗಿರುವ ಅಪರಾಧ ನನ್ನಿಂದ ಆಗಿದೆ. ಬಡವರಾಧವರು, ದೀನರೂ, ಯಾಚಕರೂ, ಬಾಲಬಡುಕರೂ, ಆಗಿರಬೇಕೆಂದು ಲೋಕದ ನಿರೀಕ್ಷೆ ಸ್ವಾಭಿಮಾನ ಅವರಿಗೆ ಸಲ್ಲದ ಅಲಂಕಾರವೆಂದೇ ಅವರ ಅಭಿಮತ. ಅದು ಅವರ ಯೋಚನೆಯ ದಾರಿ. ಅದರೇನು ಮಾಡಲಿ ? ನನಗದು ಸಮ್ಮತವಿಲ್ಲ. ಅಷ್ಟೇ ಅಲ್ಲ ಸ್ವಾಭಿಮಾನವಿಲ್ಲದವ ಮನುಷ್ಯನೇ ಅಲ್ಲ ಎಂದು ನನ್ನ ಅಭಿಪ್ರಾಯ. ಅದರಿಂದಾಗಿ ದುರಹಂಕಾರಿ ಎಂಬ ಅಪಖ್ಯಾತಿಯನ್ನು ಹೊರಬೇಕಾಗಿ ಬಂದರೂ ಚಿಂತೆಯಿಲ್ಲ, ಸ್ವಾಭಿಮಾನವೊಂದೇ ನನಗೆ ಉಳಿದಿರುವ ಆಸ್ತಿ. ಯಾವ ಆಮಿಷಕ್ಕೂ ಅದನ್ನು ಮಾರಲು ನಾನು ಸಿದ್ಧನಾಗಿಲ್ಲ. ಬಡಹೆಣ್ಣಿನ ಸೌಂದರ್ಯದಂತೆ, ಬಡವನ ಸ್ವಾಭಿಮಾನವು ಮಾರಾಟಕ್ಕೆ ಸಿಗುವ ವಸ್ತು ಎಂದು ಯಾರಾದರೂ ತಿಳಿದಿದ್ದರೆ, ಅದವರ ತಪ್ಪು ಕಲ್ಪನೆ. ಅವರ ತಪ್ಪು ಕಲ್ಪನೆಗಾಗಿ ನಾನು ಶಿಕ್ಷೆ ಅನುಭವಿಸಬೇಕಾಗಿ ಬಂದರೆ ಹಾಗೂ ಆಗಲಿ. ಅಷ್ಟೇ ತಾನೆ ಅವರು ಹೇಳಿದುದು ? "

—ಕರ್ಕಶವಾಗಿ ಕೇಳಿದ ಶ್ರೀಧರ. ಅವನ ಮಾತು ಬರಿಮಾತಿನಂತಿರದೆ, ಲೋಕಕ್ಕೇ ತನ್ನ ಮೇಲೆ ಬೀಳಲು ಹಾಕಿದ ಸವಾಲಿನಂತಿತ್ತು. ಆ ಮಾತಿನ ಪ್ರಖರತೆಯಿದಿರು, ರಾಜಶೇಖರ ನಾಲಗೆ ಸೋತು ಸುಮ್ಮನಾದ. ಒಂದು ಗಳಿಗೆ ಸುಮ್ಮನಿದ್ದು ಬಳಿಕ ಶ್ರೀಧರ ತನ್ನ ಮಾತನ್ನು ಮುಂದುವರಿಸಿದ—

" ಅಷ್ಟಾಗಿ ನೀವು ನಿರಾಶರಾಗಬೇಕಾದದ್ದಿಲ್ಲ ರಾಜಶೇಖರ್. ಆದರೆ ಅವರು ಮಾಡುವ ತಪ್ಪನ್ನು ನೀವೂ ಮಾಡಬೇಡಿ "

" ಏನು ತಪ್ಪು ? "

" ಸಿಗಲಾಗದುದನ್ನು ನಿರೀಕ್ಷಿಸಿ, ಅದು ಸಿಗಲಿಲ್ಲ ಎಂದು ಮನಸ್ಸನ್ನು ವಿನಾ ಕಾರಣ ಕಹಿಮಾಡಿಕೊಳ್ಳುವ ತಪ್ಪು."

" ಆ ತಪ್ಪನ್ನು ನಾನೆಲ್ಲಿ ಮಾಡಿದೆ ? "

" ಮಾಡಿದೀರ. ನಾಗರಾಜಶೆಟ್ಟರ ಬಗ್ಗೆ ನಾನಿಟ್ಟುಕೊಂಡಿದ್ದ ಭಾವನೆ ತಪ್ಪಾಯಿತೋ ಏನೋ ಎಂದು ನೀವೇ ಹೇಳಲಿಲ್ಲವೇ ? ಅವರ ಬಗ್ಗೆ ಏನೋ ಒಂದು ಭಾವನೆಯನ್ನು ನೀವು ಇಟ್ಟುಕೊಂಡಿರಿ. ಅದು ಸರಿಯೋ ತಪ್ಪೋ

ಅದು ನಿಮ್ಮ ಹೊಣೆಗಾರಿಕೆ. ಅದಕ್ಕಾಗಿ ಅವರನ್ನು ದೂರಿ ಫಲವೇನು ?"

"ಬರೀ ಅಷ್ಟಕ್ಕಾಗಿಯೇ ಅವರು ನಿಮಗೆ ಸಹಾಯ ಮಾಡುವುದಿಲ್ಲ ಎಂದಿದ್ದರೆ ನನಗೆ ವ್ಯಸನವಾಗುತ್ತಿರಲಿಲ್ಲ ಶ್ರೀಧರ್. ಎಲ್ಲಕ್ಕಿಂತ ಹೆಚ್ಚಾಗಿ ಅವರು ಈ ಸಂದರ್ಭದಲ್ಲಿ ಜಾತಿಯ ಮಾತು ತಂದು, ಅದಕ್ಕಾಗಿ ನಿಮಗೆ ಸಹಾಯ ಮಾಡುವುದಿಲ್ಲ ಎಂದುದು ನನಗೆ ವ್ಯಥೆಯನ್ನುಂಟುಮಾಡುತ್ತಿದೆ. ನಿಮ್ಮ ಜಾತಿ ನಿಮ್ಮ ತಪ್ಪಲ್ಲ ಅಲ್ಲವೇ ?"

"ಓ, ಆ ಮಾತೂ ಬಂದಿತೋ. ಬರುವುದೆಂದೇ ನಿರೀಕ್ಷಿಸಿದ್ದೆ."

—ರಾಜಶೇಖರನ ಆಕ್ರೋಶದ ಮಾತಿನಿಂದ ಕೆರಳದೆ ಶಾಂತಸ್ವರದಲ್ಲಿ ಹೇಳಿದ ಶ್ರೀಧರ.

"ಹೇಗೆ ?"

"ನಾಗರಾಜಶೆಟ್ಟರ ವಿಷಯ ನಿಮಗೆ ತಿಳಿಯದು ರಾಜಶೇಖರ್. ಈ ಜಾತಿಯ ಹಾಲಾಹಲ ಅವರ ಕೈಯನ್ನು ಸುಟ್ಟಿದೆ. ನಾನು ಆ ವಿಷಯ ಕೇಳಿ ಅರಿತಿದ್ದೇನೆ. ಜೂಆಲಜಿ ಡಿಪಾರ್ಟ್‌ಮೆಂಟಿನಲ್ಲಿ ಕೃಷ್ಣಯ್ಯಂಗಾರ್ ಅಂತ ಪ್ರೊಫೇಸರ್ ಒಬ್ಬರಿದ್ದರಂತೆ. ಅವರು ತಾವು ಪ್ರೊಫೇಸರಾಗಿರುವ ವರೆಗೂ, ತಮ್ಮ ಜಾತಿಯವರಿಗಲ್ಲದೆ ಬೇರೆಯವರಿಗೆ ರ್‍ಯಾಂಕು ಸಿಗದಹಾಗೆ ಮಾಡಿ, ಎಷ್ಟೋ ಜನ ಪ್ರತಿಭಾಶಾಲಿಗಳ ಭವಿಷ್ಯಕ್ಕೇ ಕೊಡಲಿಪೆಟ್ಟು ಹಾಕಿದರಂತೆ. ಲೆಕ್ಚರರ್ ಕೆಲಸಕ್ಕೇ ನೇಮಿಸಿಕೊಳ್ಳುವಾಗಲೂ ಈ ಕುರುಡುಗಣ್ಣಿನ ಅನ್ಯಾಯ ವನ್ನು ಅವರು ಮಾಡದೆ ಬಿಡಲಿಲ್ಲ. ಆ ಅನ್ಯಾಯದಲ್ಲಿ ನೊಂದ ಹಲವರಲ್ಲಿ ನಾಗರಾಜಶೆಟ್ಟರೂ ಒಬ್ಬರು. ಈಗ ಅದರ ಸೇಡು ತೀರಿಸಿಕೊಳ್ಳುತ್ತಿದ್ದಾರೆ."

"ಸೇಡು ತಿರಿಸಿಕೊಳ್ಳುವುದಿದ್ದರೆ, ಕೃಷ್ಣಯ್ಯಂಗಾರ್ ಮೇಲೆ ತೀರಿಸಿ ಕೊಳ್ಳಲಿ. ಅವರಿಗೂ ನಿಮಗೂ ಏನು ಸಂಭಂದ ಅವರು ಮಾಡಿದ ತಪ್ಪಿಗೆ ನಿಮಗೆ ಬರೆ ಎಳೆಯುವುದು ಎಲ್ಲಿಯ ನ್ಯಾಯ ?"

"ತೋಳ ಕುರಿಮರಿಯ ಕಥೆ ಕೇಳಿಲ್ಲವೇ ನೀವು—'ನೀನಲ್ಲ ವಾದರೆ ನಿಮ್ಮಪ್ಪ, ಯಾರಾದರೆ ನನಗೇನು' ಎಂದದ್ದು."

"ಕೇಳಿದ್ದೇನೆ ... .."

"ಕಥೆಯಲ್ಲಿ ನಾವು ತೋಳನ ನಡತೆ ತಪ್ಪು ಎಂದು ಖಂಡಿಸುತ್ತೇವೆ. ಆದರೆ ನಮ್ಮ ಇಂದಿನ ವ್ಯವಹಾರಕ್ಕೆ ಆ ತೋಳನ ನ್ಯಾಯವೇ ಬುನಾದಿ ಯಾಗಿದೆ. ಆದುದರಿಂದ ನನ್ನ ಜಾತಿ ಒಂದು ಆಕಸ್ಮಿಕವಾದರೂ ಆ ತಪ್ಪಿಗೆ ನಾನು ದಂಡ ಕೊಡಬೇಕಾಗಿದೆ."

"ಇದೆಂಥ ಘೋರ ಅನ್ಯಾಯ ಶ್ರೀಧರ್."

"ಅನ್ಯಾಯ ? – ನಿಜ, ಅನ್ಯಾಯ. ಎಲ್ಲ ಅನ್ಯಾಯಗಳಂತೆ ಇದಕ್ಕೂ ಆಯಸ್ಸು ಇರುವಷ್ಟು ದಿನ ಬದುಕುತ್ತದೆ. ಆದರೆ ಇದು ಬಹುದಿನ ಬದುಕುವ ವಿಷಯವಲ್ಲವೆಂಬುದೊಂದೇ ನಾನು ನೀವು ಹಚ್ಚಿಕೊಳ್ಳಬೇಕಾದ ಸಮಾಧಾನ."

"ನಮ್ಮ ಇಂದಿನ ಜೀವನಕ್ಕೆ ಅನುಕೂಲವಾಗದ ಇಂಥ ಕನ್ನಡಿಯಲ್ಲಿನ ಗಂಟುಗಳಿಂದ ಏನು ಉಪಯೋಗ ಶ್ರೀಧರ್?"

"ಮಾನವ ಜೀವನದ ಕೊನೆಗಾಲ ಇಂದೆ ಬಂದಿದೆ, ನಮ್ಮೊಂದಿಗೆ ಮಾನವತೆ ಮುಳುಗಿಹೋಗುತ್ತದೆ ಎಂಬ ಭ್ರಮೆ ಏಕೆ ರಾಜಶೇಖರ್ ? ನಾವು ಬದುಕುವುದು ಕೇವಲ 'ಇಂದಿ'ಗಾಗಿಯೇ ಅಲ್ಲ ನಾಳೆ ಬರಲಿರುವ ಭವ್ಯ ಜಗತ್ತಿನ ಹರಿಕಾರ ಇಂದಿನ ಅತೃಪ್ತಿ, ಅನ್ಯಾಯ, ಅತ್ಯಾಚಾರ."

"ನಿಜವಾಗಿಯೂ ನಿಮ್ಮ ಸಹನೆ ಬಹಳ ದೊಡ್ಡದು ಶ್ರೀಧರ್. ನಿನ್ನೆಯ ದಿನದವರೆಗಿದ್ದ ಆಶಾವಾದ ಇಂದು ನನಗೆ ಉಳಿದಿಲ್ಲ."

"ನಿನ್ನೆ ನೀವೇ ನನ್ನನ್ನು ನಿರಾಶಾವಾದಿ ಎಂದಿರಿ, ಇಂದು ಆಶಾವಾದಿ ಎನ್ನುತ್ತೀರಾ. ನಾನು ಅದೂ ಅಲ್ಲ, ಇದೂ ಅಲ್ಲ ಎನೋ ಜಿಗುಪ್ಸೆಯಾಯಿತೆಂದು ಆತ್ಮಹತ್ಯೆ ಮಾಡಿಕೊಳ್ಳದೆ ಬದುಕಬೇಕೆಂದರೆ, ಈ ಸಮಾಧಾನಗಳ ಅವಲಂಬನ ಬೇಕು. ಅದಿಲ್ಲದೇಹೋದರೆ ಬದುಕು ದುರ್ಭರವಾಗುತ್ತದೆ. ನನಗೆ ಸಾಯುವುದರಲ್ಲಿ ಅಷ್ಟು ನಂಬಿಕೆಯಿಲ್ಲ. ಆದ್ದರಿಂದ ನಾನು, ಬಾಳಿನಲ್ಲಿ ಯಾವ ಭ್ರಮೆಯನ್ನೂ ಇಟ್ಟುಕೊಂಡಿಲ್ಲ, ಬೇಸರವೂ ಇಲ್ಲ. ನಿಮಗಾದರೂ ನಾನು ಹೇಳುವುದಿಷ್ಟೆ. ನಾಗರಾಜಶೆಟ್ಟರ ಮಾತಿನಿಂದ ನಿಮಗೆ ತುಂಬಾ ಅಸಮಾಧಾನವಾಗಿರುವಂತೆ ತೋರುತ್ತಿದೆ. ಅದನ್ನು ಬಿಡಿ. ಈ ಅಸಮಾಧಾನದಿಂದ ನಿಮಗಾಗ ಬಹುದಾದ ಒಳಿತು ತಪ್ಪಬಹುದೇ ವಿನಾ, ನನಗೇನು ಹಿತವಾಗಲಾರದು. ಆದುದರಿಂದ ನಾನು ಹೇಳುವುದಿಷ್ಟೆ, ನನ್ನದು ಹೇಗಾದರಾಗಲಿ. ನಿಮಗಾದರೂ ಒಳಿತಾದರೆ ಆಗಲಿ. ಒಳ್ಳೆಯ ಕೆಲಸ ಯಾವ ಹೆಸರಿನಲ್ಲಿ ನಡೆದರೇನು ? ಇಂದು ನಾಗರಾಜಶೆಟ್ಟರು ಜಾತೀಯತೆಯ ಹೆಸರಿನಲ್ಲಿ ನಿಮಗೆ ಒಳ್ಳೆಯದನ್ನು ಮಾಡಲು ಬಂದಿದಾರೆ. ಆಯಿತು. ನನಗಾಗದಿದ್ದ ಅನುಕೂಲ ನನ್ನ ಮಿತ್ರರಿಗಾಗುತ್ತದೆ ಎಂದು ಸಂತೋಷ ಪಡುತ್ತೇನೆ."

—ಎಂದ ಶ್ರೀಧರ ಯಾವ ವಿಕಾರವೂ ತೋರದ ಸ್ವರದಲ್ಲಿ.

"ನಿಮ್ಮ ಮಾತು ನನ್ನ ಎದೆಯನ್ನಿರಿಯುತ್ತಿದೆ ಶ್ರೀಧರ್."

— ಎಂದ ಶ್ರೀಧರನ ಮಾತು ಕೇಳಿ ಭಾವೋದ್ರಿಕ್ತನಾದ ರಾಜಶೇಖರ್.

"ಈ ಸೆಂಟಿ ಮೆಂಟಾಲಿಟಿ (ಭಾವುಕತೆ) ಯನ್ನು ನಿಮ್ಮ ಮನಸ್ಸಿನಿಂದ ಕಿತ್ತೊಗೆಯಿರಿ ರಾಜಶೇಖರ್. ಇಂದಿನ ರೀತಿಯಲ್ಲಿ ಆ ರೀತಿ ಇದ್ದ ಮನುಷ್ಯ ನಿರಾಶೆಯ ಉಕ್ಕಿನ ಚಕ್ರಗಳಡಿ ಸಿಕ್ಕಿ ನುಗ್ಗಾಗುತ್ತಾನೆ. ನಿರಾಶೆ, ನಿರೀಕ್ಷೆಗಳಿಲ್ಲದೆ ಇರುವುದೇ ಈ ಕಾಲಕ್ಕೆ ತಕ್ಕ ಬಾಳು."

"ಈ ವೇದಾಂತವನ್ನೆಲ್ಲಾ, ಈ ವಯಸ್ಸಿಗೇ ಎಲ್ಲಿ ಕಲಿತಿರಿ ಶ್ರೀಧರ್?"

"ಬಡತನದಂಥ ಗುರು ಮತ್ತೊಂದಿಲ್ಲ ರಾಜಶೇಖರ್. ಹೋಗಲಿ ಬಿಡಿ. ನಾನಿನ್ನು ಬರಲೆ ?"

"ನಿಮ್ಮಲ್ಲಿ ನನದೊಂದು ಬೇಡಿಕೆ ಇದೆ ಶ್ರೀಧರ್. ನಡೆಸಿ ಕೊಡುತ್ತೀರಾ? "

" ಏನು ಹೇಳಿ. "

"ನಿಮಗಾಗಿ ನಾನು ಏನೂ ಮಾಡಲಾರದಾದೆ. ಆದರೂ ನನಗೆ ನಿಮ್ಮ ಸ್ನೇಹ ಬೇಕು. ಈ ಪ್ರಸಂಗ ನಮ್ಮ ನಮ್ಮಲ್ಲಿ ವಿರಸ ತರದಿರಲಿ ಎಂದೇ ನನ್ನ ಬೇಡಿಕೆ ಅಷ್ಟು ನಡೆಸಿಕೊಡುತ್ತೀರಾ?"

—ದೀನತೆ ತುಂಬಿತುಳುಕುವ ಧ್ವನಿಯಲ್ಲಿ ಕೇಳಿದ ರಾಜಶೇಖರ್. ಅವನ ಮಾತನ್ನು ಕೇಳಿ ಶ್ರೀಧರ, ಅಷ್ಟು ದೂರದಲ್ಲಿದ್ದ ರಾಜಶೇಖರನನ್ನು ಬಳಿಗೆಳೆದು, ತೋಳಲ್ಲಿ ತಬ್ಬಿಕೊಂಡು—

"ಬರಿ ಸ್ನೇಹವೇ ? ಸಾಧ್ಯವಿದ್ದಿದ್ದರೆ ನಿಮ್ಮನ್ನೂ ನನ್ನ ತೋಳಲ್ಲಿಟ್ಟುಕೊಂಡು ಕಾಪಾಡುತ್ತಿದ್ದೆ ರಾಜಶೇಖರ್" ಎಂದ.

" ಏಕೆ ? ನಾನೇನು ಹಸುಮಗುವೇ ? "

"ಭಾವುಕರು ಹಸುಮಗುವಿಗಿಂತಲೂ ಅತ್ತತ್ತ. ಅಂಥವರಿಗೆ ಜೀವನದಲ್ಲಿ ಪೆಟ್ಟು ಬೀಳುವುದು ಅತಿ ಸುಲಭ. ಆ ಭಯಕ್ಕಾಗಿ ಆ ಮಾತು ಹೇಳಿದೆ. ನನ್ನ ಸ್ನೇಹದಿಂದ ನಿಮಗೆ ಕುರುಡು ಕವಡೆಯ ಉಪಯೋಗವೂ ಇಲ್ಲ. ಆದರೂ ಬೇಕೆನಿಸಿದರೆ ಅದು ನಿಮ್ಮದು. ನಾನಿನ್ನು ಬರಲೆ ? "

" ಮತ್ತೆ ನೋಡುವುದು ! "

" ಊರಿನಿಂದ ಹಿಂದಿರುಗಿದಮೇಲೆ. ಚಿಯರ್ ಅಪ್. ವಿಷ್ ಯು ಎ ಹ್ಯಾಪಿ ಹಾಲಿಡೇ "

—ಎಂದು ಕತ್ತಲಿನಲ್ಲೇ ರಾಜಶೇಖರನ ಕೈ ಕುಲುಕಿ, ಮೇಲೆದ್ದು ಬಾಗಿಲವರೆಗೂ ಹೋದ ಶ್ರೀಧರ—

" ಕತ್ತಲಿನಲ್ಲಿರುವ ಅಭ್ಯಾಸ ಮಾಡಬೇಡಿ ರಾಜಶೇಖರ್. ಗಯಟೆ ಹಾಗೆ ' ಬೆಳಕು, ಮತ್ತಷ್ಟು ಬೆಳಕು ' ಎಂದು ಕಣ್ಣು ಮುಚ್ಚೋಣ."

—ಎಂದು ಬಾಗಿಲ ಬಳಿಯಿದ್ದ ದೀಪದ ಸ್ವಿಚ್ ಹಾಕಿ, ಮತ್ತೊಮ್ಮೆ ರಾಜಶೇಖರನಿಗೆ ' ಚಿಯರ್ ಅಪ್ ' ಎಂದು ಹೇಳಿ ಹೊರಟುಹೋದ.

ಶ್ರೀಧರ ಸ್ವಿಚ್ ಹಾಕಿದುದರಿಂದ ಅದುವರೆಗೂ ಕತ್ತಲು ಕವಿದಿದ್ದ ಕೋಣೆಯಲ್ಲಿ ಬೆಳಕು ತುಂಬಿದಂತೆಯೇ, ಶ್ರೀಧರನ ಮಾತಿನಿಂದ ನಿರಾಶೆಯ ಕತ್ತಲು ಕವಿದ ಹೃದಯದಲ್ಲೂ ಬೆಳಕು ತುಂಬಿತು.

೬

ಬೇಸಿಗೆಯ ರಜಾ ಕಳೆದು, ಮತ್ತೆ ಕಾಲೇಜಿನ ಬಾಗಿಲು ತೆರೆದು ಪರೀಕ್ಷೆಯ ಫಲಿತಾಂಶಗಳು ತಿಳಿಯಿತು. ರಾಜಶೇಖರ ಪಾಸಾಗಿದ್ದ. ಆದರೆ ಶ್ರೀಧರನಿಗೆ ಅವನು ಊಹಿಸಿದಂತೆಯೇ ಆಗಿತ್ತು. ಅವನೂ ಪಾಸಾಗಿದ್ದ ಆದರೆ ಐಚ್ಛಿಕ ವಿಷಯಗಳಲ್ಲಿ ತುಂಬಾ ಕಡಮೆ ನಂಬರು ಬಂದು, ಆ ವರ್ಷ, ಹಿಂದಿನ ವರ್ಷ ಅವನಿಗೆ ದೊರೆತಿದ್ದ ಹಾಫ್‌ಫ್ರೀಷಿಪ್ ಸೌಲಭ್ಯವೂ ತಪ್ಪಿಹೋಯಿತು.

ವಿದ್ಯಾರ್ಥಿವೇತನದ ಸವಲತ್ತುಗಳನ್ನು ನಿರ್ಧರಿಸುವ ಸಮಿತಿಸೇರುವ ದಿನ, ಅಲ್ಲಿ ತೀರ್ಮಾನ ಏನಾಗುತ್ತದೆಯೋ ಎಂಬದನ್ನು ತಿಳಿಯಲು ನೆರೆದಿದ್ದ ವಿದ್ಯಾರ್ಥಿವೃಂದದೊಂದಿಗೆ ಶ್ರೀಧರನೂ ಕಾದಿದ್ದ. ನಾಗರಾಜಶೆಟ್ಟರ ಒತ್ತಾಯಕ್ಕೆ ಕಟ್ಟುಬಿದ್ದ ರಾಜಶೇಖರನೂ ಅಪ್ಲಿಕೇಷನ್ ಹಾಕಿದ್ದುದರಿಂದ ಅವನೂ ಬಂದಿದ್ದ. ಆದರೆ ಅವನಿಗೆ ತನ್ನ ವಿಷಯ ಏನು ಇತ್ಯರ್ಥವಾಗುವುದು ಎಂಬುದನ್ನು ತಿಳಿಯುವುದಕ್ಕಿಂತ ಹೆಚ್ಚಾಗಿ, ಶ್ರೀಧರನದೇನಾಗುವುದೋ ಎಂಬ ಕುತೂಹಲ ಹೆಚ್ಚಾಗಿತ್ತು.

ನಾಗರಾಜಶೆಟ್ಟರೂ ಆ ಸಮಿತಿಯಲ್ಲೊಬ್ಬ ಸದಸ್ಯರಾಗಿದ್ದರು. ಸಮಿತಿಯ ಸಭೆ ಮುಗಿದು ಅವರು ಹೊರಬಂದ ಕೂಡಲೇ ರಾಜಶೇಖರ ಪರಿಣಾಮವನ್ನು ತಿಳಿಯುವ ಸಲುವಾಗಿ ಅವರ ಬಳಿ ಓಡಿ—

" ಏನಾಯಿತು ಸಾರ್ ! "

—ಎಂದು ಕೇಳಿದ.

" ತುಂಬಾ ಕಷ್ಟವಾಯಿತು. ಫುಲ್ ಫ್ರೀಷಿಪ್ಪೇ ಕೊಡಿಸಬೇಕೆಂದು ಬಹಳ ಪ್ರಯತ್ನಪಟ್ಟೆ. ಆದರೆ ಹಾಫ್ ಫ್ರೀಷಿಪ್ಪಾಯಿತು, ಹೋಗಲಿ. ಕುರುಡುಗಣ್ಣಿಗಿಂತ ಮೆಳ್ಳೆಗಣ್ಣು ಮೇಲು "

—ಎಂದರು ನಾಗರಾಜಶೆಟ್ಟರು.

" ನನ್ನದಿರಲಿ ಸಾರ್. ಶ್ರೀಧರನದೇನಾಯಿತು ? "

" ಯಾರದು ? "

—ಶ್ರೀಧರನ ಹೆಸರು ಕೇಳಿ ಚುರುಕಾಗಿ ಕೇಳಿದರು ನಾಗರಾಜಶೆಟ್ಟರು.

" ಶ್ರೀಧರಮೂರ್ತಿಯದು ಸಾರ್. "

" ಏನೂ ಆಗಲಿಲ್ಲ. "

" ಏನೂ ಆಗಲಿಲ್ಲವೇ ? "

" ಊಹೂ. ಬಹಳ ಹೋಪ್‌ಲೆಸ್ ಕೇಸ್ – ನಿನ್ನ ಮಾತಿಗೆ ಕಟ್ಟು ಬಿದ್ದು ನಾನೂ ಒಂದು ಮಾತು ಹೇಳಿ ನೋಡಿದೆ. ಆದರೂ ಏನೂ ಸಾಧ್ಯ ವಾಗಲಿಲ್ಲ. ಸದ್ಯ ನಿನ್ನದಾಯಿತಲ್ಲ ಉಳಿದವರು ಯಾರದು ಹೇಗಾದ ರೇನು – ಕಂಗ್ರಾಜ್ಯುಲೇಷನ್ಸ್ "

—ಎಂದು ಹೇಳಿ ನಾಗರಾಜಶೆಟ್ಟರು ಹೊರಟುಹೋದರು. ಅವರು ಹೇಳಿದುದನ್ನು ಕೇಳಿ ರಾಜಶೇಖರ ಪಾತಾಳಕ್ಕಿಳಿದುಹೋದ. ಶ್ರೀಧರನಿಗೆ ಯಾವ ಬಗೆಯ ಸವಲತ್ತೂ ಸಿಗಲಿಲ್ಲವೆಂಬುದನ್ನು ಕೇಳಿ, ಆ ನಿರಾಶೆಯಲ್ಲಿ ತನಗೆ ಹಾಫ್ ಫ್ರೀಷಿಪ್ ದೊರೆತ ಸಂತೋಷ ಎಲ್ಲೋ ಅಡಗಿಹೋಗಿತ್ತು. ಶ್ರೀಧರನಿಗೆ ಈ ಮಾತು ಹೇಳುವುದು ಹೇಗೆ ಎಂಬ ಚಿಂತೆಯಲ್ಲಿ ಕಾಲು ಎಳೆಯುತ್ತಾ, ಶ್ರೀಧರ ನಿಂತಿದ್ದೆಡೆಗೆ ಬಂದ.

ತನ್ನ ಬಳಿ ಬಂದ ರಾಜಶೇಖರನ ಮುಖಮುದ್ರೆಯನ್ನು ನೋಡಿಯೇ ಶ್ರೀಧರನಿಗೆ ಫಲಿತಾಂಶ ಏನಾಗಿರಬಹುದೆಂಬುದು ಮನವರಿಕೆಯಾಯಿತು. ಆ ಕಲ್ಪನೆಯಿಂದಲೇ, ಆ ನಿರಾಶೆಯನ್ನು ಎಷ್ಟು ತೋರಿಸಿಕೊಳ್ಳಬಾರದೆಂದು ತಡೆಹಿಡಿದರೂ ಆಗದೆ ಅವನ ಮುಖ ವಿವರ್ಣವಾಯಿತು. ಶುಷ್ಕವಾದ ಧ್ವನಿಯಲ್ಲಿ ಕೇಳಿದ—

" ಏನಾಯಿತು ರಾಜಶೇಖರ್ ? "

" ಐ ಆಮ್ ವೆರಿ ಸಾರಿ ಶ್ರೀಧರ್. ನಿನಗೆ ಸಂತೋಷವಾರ್ತೆಯನ್ನು ಹೇಳುವ ಭಾಗ್ಯವನ್ನು ದೇವರು ನನಗೆ ಕರುಣಿಸಲಿಲ್ಲ. "

ಆ ಮಾತು ಕೇಳಿ ಭಯಾನಕವಾದ ಕಲ್ಪನೆ ಉಗ್ರಸತ್ಯವಾದಾಗ ಆಗುವ ವಿಚಿತ್ರಯಾತನೆ ಶ್ರೀಧರನ ಹೃದಯವನ್ನು ಹಿಂಡಿತು. ಒಂದುಗಳಿಗೆ ಆ ಯಾತನೆಯ ಕೊರೆತವನ್ನು ಸಹಿಸಿ, ಪ್ರಯತ್ನಪಟ್ಟು ನುಂಗಿಕೊಂಡು ಹೇಳಿದ—

" ಅದು ನಿನ್ನ ದುರಾದೃಷ್ಟವಲ್ಲ, ನನ್ನ ಅದೃಷ್ಟ. ಅಂದಹಾಗೆ ನಿನ್ನದೇನಾಯಿತು. ? "

" ಹಾಫ್ ಫ್ರೀ ಆಯಿತು. "

" ಕಂಗ್ರಾಟ್ಸ್ – ನಡಿ. ಬಿ.ಆರ್.ಆರ್. ಗೆ ಹೋಗಿ ಒಂದು ಲೋಟ

ಕಾಫಿ ಕುಡಿದು ಸೆಲಿಬ್ರೇಟ್ ಮಾಡೋಣ."

"ಯಾವ ಸಂತೋಷಕ್ಕೆಂದು ಸೆಲಿಬ್ರೇಷನ್."

"ನನ್ನ ಬಿಡುಗಡೆಯ ದಿನವೆಂದು."

"ಅಂದರೆ—?"

—ಶ್ರೀಧರನ ಮಾತು ಅರ್ಥವಾಗದೆ ಕೇಳಿದ ರಾಜಶೇಖರ.

"ಅಂದರೆ – ನನಗಿವತ್ತು ಬಿಡುಗಡೆಯಲ್ಲವೇ ? ಇಷ್ಟು ದಿನ ನಾನು ವಿದ್ಯಾರ್ಥಿ ಜೀವನಕ್ಕೆ ಸಿಕ್ಕಿ ಕಾಲೇಜಿನ ಖೈದಿಯಾಗಿದ್ದೆ. ಇಂದಿನಿಂದ ನಾನು ಸ್ವತಂತ್ರ ನಾಗರಿಕ. ಇನ್ನು ಇಲ್ಲಿ ಹೇಳುವುದೂ ಇಲ್ಲ, ಕೇಳುವುದೂ ಇಲ್ಲ."

—ಲಘುವಾದ ಧ್ವನಿಯಲ್ಲಿ, ಒಣನಗು ನಗುತ್ತಾ ಹೇಳಿದ ಶ್ರೀಧರ – ಆದರೆ ಅವನ ಮಾತು ಭಾರವಾದ ಸೀಸದ ಗುಂಡಿನಂತೆ ರಾಜಶೇಖರನ ಅಂತಃಕರಣದ ಆಳಕ್ಕೆ ಇಳಿಯಿತು. ಬೆದರಿ ಕೇಳಿದ :

"ತಮಾಷೆ ಮಾಡುತ್ತೀ ಶ್ರೀಧರ್ ?"

"ಉಂಟೆ. ಐ ಆಮ್ ಡೆಡ್ ಸೀರಿಯಸ್. ಅವೊತ್ತೆ ನಾನು ಹೇಳಿರಲಿಲ್ಲವೇ ?"

"ಹೇಳಿದ್ದೆ, ನಿಜ. ಆದರೆ ಸತ್ಯವನ್ನು ಉತ್ಪ್ರೇಕ್ಷೆ ಮಾಡುತ್ತಿರಬಹುದು ಎಂದಿದ್ದೆ."

"ನಾನು ಹೇಳುವುದೆಲ್ಲಾ ಉತ್ಪ್ರೇಕ್ಷಾತೀತವಾದ ಸತ್ಯ ರಾಜಶೇಖರ್. ಈ ಸತ್ಯದ ಮುಂದೆ ಯಾವ ಉತ್ಪ್ರೇಕ್ಷೆಯೂ ಉಳಿಯಲಾರದು."

"ಅಂದರೆ....ಅಂದರೆ...."

"ಏನು ಅಂದರೆ ?"

"ಅಂದರೆ ಇದು ಸಿಗಲಿಲ್ಲಾಂತ ಕಾಲೇಜು ಬಿಟ್ಟುಬಿಡುತ್ತೀಯಾ ಶ್ರೀಧರ್."

"ಬಿಡದೆ ಏನು ಮಾಡಲಿ ?"

"ಹೇಗಾದರೂ ಮಾಡಿ ಓದು ಮುಂದುವರಿಸುವುದು ಸಾಧ್ಯವೇ ಇಲ್ಲವೆ ?"

"ಇದೆ."

"ಹೇಗೆ ?"

"ಭಿಕ್ಷುಕನಾಗಿ ; ಅವರಿವರ ಬಳಿ ತಿರುಪೆ ಬೇಡಿ. ಎಲ್ಲಿ ಹೋದರೂ ನನಗೆ ಭಿಕ್ಷೆ ಬೇಡುವುದಂತೂ ತಪ್ಪಿದ್ದಲ್ಲ. ರಾಜಶೇಖರ್, ಓದಿಗಾಗಿಯಾದರೂ

ಭಿಕ್ಷೆ ಬೇಡಬೇಕು, ಇಲ್ಲವೇ ಕೆಲಸಕ್ಕೆ ಭಿಕ್ಷೆ ಬೇಡಬೇಕು. ಈ ಓದು ಓದಿ ನನಗಾಗುವ ಲಾಭ ಅಷ್ಟರಲ್ಲೇ ಇದೆ. ಅದರ ಬದಲು ಯಾರಿಗಾದರೂ ಸಲಾಮು ಹಾಕಿ ಕೆಲಸಕ್ಕೆ ಸೇರಿದರೆ, ನನ್ನ ತಾಯಿ ಕಂಡವರ ಮನೆಯಲ್ಲಿ ಮೆಣಸಿನಪುಡಿ ಕುಟ್ಟುವುದನ್ನಾದರೂ ತಪ್ಪಿಸಬಹುದು. ”

“ ಹಾಗಿದ್ದರೆ ಇಷ್ಟು ದೂರ ಓದಿದ್ದೇಕೆ ? ”

“ ನಾನು ಮಾಡುವ ಗುಲಾಮಗಿರಿಗೆ ಹೆಚ್ಚಿನ ಅರ್ಹತೆ ಪಡೆಯಲು. ಇದಕ್ಕಿಂತ ಹೆಚ್ಚಿನ ಸೌಭಾಗ್ಯವೇನೂ ಈ ಶಿಕ್ಷಣದಿಂದ ಸಿಗುವುದಿಲ್ಲ ಆದಷ್ಟು ಹೆಚ್ಚಿನ ಅರ್ಹತೆ ಪಡೆಯಬೇಕೆಂದಿದ್ದೆ. ಇಲ್ಲಿಗೆ ಮುಕ್ತಾಯವಾಯಿತು. ಆದದ್ದೇ ಒಳ್ಳೆಯದಾಯಿತು. ”

“ ಇದೇನು ಮಾತು ಶ್ರೀಧರ್. ಇಷ್ಟಕ್ಕೋಸ್ಕರ ನಿನ್ನ ವಿಧ್ಯಾಭ್ಯಾಸಕ್ಕೇ ಶರಣುಹೊಡೆಯಬೇಕೇ ? ”

“ ಸುಂಕ ಕೊಡದೆ ಸಿಗದ ವಿದ್ಯಾಭ್ಯಾಸಕ್ಕೆ. ಸುಂಕ ಕೊಡುವ ಶಕ್ತಿ ಇಲ್ಲದ ಮೇಲೆ ಶರಣುಹೊಡೆಯದೆ ಬೇರೇನು ದಾರಿ ? ”

“ ಯಾರಾದರೂ ನಿನಗೆ ಸಹಾಯ ಮಾಡಲೊಪ್ಪಿದರೆ— ”

—ತನ್ನ ಧ್ವನಿಯಲ್ಲಿ ಯಾವುದೋ ಆಶೆಯನ್ನು ತುಂಬಿಕೊಂಡು ಕೇಳಿದ ರಾಜಶೇಖರ.

“ ಇಂದಲ್ಲ ನಾಳೆ ಆ ಮಾತು ನಿನ್ನಿಂದ ಬರುತ್ತದೆ ಎಂದು ನಾನು ನಿರೀಕ್ಷಿಸಿದ್ದೆ ಆದರೆ ಅದನ್ನು ಸ್ವೀಕರಿಸಲು ಸಿದ್ಧನಿಲ್ಲ. ಮೊದಲೇ ಹೇಳಿದೇನಲ್ಲ, ನಾನು ಬಡವ, ಆದರೆ ಬೆಗ್ಗರ್ ಅಲ್ಲ. ”

“ ಸ್ನೇಹದ ಸಹಾಯವನ್ನು ಸ್ವೀಕರಿಸುವುದೂ ಭಿಕ್ಷುಕ ವೃತ್ತಿಯೇ ? ”

“ ಬರಿ ಭಿಕ್ಷುಕವೃತ್ತಿಯಷ್ಟೇ ಅಲ್ಲ, ಅದರ ಬಂಗಾರದ ಪ್ರತಿಮೆ. ಆ ಮಾತು ಬೇಡ ಬಿಡು ”

—ಮತ್ತೆ ಆ ಮಾತನ್ನು ಎತ್ತಕೂಡದು ಎಂಬಷ್ಟು ಖಚಿತವಾದ ಸ್ವರದಲ್ಲಿ ಹೇಳಿದ ಶ್ರೀಧರ.

“ ಹಾಗಾದರೆ ಮುಂದೇನು ಮಾಡುತ್ತಿ ? ”

“ ಬೇರೇನು ದಾರಿ ಇದೆ ? ಎಲ್ಲಾದರೂ ಕೆಲಸ ಹುಡುಕುತ್ತೇನೆ. ಹೋಗಲಿ ಬಿಡು, ಈಗ ಅದಾವ ಮಾತಿಗೂ ವೇಳೆಯಿಲ್ಲ. ಬಾ, ಹೋಗಿ ಕಾಫಿ ಕುಡಿದು ಬರೋಣ – ಆದರೆ ಮೊದಲೇ ಒಂದು ಒಪ್ಪಂದ. ಕಾಫಿ ಬಿಲ್ ಕೊಡುವುದು ಈ ದಿನ ನನ್ನ ಸರದಿ. ಆ ಬಗ್ಗೆ ಚರ್ಚೆಗೂ ಅವಕಾಶವಿಲ್ಲ. ”

—ಎಂದು ಹೇಳಿ ರಾಜಶೇಖರ ಮುಂದೆ ಮಾತನಾಡಲು ಅವಕಾಶ ಕೊಡದೆ, ಬಲವಂತವಾಗಿ ಅವನನ್ನು ಹೋಟಲಿನತ್ತ ಎಳೆದುಕೊಂಡು ಹೋದ ಶ್ರೀಧರ. ಕಸಾಯಿ ಖಾನೆಗೆ ಹೋಗುವ ಕುರಿಯಂತೆ ರಾಜಶೇಖರ ಶ್ರೀಧರ ನನ್ನು ಹಿಂಬಾಲಿಸಿದ.

ಅಂದು ರಾಜಶೇಖರನೊಂದಿಗೆ ಕಾಲೇಜಿನ ಆವರಣವನ್ನು ದಾಟಿದ ಶ್ರೀಧರ, ಮತ್ತೆ ಆ ಆವರಣದಲ್ಲಿ ಕಾಲಿಡಲಿಲ್ಲ. ಕಾಲೇಜಿನ ನೆನಪಾದರೂ ಅವನಿಗೆ ಇತ್ತೋ ಇಲ್ಲವೊ ತಿಳಿಯದು. ಆದರೆ ರಾಜಶೇಖರನ ಹೃದಯದಲ್ಲಿ ಮಾತ್ರ ಆ ದಿನ ಮಾಯದ ಗಾಯವೊಂದು ನಿರ್ಮಾಣವಾಯಿತು.

## ೧೦

ಶ್ರೀಧರ ಕಾಲೇಜಿನಲ್ಲಿರುವಾಗಲೂ ಅವನಿಂದ ರಾಜಶೇಖರನ ಬಾಳಿ ನಲ್ಲಿ ಹೆಚ್ಚಿನ ಗದ್ದಲವೇನೂ ಇರದಿದ್ದರೂ, ಅವನು ಕಾಲೇಜು ಬಿಟ್ಟ ಬಳಿಕ, ರಾಜಶೇಖರನ ಪಾಲಿಗೆ ಕಾಲೇಜಿನ ಜೀವನ ಯಾವ ಬೆರಗೂ ಇಲ್ಲದ ನೀರಸ ಯಾಂತ್ರಿಕ ಜೀವನವಾಯಿತು. ಉಳಿದ ವಿದ್ಯಾರ್ಥಿಗಳಂತೆ ಯೂನಿಯನ್ ಚಟುವಟಿಕೆಗಳಾಗಲಿ, ಕಾಲೇಜು ಹುಡುಗರ ಉಳಿದ ಆಕರ್ಷಣೆಗಳಾಗಲಿ ರಾಜಶೇಖರನಿಗೆ ಬೇಕಾಗಿರಲಿಲ್ಲ. ಮೊದಲೇ ಸಾಧ್ಯವಾದಷ್ಟು ಮಟ್ಟಿಗೂ ತಾನಾಯಿತು, ತನ್ನ ಅಭ್ಯಾಸವಾಯಿತು ಎಂದಿದ್ದವನು, ಈಗಂತೂ ಮತ್ತೂ ಹೆಚ್ಚಾಗಿ ಪುಸ್ತಕದ ಕೋಟೆಯೊಳಗೇ ಸೇರಿಬಿಟ್ಟ. ಕಾಲೇಜು, ತಪ್ಪಿದರೆ ಹಾಸ್ಟಲು ಈ ಎರಡು ಸ್ಥಳ ಬಿಟ್ಟರೆ ರಾಜಶೇಖರ ಬೇರೆಲ್ಲೂ ಕಾಣದಾದ.

ಶ್ರೀಧರ ಕಾಲೇಜು ಬಿಟ್ಟ ಮೊದಲಿನಲ್ಲಿ ಒಂದೆರಡು ದಿನ ಎಲ್ಲಿಯಾದರೂ ಸಿಗಬಹುದು ಎಂದು ಸಂಜೆಯ ಹೊತ್ತು ಅಲ್ಲಲ್ಲಿ ಬೀದಿಗಳಲ್ಲಿ ಸುತ್ತಾಡಿದ. ಆದರೆ ಎಲ್ಲೂ ಶ್ರೀಧರ ಕಾಣಲಿಲ್ಲ. ಅವನ ಮನೆ ಎಲ್ಲಿರುವುದೆಂದು ಅವನಿಗೆ ತಿಳಿದಿರಲಿಲ್ಲ. ತನ್ನ ಸಹಪಾಠಿಗಳು ಯಾರಿಗಾದರೂ ಅವನ ವಿಳಾಸ ಗೊತ್ತಿದೆಯೇನೋ ಎಂದು ವಿಚಾರಿಸಿದ. ಆದರೆ ಯಾರಿಗೂ ಶ್ರೀಧರನ ಸರಿಯಾದ ವಿಳಾಸ ಗೊತ್ತಿರಲಿಲ್ಲ. ಅವನ ಮನೆ ಮಾವಳ್ಳಿಯಲ್ಲಿ ಎಲ್ಲೋ ಇರಬೇಕು ಎಂದು ಒಬ್ಬಿಬ್ಬರು ಕುರುಡು ದಾರಿ ತೋರಿಸಿದರು. ಆ ಮಾತನ್ನು ನಂಬಿ ರಾಜಶೇಖರ ಬಿಡುವು ದೊರೆತಾಗ ಮಾವಳ್ಳಿ, ವಿಶ್ವೇಶ್ವರಪುರ, ಲಾಲ್ ಬಾಗ್ ಸುತ್ತಮುತ್ತ ಎಲ್ಲ ಕಡೆಯಲ್ಲೂ ಅಲೆದಾಡಿದ. ಆದರೆ ಎಲ್ಲೂ ಶ್ರೀಧರ ಅವನ ಕಣ್ಣಿಗೆ ಬೀಳಲಿಲ್ಲ. ನಾಲ್ಕಾರು ದಿನ ಹೀಗೆ ಅಲೆದು, ನಿರಾಶನಾಗಿ 'ಅವನೇ ಎಂದಾದರೂ ಬರುತ್ತಾನೆ' ಎಂದು ನಿರಾಶವಾದ ಮನಸ್ಸಿಗೆ ಸಮಾ

ಧ್ಯಾನ ಹೇಳಿಕೊಂಡು ಸುಮ್ಮನಾದ. ಶ್ರೀಧರ ‘ ನಿನ್ನ ರೂಮಿಗೆ ಬರುತ್ತೇನೆ ’ ಎಂದು ರಾಜಶೇಖರನಿಗೆ ಮಾತು ಕೊಟ್ಟಿರಲಿಲ್ಲ. ಬಂದೇ ಬರುತ್ತಾನೆ ಎಂದು ನಂಬುವುದಕ್ಕೆ ಯಾವ ಕಾರಣವೂ ಇರಲಿಲ್ಲ. ಆದರೂ ಅವನು ‘ ಒಂದಲ್ಲ ಒಂದು ದಿನ ಬಂದೇ ಬರುತ್ತಾನೆ ’ ಎಂಬ ಕುರುಡು ನಂಬಿಕೆಗೆ ಜೋತು ಬಿದ್ದಿತ್ತು ರಾಜಶೇಖರನ ಹೃದಯ. ಈ ನಂಬಿಕೆ ಇದ್ದರೂ ಸಿಗಲಿಲ್ಲವಲ್ಲಾ ಎಂಬ ಕೊರಗು ಮಾತ್ರ ತಪ್ಪಿರಲಿಲ್ಲ.

ಆದರೆ ರಾಜಶೇಖರ ಈ ಕೊರಗನ್ನೇ ದೊಡ್ಡದಾಗಿ ಮಾಡಿಕೊಂಡು ಕುಳಿತುಕೊಳ್ಳಲು ವೇಳೆ ಇರಲಿಲ್ಲ. ಆ ವರ್ಷ ಪಬ್ಲಿಕ್ ಪರೀಕ್ಷೆಯಾದುದರಿಂದ, ಎರಡು ವರ್ಷಗಳ ವಿಷಯವನ್ನು ಅಭ್ಯಾಸ ಮಾಡಬೇಕಾಗಿದ್ದುದರಿಂದ ಅದಕ್ಕೇ ವೇಳೆ ಸಾಕಾಗುತ್ತಿರಲಿಲ್ಲ. ಅಲ್ಲದೆ ಮೇಲಿಂದ ಮೇಲೆ ನಾಗರಾಜ ಶೆಟ್ಟರು ಎಚ್ಚರಿಸುತ್ತಲೇ ಇದ್ದರು – ‘ ಓದುವುದನ್ನು ಕಡೆಗಾಲಕ್ಕೆ ಇರಲಿ ಎಂದು ತಳ್ಳಬೇಡ. ಆಪ್ಷನಲ್ಸ್ ವಿಷಯದಲ್ಲಿ ತುಂಬಾ ಜಾಗರೂಕನಾಗಿರಬೇಕು. ಅದರಲ್ಲಿ ಸಾಕಷ್ಟು ನಂಬರು ಬರದಿದ್ದರೆ, ಪಾಸಾಗಿಯೂ ಪ್ರಯೋಜನವಿಲ್ಲ ’ ಎಂದು. ಅದರೊಂದಿಗೆ ಚಿಂತಾಮಣಿಯಿಂದ ಚಿನ್ನಸ್ವಾಮಿ ಶೆಟ್ಟರು ಮೂರು ಮೂರು ದಿನಕ್ಕೊಂದು ಕಾಗದ ಬರೆಯುತ್ತಿದ್ದರು – ‘ಹಗಲೂ ಇರುಳೂ ಓದಬೇಕು ಓದಿನಲ್ಲಿ ತಾತ್ಸಾರ ಮಾಡಬೇಡ. ಹಾಗೆ ಮಾಡಿದರೆ ನಮ್ಮ ಆಶೆಯೆಲ್ಲಾ ಹೊಳೆಯಲ್ಲಿ ಹುಣಿಸೆಹಣ್ಣು ತೊಳೆದ ಹಾಗಾಗುತ್ತದೆ. ನಾಗರಾಜ ಶೆಟ್ಟರು ಹೇಳಿದ ಹಾಗೆ ಕೇಳು ! ’ ಎಂದು.

ಕ್ರಮಬದ್ಧವಾಗಿ ತನ್ನ ಅಭ್ಯಾಸ ನಡೆಸಲು ರಾಜಶೇಖರನಿಗೆ ಯಾರ ಒತ್ತಾಯವೂ ಬೇಕಿರಲಿಲ್ಲವಾದರೂ, ಅವರ ಎಚ್ಚರಿಕೆಯ ಮಾತು ಜೂಜಿನ ಕುದುರೆಯ ಬೆನ್ನು ಚಪ್ಪರಿಸಿದಂತಿದ್ದವು. ಉಳಿದುದೆಲ್ಲವನ್ನು ಮರೆತು ಅಭ್ಯಾಸದಲ್ಲಿ ಮುಳುಗಿದ ರಾಜಶೇಖರ. ರಜಾ ದಿನಗಳಲ್ಲೂ ಊರಿಗೆ ಕೂಡಾ ಹೋಗದೆ ವರ್ಷದ ಕೊನೆಗೆ ಬರಲಿರುವ ಪರೀಕ್ಷೆಗೆ ಸಿದ್ಧನಾಗತೊಡಗಿದ. ಈ ತಲ್ಲೀನತೆಯಲ್ಲಿ ಅವನಿಗೆ ವೇಗವಾಗಿ ಓಡುತ್ತಿದ್ದ ಕಾಲದ ಅರಿವೂ ಆಗಲಿಲ್ಲ. ಮಲಗಿ ಏಳುವುದರೊಳಗೆ ಎಂಬಂತೆ, ವಾರ್ಷಿಕ ಪರೀಕ್ಷೆಯೂ ಬಂದು ಮುಗಿದುಹೋಯಿತು.

ಪರೀಕ್ಷೆ ಮುಗಿದು, ಸಧ್ಯ ಬೇರೇನೂ ಯೋಚನೆ ಇಲ್ಲ ಎಂದು ನಿಟ್ಟುಸಿರು ಬಿಟ್ಟಾಗ ರಾಜಶೇಖರನಿಗೆ ಮತ್ತೆ ಶ್ರೀಧರನ ನೆನಪಾಯಿತು. ಊರಿಗೆ ಹೋಗುವ ಮುನ್ನವಾದರೂ ಒಮ್ಮೆ ಅವನನ್ನು ಕಂಡು ಹೋಗಬೇಕೆಂದು ಬಯಸಿದ. ಆದರೆ ಅವನನ್ನು ಎಲ್ಲಿ ಹುಡುಕಬೇಕೆಂದು ಚಿಂತಿಸುತ್ತಿರುವಾ

ಗಲೇ, ಶ್ರೀಧರ ತಾನೇ ಅವನನ್ನು ಹುಡುಕಿಕೊಂಡು ಬಂದ. ಆಕಸ್ಮಿಕನಾಗಿ ಬಂದ ಅವನನ್ನು ಕಂಡು ರಾಜಶೇಖರನಿಗೆ ಅರಸುತ್ತಿದ್ದ ಬಳ್ಳಿ, ಕಾಲ್ತೊಡರಿದಂತಾಯಿತು. ಆ ಸಂತೋಷದಲ್ಲಿ ಶ್ರೀಧರನ ಭುಜವನ್ನು ಹಿಡಿದು ಕುಲುಕಿ—

" ಇಷ್ಟು ದಿನ ಎಲ್ಲಿ ಹೋಗಿ ಬಿಟ್ಟಿದ್ದೆ ಶ್ರೀಧರ್ ? ನಿನಗೆ ಹುಡುಕಿ ಹುಡುಕಿ ಸಾಕಾಯಿತು. ನಿನ್ನನ್ನು ನೋಡದೆ ಊರಿಗೆ ಹೋಗಬೇಕೇನೊ ಎಂದು ಹೆದರಿದ್ದೆ. ಮಹಾರಾಯ ! ಇಷ್ಟು ದಿನಕ್ಕಾದರೂ ನಿನಗೆ ನನ್ನ ನೆನಪಾಯಿತಲ್ಲ ! "

—ಎಂದ.

" ನಿನ್ನ ಪರೀಕ್ಷೆಯ ಕಾಲದಲ್ಲಿ ಬಂದೇಕೆ ತೊಂದರೆ ಕೊಡುವುದು ಎಂದು ಬರಲಿಲ್ಲ. ಪರೀಕ್ಷೆಯಲ್ಲಿ ಹೇಗೆ ಮಾಡಿದೀಯ ? "

" ಚೆನ್ನಾಗಿ ಮಾಡಿದೇನೆ. "

" ಫಸ್ಟ್‌ಕ್ಲಾಸ್ ಬರಬಹುದೇ ? "

" ಅದೇನೊ ಹೇಳಲಾರೆ. ಆ ಪರೀಕ್ಷೆಯ ಸುದ್ದಿ ಏಕೆ ಬಿಡು. ಹಾಳಾಗಲಿ ಅದು. ಇಷ್ಟು ದಿನ ಅದಕ್ಕೆ ತಲೆ ಕೆಡಿಸಿಕೊಂಡಿದ್ದೇ ಸಾಕಾಗಿದೆ. ನನ್ನದಿರಲಿ. ಇಷ್ಟು ದಿನ ನೀನೆಲ್ಲಿ ಹೋಗಿದ್ದೆ ? "

" ಎಲ್ಲೂ ಹೋಗಿರಲಿಲ್ಲ ಇಲ್ಲಿಯೇ ಇದ್ದೆ. "

" ಮತ್ತೆ ಒಂದು ದಿನವಾದರೂ ಕಾಣಲಿಲ್ಲ. "

" ಆಗಲೇ ಹೇಳಲಿಲ್ಲವೇ ? ಪರೀಕ್ಷೆ ಮುಗಿಯಲಿ. ಬಂದು ನೋಡೋಣ. ಅಷ್ಟರಲ್ಲೇ ನನ್ನನ್ನು ನೋಡದಿದ್ದರೆ ನಿನ್ನ ಕಣ್ಣೇನೂ ಸಿಡಿದು ಹೋಗುವುದಿಲ್ಲ ಎಂದು ಇದ್ದೆ. ಈಗ ಪರೀಕ್ಷೆ ಮುಗಿಯಿತು ಎಂದು ಗೊತ್ತಾಯಿತು. ನಾನೇ ಬಂದೆನಲ್ಲಾ, ಇನ್ನೇನು ? "

" ಸಧ್ಯ – ಅಷ್ಟಾದರೂ ನನ್ನ ಮೇಲೆ ದಯೆ ತೋರಿದೆಯಲ್ಲ. ನಾನೇ ಧನ್ಯ. ಅದು ಹೋಗಲಿ. ಈಗ ನೀನೇನು ಮಾಡುತ್ತಿದ್ದೀಯಾ ? "

" ಕಾಲೇಜು ಬಿಟ್ಟಾಗಲೇ ಹೇಳಲಿಲ್ಲವೇ ಏನು ಮಾಡುತ್ತೇನೆ ಎಂದು."

" ಆಗ ಏನು ಹೇಳಿದೆಯೋ, ಬಿಟ್ಟೆಯೋ ? ಈಗ ಏನು ಮಾಡುತ್ತಿದೀಯ ಹೇಳು ? "

" ಈಗ ನಾನು ನಿನ್ನ ಹಾಗೆ ಬೇಜವಾಬ್ದಾರಿ ವಿದ್ಯಾರ್ಥಿಯಲ್ಲ, ದುಡಿಯುವ ಗಂಡು, ದೇಶದ ಗಣ್ಯ ಪ್ರಜೆ. "

" ಅಂದರೆ – ಕೆಲಸಕ್ಕೆ ಸೇರಿದೆಯಾ ? "

" ಹೂ. "

" ಎಲ್ಲಿ ? "

" 'ದಿನವಾಣಿ' ಪತ್ರಿಕೆ ಆಫೀಸಿನಲ್ಲಿ."

" ಎಲ್ಲಿ – ಅಂದೆ "

—ಶ್ರೀಧರನ ಉತ್ತರವನ್ನಾಲಿಸಿ ಆಶ್ಚರ್ಯದಿಂದ ಕೇಳಿದ ರಾಜಶೇಖರ.

" 'ದಿನವಾಣಿ' ಪತ್ರಿಕೆ ಆಫೀಸಿನಲ್ಲಿ ಎಂದು ಹೇಳಲಿಲ್ಲವೇ ? ಕಿವಿ ಕಿವುಡಾಯಿತೇನು ಈಚೆಗೆ ? "

" ಕಿವಿ ಸರಿಯಾಗಿದೆ. ಆದರೆ ನಿನ್ನ ಮಾತು ನಂಬುವುದೇ ಕಷ್ಟವಾಯಿತು. ಅದಕ್ಕೇ ಕೇಳಿದೆ. ಅಲ್ಲೇನು ಕೆಲಸ ? "

" ಉಪ ಸಂಪಾದಕ."

" ಆ ಕೆಲಸ ಎಲ್ಲಿ ಕಲಿತೆ ನೀನು ? "

" ಆ ಕೆಲಸಕ್ಕೆ ಕಲಿಯುವಂಥದೇನೂ ಇಲ್ಲ. ಯಾರಾದರೂ ಆಗಬಹುದು. ಅಷ್ಟಿಷ್ಟು ಇಂಗ್ಲೀಷು, ಕನ್ನಡ ಬಂದರೆ ಸಾಕು.

" ಎಷ್ಟು ಸಂಬಳ ಕೊಡುತ್ತಾರೆ ? "

" ಇಪ್ಪತ್ತು ಗಂಟೆ ಕೆಲಸಕ್ಕೆ ಮೂವತ್ತು ರೂಪಾಯಿ ! "

" ಹಾಗಾದರೆ ಆ ಕೆಲಸಕ್ಕೇಕೆ ಸೇರಿದೆ ? "

" ಬೇರೆ ಕೆಲಸ ಸಿಗದಿದ್ದುದರಿಂದ. ಅದಿರಲಿ – ಈ ಪ್ರಶ್ನೆಗಳನ್ನೆಲ್ಲಾ ಕೇಳಲು ನಿನಗೇನು ಅಧಿಕಾರ ? ನೀನೇನು ನಮ್ಮಪ್ಪನೇ ? "

" ನನ್ನ ಪ್ರಶ್ನೆಯನ್ನು ತಪ್ಪು ತಿಳಿದುಕೊಳ್ಳಬೇಡ ಶ್ರೀಧರ್. ಅಷ್ಟು ಕಡಿಮೆ ಸಂಬಳ – ಇಷ್ಟು ದುಡಿತ – ಇದೇನು ಕೆಲಸ ? "

" ಅದೇ ಕನ್ನಡದ ಭವ್ಯ ಪತ್ರಿಕೋದ್ಯೋಗ. "

" ಅದಕ್ಕೇ ನಾನು ಕೇಳಿದುದು – ಎಲ್ಲಾ ಬಿಟ್ಟು ಈ ಕೆಲಸಕ್ಕೇಕೆ ಸೇರಿದೆ ಎಂದು. ಬೇರೆಲ್ಲೂ ಕೆಲಸ ಸಿಗಲಿಲ್ಲವೇ ? "

" ಸಿಗುತ್ತಿತ್ತು. ಏನಿಲ್ಲವಾದರೂ ಮಿಡ್ಲ್‌ಸ್ಕೂಲ್ ಮೇಷ್ಟರ ಕೆಲಸವಾದರೂ ಸಿಗುತ್ತಿತ್ತು. ಅರೆಹೊಟ್ಟೆ ಸಂಬಳದ ಆ ಕುರಿ ಕಾಯುವ ಕೆಲಸ ಬೇಡವೆಂದು ಇಲ್ಲಿಗೆ ಬಂದೆ. "

" ಇಲ್ಲೇನು ಬೆಟ್ಟ ಕಡಿಯುತ್ತೀಯಾ "

" ಇಂದಲ್ಲ – ನಾಳೆ, ಆ ಕೆಲಸ ಮಾಡಬಹುದು ಎಂಬ ಆಸೆಯಿದೆ. "

" ಅಂದರೆ—? "

" ಪತ್ರಿಕೆಗಳ ಪ್ರಭಾವ, ಶಕ್ತಿ ಎಷ್ಟಿದೆ ಎಂಬುದು ನಿನಗೆ ತಿಳಿಯದು ರಾಜಶೇಖರ್. "

" ಎಷ್ಟಿದೆ ಎಂದು ನಾನು ಕೇಳಿಬಲ್ಲೆ."

" ಹೇಗೆ ? "

" ಒಮ್ಮೆ ಯಾವುದೋ ಪತ್ರಿಕೆಯಲ್ಲಿ ಸುದ್ದಿ ಬಂದಿದ್ದರಿಂದಲೇ ನಮ್ಮೂರ ಅಮಲ್ದಾರರಿಗೆ ವರ್ಗವಾದದ್ದು. "

" ಅದು ಪತ್ರಿಕೆಗಳು ಮಾಡಬಹುದಾದ ಬಹು ಅಲ್ಪ ಕಾರ್ಯ. ಅದಕ್ಕಿಂತ ಹೆಚ್ಚಿನದನ್ನು ಸಾಧಿಸಬಹುದು."

" ಏನು ? "

" ಜನಗಳ ಮನಸ್ಸು, ಹೃದಯ, ಅಭಿರುಚಿಯನ್ನು ತಿದ್ದಿ, ಹಲ ಜಾಡ್ಯದಿಂದ ದುರ್ಬಲವಾದ ಸಮಾಜವನ್ನು ಮತ್ತೆ ಭದ್ರ ಬುನಾದಿಯ ಮೇಲೆ ಸ್ಥಾಪಿಸಬಹುದು. ಅನ್ಯಾಯ, ಅತ್ಯಾಚಾರಗಳಿಂದಲೇ ಪುಷ್ಟಿಗೊಂಡು ಬೆಳೆಯುತ್ತಿರುವ ಪಾಶವೀಶಕ್ತಿಗಳನ್ನು ಮುರಿದೊಟ್ಟಬಹುದು. ಬಿಡುಗಡೆಯ ಸಮರದ ಬ್ರಹ್ಮಾಸ್ತ್ರವಾಗಬಹುದು. ಹೊಸನಾಡು, ಹೊಸ ಜನಾಂಗವನ್ನು ನಿರ್ಮಿಸುವ ವಿಶ್ವಕರ್ಮನಾಗಬಲ್ಲದು ಪತ್ರಿಕೆ."

" ಇದೇನು ನಿನ್ನ ಮಾತೋ, ಅಥವಾ ನಿಮ್ಮ ಪತ್ರಿಕೆಯ ಸಂಪಾದಕೀಯವೋ ? "

—ಶ್ರೀಧರ ಗಂಭೀರವಾಗಿ ಹೇಳಿದ ಮಾತನ್ನು ಕೇಳಿ, ನಗುತ್ತಾ ಹೇಳಿದ ರಾಜಶೇಖರ.

" ಈಗ ನಿನಗೆ ನನ್ನ ಮಾತು ನಗೆಚಾಟಿಕೆಯದಾಗಿ ತೋರುತ್ತಿರಬಹುದು ರಾಜಶೇಖರ. ಆದರೆ ನಾನು ನಗೆಚಾಟಿಕೆಗೆ ಹೇಳುತ್ತಿಲ್ಲ. ಇಂದಲ್ಲ ನಾಳೆ ಅಂಥ ಪ್ರಬಲ ಪತ್ರಿಕೆಯೊಂದನ್ನು ನಡೆಸಬೇಕು ಎಂಬ ಉದ್ದೇಶದಿಂದಲೇ ತರಬೇತಿಗಾಗಿ ನಾನಿಲ್ಲಿ ಕೆಲಸಕ್ಕೆ ಸೇರಿದ್ದು. ಇಲ್ಲವಾದರೆ ಬರೀ ದುಡಿಮೆಗೆಂದರೆ ಎಷ್ಟೋ ಕಾರ್ಖಾನೆಗಳಿದ್ದುವು."

" ಅಂತೂ ಪತ್ರಿಕೆ ಹೊರಡಿಸಿ ನಿನಗಾದ ಅನ್ಯಾಯದ ಸೇಡು ತೀರಿಸುತ್ತೀ ಅನ್ನು. "

" ನನ್ನೊಬ್ಬನಿಗಾದ ಅನ್ಯಾಯದ ಸೇಡು ತೀರಿಸಲಲ್ಲ ರಾಜಶೇಖರ. ಅನ್ಯಾಯದ ಅಗ್ನಿಕುಂಡದಲ್ಲಿ ಬೇಯುತ್ತಿರುವ ಅಗಣಿತ ಜನಕೋಟಿಯಲ್ಲಿ ನಾನೊಂದು ಹನಿ. ಹೀಗಿರುವಾಗ ನನಗಾದ ಅನ್ಯಾಯದ್ದೇನು ಲೆಕ್ಕ ? ಇಂದಲ್ಲ ನಾಳೆ – ನನ್ನೊಬ್ಬನಿಗಾದ ಅನ್ಯಾಯವನ್ನಷ್ಟೇ ಅಲ್ಲ, ನನ್ನಂತಹ ನೂರು ಕೋಟಿಗಾದ ಅನ್ಯಾಯದ ಸೇಡು ತೀರಿಸಲು ಸಮರ್ಥವಾದ ಪತ್ರಿಕೆ ಕಟ್ಟಬೇಕು ಎನ್ನುವುದು ನನ್ನ ಕನಸು. ಬರೀ ಹೊಟ್ಟೆಗೆ ದುಡಿದರೇನು

ಬಂತು ರಾಜಶೇಖರ, ದೇಶಕ್ಕೂ ದುಡಿಯಬೇಕು. ”

“ ಅಗತ್ಯವಾಗಿ. ನೀನು ಅಂಥ ಪತ್ರಿಕೆ ಹೊರಡಿಸಿದ ದಿನ, ನಾನೇ ಅದರ ಮೊದಲ ಚಂದಾದಾರನಾಗುತ್ತೇನೆ. ”

“ ಹೋಗಲಿ ಬಿಡು. ಎಷ್ಟು ಹೇಳಿದರೂ ನನ್ನದು ಕನಸಿನ ಮಾತಾಯಿತು. ಅದಿರಲಿ. ಹೇಗೂ ಇಂಟರ್ ಪಾಸಾಗುತ್ತದೆ. ಮುಂದೆ ನೀನು ಏನು ಮಾಡಬೇಕೆಂದಿದ್ದೀಯಾ ? ”

“ ನಿನ್ನ ಪತ್ರಿಕೆಯಲ್ಲಿ ಉಪಸಂಪಾದಕನಾಗಲೇ ? ”

—ನಗುತ್ತಾ ಕೇಳಿದ ರಾಜಶೇಖರ.

“ ತಮಾಷೆಗೆ ಕೇಳುತ್ತಿಲ್ಲ, ರಾಜಶೇಖರ. ಮುಂದೆ ಏನು ಮಾಡಬೇಕೆಂದಿದ್ದೀಯಾ ? ”

—ಶ್ರೀಧರ ಗಂಭೀರ ಸ್ವರದಲ್ಲಿ ಕೇಳಿದ. ಅವನ ಪ್ರಶ್ನೆಗೆ ಏನು ಉತ್ತರ ಕೊಡಬೇಕೆಂದು ಕೂಡಲೇ ರಾಜಶೇಖರನಿಗೆ ತೋಚಲಿಲ್ಲ. ಪರೀಕ್ಷೆಯಲ್ಲಿ ಪಾಸಾಗಬೇಕು ಎಂದು ರಾಜಶೇಖರ ಓದಿದ್ದನೇ ವಿನಾ, ಪಾಸಾದ ಬಳಿಕ ಮುಂದೇನು ಮಾಡಬೇಕು ಎಂಬ ಪ್ರಶ್ನೆ ಎಂದೂ ಅವನ ಮಿದುಳನ್ನು ಕಲಕಿಯೇ ಇರಲಿಲ್ಲ. ಎಂತಲೇ ಶ್ರೀಧರ ‘ ಮುಂದೇನು ? ’ ಎಂಬ ಪ್ರಶ್ನೆ ಕೇಳಿದಾಗ ಏನು ಉತ್ತರ ಹೇಳಬೇಕೆಂದು ತೋಚದಾಯಿತು. ಅದನ್ನೇ ಹೇಳಿದ.

“ ಆ ಯೋಚನೆಯನ್ನೇ ನಾನು ಈವರೆಗೂ ಮಾಡಿಲ್ಲ. ”

“ ಅಂದರೆ— ? ”

“ ನಿಜವಾಗಿಯೂ ನೀನು ಈ ಪ್ರಶ್ನೆ ಕೇಳುವ ವರೆಗೂ ಈ ವಿಚಾರವೇ ನನ್ನ ತಲೆಗೆ ಬಂದಿರಲಿಲ್ಲ. ”

“ ಹಾಗಾದರೆ ಕಾಲೇಜಿಗೆ ಯಾವ ಉದ್ದೇಶಕ್ಕಾಗಿ ಸೇರಿದೆ ? ”

“ ನಿಜ ಹೇಳಬೇಕೆಂದರೆ ಕಾಲೇಜಿಗೆ ಸೇರುವಾಗಲೂ ಏಕೆ ಸೇರಬೇಕು ಎಂದು ಯೋಚಿಸಿರಲಿಲ್ಲ. ತಂದೆಯವರಿಗೆ ನಾನು ಕಾಲೇಜಿನಲ್ಲಿ ಓದುವುದು ಪ್ರಿಯವಾಗಿತ್ತು. ಓದು ಎಂದರು, ಓದಿದೆ. ”

“ ಅಷ್ಟೇನೇ ? ”

—ತನ್ನ ಪ್ರಶ್ನೆಗೆ ರಾಜಶೇಖರನಿತ್ತ ಉತ್ತರ ಕೇಳಿ ಶ್ರೀಧರನಿಗೆ ಘೋರ ನಿರಾಶೆಯಾದಂತಿತ್ತು ಅದನ್ನು ಹಾಗೆಯೇ ನುಂಗಿಕೊಂಡು ಕೇಳಿದ–

“ ಕಾಲೇಜಿಗೆ ಸೇರುವಾಗಲಂತೂ ತಂದೆಯ ಮಾತಿಗೆ ಕಟ್ಟುಬಿದ್ದು ಕಾಲೇಜಿಗೆ ಬಂದೆ. ಇಲ್ಲಿ ಐಚ್ಛಿಕ ವಿಷಯಗಳನ್ನು ಆರಿಸಿಕೊಂಡೆಯಲ್ಲಾ

ಆಗಲೂ ಯೋಚಿಸಲಿಲ್ಲವೇ ? "

" ಇಲ್ಲ."

" ಹಾಗಾದರೆ ಸಿ. ಬಿ. ಜೆಡ್. ತೆಗೆದುಕೊಂಡದ್ದೇತಕ್ಕೆ ? "

" ನಾಗರಾಜಶೆಟ್ಟರ ಸಲಹೆ ಮೇಲೆ. "

" ಅಷ್ಟೇನೆ ? "

" ಅಷ್ಟೇ."

" ನೀನೇ ಇದು ಬೇಕೆಂದು ಆರಿಸಲಿಲ್ಲ............? "

" ಊಹೂ."

" ಚೆನ್ನಾಯಿತು ಬಿಡು. ತಂದೆಯವರು ಹೇಳಿದರು – ಕಾಲೇಜಿಗೆ ಸೇರಿದೆ; ನಾಗರಾಜಶೆಟ್ಟರು ಹೇಳಿದರು – ಅವರು ತೋರಿಸಿದ ಐಚ್ಛಿಕ ವಿಷಯ ಆರಿಸಿಕೊಂಡೆ ; ಮುಂದೇನು ಮಾಡಬೇಕು – ಅದಕ್ಕೆ ಮತ್ತೊಬ್ಬರನ್ನು ಕೇಳಬೇಕು. ಅಷ್ಟೇನೇ ? ನಿನಗೇ ನಿನ್ನ ಜೀವನದಲ್ಲಿ ಮುಂದೆ ಏನಾಗಬೇಕು ಎಂದು ಗೊತ್ತುಗುರಿ ಇಲ್ಲವೇ ? "

" ನಿಜವಾಗಿಯೂ ನಾನು ಈ ವಿಚಾರದಲ್ಲಿ ಇಂದಿನವರೆಗೂ ಏನೂ ಯೋಚನೆಯನ್ನೇ ಮಾಡಿರಲಿಲ್ಲ "

" ಅಂದರೆ, ನೀನು ಪರರಿಚ್ಛೆಯಂತೆ ನಡೆವ ಕುರುಡು ಯಂತ್ರ ಅನ್ನು ? "

" ಇದುವರೆಗೂ ಹಾಗೇ ಇದ್ದೇನೆ ಎಂದರೆ ತಪ್ಪೇನೂ ಇಲ್ಲ, ಹೋಗಲಿ ನೀನೂ ನನ್ನ ಹಾಗೇ ಸಿ. ಬಿ. ಜೆಡ್. ತೆಗೆದುಕೊಂಡಿದ್ದೆಯಲ್ಲ ಅದರಲ್ಲಿ ಮುಂದೆ ಖಚಿತವಾಗಿ ಏನಾದರೂ ಆಗಬೇಕು ಎಂಬ ಉದ್ದೇಶವಿತ್ತೇ ? "

" ಇತ್ತು."

" ಏನು ? "

" ಡಾಕ್ಟರ್ ಆಗಬೇಕು ಎಂದು ಇದ್ದೆ. ಅದಕ್ಕೆ ಪೋಷಕವಾಗಿಯೆಂದೇ ಇಲ್ಲಿ ಈ ವಿಷಯ ಆರಿಸಿಕೊಂಡದ್ದು. ಆದರೆ ನನ್ನ ಬಯಕೆ ಭಗ್ನನಾಕೆಯಾಯಿತು."

—ತೀವ್ರ ನಿರಾಶೆಯ ಆಳವಾದ, ದಟ್ಟವಾದ, ಬಿಸಿಯಾದ ನಿಟ್ಟುಸಿರಿಟ್ಟು ಹೇಳಿದ ಶ್ರೀಧರ. ಆ ಮಾತು ಹೇಳುವಾಗ ಅವನ ಕಣ್ಣುಗಳಲ್ಲಿ ಅಪಾರ ಯಾತನೆ ತುಳುಕಿ ಚೆಲ್ಲಿತು. ಅದನ್ನು ಗಮನಿಸಿ ಕೇಳಿದ ರಾಜಶೇಖರ.

" ಡಾಕ್ಟರಾಗಬೇಕು ಅಂತ ಅಷ್ಟು ಆಸೆಯಿತ್ತೆ ? "

" ಇತ್ತು, ಇತ್ತು – ಬೆಟ್ಟದಷ್ಟು ಆಸೆಯಿತ್ತು. ಅದಕ್ಕಾಗೇ ಅದು ನನ್ನ ಕೈಲಿ ಸಾಗದ ಕೆಲಸವೆಂದರಿತೂ, ಆ ಬೆಟ್ಟ ಹತ್ತಲು ಯತ್ನಿಸಿದೆ. ವೃಥಾ ನಮ್ಮ ತಾಯಿಯನ್ನೂ ಕಂಡವರ ಆಳಾಗಿ ಮಾಡಿ ದಣಿಸಿದೆ. ನನ್ನ ಪ್ರಯತ್ನಕ್ಕೆ ಅಷ್ಟೇ ಫಲವಾಯಿತು. "

" ಅದೇಕೆ ಅಷ್ಟು ಆಸೆ ಶ್ರೀಧರ್? ಅಂಥ ಬಯಸುವಂಥ ಉದ್ಯೋಗವೇ ಅದು ? "

" ಉಳಿದವರ ಪಾಲಿಗೆ ಹೇಗೋ ಏನೋ. ಆದರೆ ನನ್ನ ಮಟ್ಟಿಗಂತೂ ಅದೇ ನನ್ನ ಹೆಬ್ಬಯಕೆಯ ಗೌರೀಶಂಕರವಾಗಿತ್ತು. "

ಎಲ್ಲಾ ಬಿಟ್ಟು ಆ ಹೆಣ ಕೊಯ್ಯುವ ಕೆಲಸದಲ್ಲೇನು ಅಷ್ಟು ಆಕರ್ಷಣೆ ? ಚೆನ್ನಾಗಿ ಹಣ ಗಳಿಸಬಹುದೆಂದೋ ? "

" ಆ ಉದ್ದೇಶಕ್ಕೂ ನನ್ನ ಬಯಕೆಗೂ ಧ್ರುವದೂರ ರಾಜಶೇಖರ್. ಒಂದು ಅರ್ಥದಲ್ಲಿ ನೀನು ಹೇಳುವ ಮಾತು ನಿಜ. ಈಗ ಬಹುಮಂದಿ ಡಾಕ್ಟರಾಗಿರುವುದು ಆ ಉದ್ದೇಶದಿಂದಲೇ. ಇತರರ ದುಃಖ, ರೋಗರುಜಿನ, ಸಾವು, ಕಣ್ಣೀರು ಎಲ್ಲಾ ಇವರ ಪಾಲಿಗೆ ಬಂಗಾರದ ಮೊಟ್ಟೆ ಇಡುವ ಬಾತು. ಆದರೆ ನನಗೆ ಆ ಉದ್ದೇಶವಿರಲಿಲ್ಲ. "

" ಮತ್ತೇನಿತ್ತು ? "

" ಡಾಕ್ಟರಾಗಿ, ಆ ಭಾವನೆಗೆ ವಿರುದ್ಧವಾಗಿ ದುಡಿಯಬೇಕೆಂದು."

" ಅಂದರೆ—? "

" ನನ್ನ ತಂದೆ ಸತ್ತುದು ಡಾಕ್ಟರುಗಳ ಈ ಪ್ರೇತಾಶೆಯ ಫಲವಾಗಿ. ಇವರ ಸುಲಿಗೆಗೆ ಕೊಡುವಷ್ಟು ಹಣ ನಮ್ಮ ತಂದೆಯ ಬಳಿ ಇದ್ದಿದ್ದರೆ ಅವರು ಸಾಯಬೇಕಾಗಿರಲಿಲ್ಲ. ಈ ಡಾಕ್ಟರುಗಳು ಬಡವರನ್ನು ನಡಸಿಕೊಳ್ಳುವ ರೀತಿಯನ್ನು ನೀನು ನೋಡಿಲ್ಲ ರಾಜಶೇಖರ. ಬಡವರು ಇವರ ಕಾಲಕಸಕ್ಕಿಂತಲೂ ಕಡೆ. ಖಾಯಿಲೆಯಿಂದ ನಮ್ಮ ತಂದೆಯನ್ನು ಆಸ್ಪತ್ರೆಗೆ ಹಾಕಿದಾಗ, ದುಡ್ಡಿದ್ದವರೊಬ್ಬರಿಗೆ ಆ ' ಬೆಡ್ ' ತೆರವು ಮಾಡಿಕೊಡಲು ವಿಷಮಾವಸ್ಥೆಯಲ್ಲಿದ್ದ ನನ್ನ ತಂದೆಯನ್ನು ವರಾಂಡದಲ್ಲಿ ತಂದು ಎಳೆದರು. ಡಾಕ್ಟರುಗಳಿಗೆ ಬೇಡವಾದ ಈ ಬಡರೋಗಿ ನರ್ಸ್‌ಗಳಿಗೂ ಬೇಡವಾಗಿ, ಬೀದಿಯಲ್ಲಿ ಬಿದ್ದ ಬೇವಾರ್ಸಿಯಂತೆ ಮಾತನಾಡಿಸುವವರೂ ದಿಕ್ಕಿಲ್ಲದೆ ಸತ್ತರು. ಅಂದೇ ನಾನು ವೈದ್ಯನಾಗಬೇಕು, ಬಡವರ ಸೇವೆಗೆ ದುಡಿಯಬೇಕು ಎಂದು ಅಂದುಕೊಂಡೆ. ಅದಾಗಲಿಲ್ಲ. ಈಗ ಆ ಬಡತನವನ್ನೇ ನಿರ್ಮೂಲ ಮಾಡಬೇಕು. .. ಅನ್ಯಾಯದ ಖಾಂಡವ ವನವನ್ನು ದಹಿಸಬೇಕು ಎಂದು ಪತ್ರಿಕೋದ್ಯೋಗಕ್ಕೆ ಬಂದೆ ರಾಜಶೇಖರ."

—ತನ್ನೊಳಗೆ ಬಹುದಿನದಿಂದ ಉರಿಯುತ್ತಿದ್ದ ನಿರಾಶೆಯ ಕಹಿಯನ್ನು ಕಕ್ಕುವನಂತೆ ಉದ್ವಿಗ್ನನಾಗಿ ಹೇಳಿ ತನ್ನ ಮಾತನ್ನು ನಿಲ್ಲಿಸಿದ ಶ್ರೀಧರ. ಅವನ ಮಾತನ್ನು ಕೇಳಕೇಳುತ್ತಾ, ರಾಜಶೇಖರನಿಗೆ ಅದುವರೆಗೂ ಕಾಣದ ಹೊಸ ವ್ಯಕ್ತಿಯೊಬ್ಬನನ್ನು ಕಂಡು ಅನುಭವವಾಯಿತು. ಮೂಕನಾಗಿ ಕುಳಿತು ಕೇಳಿದ. ಅವನ ಮಾತು ನಿಂತಮೇಲೂ ಮುಂದೆ ತಾನು ಏನು ಮಾತನಾಡ ಬೇಕೆಂಬುದು ಅವನಿಗೆ ತೋಚಲಿಲ್ಲ.

" ನನ್ನ ಕನಸಿನ ಮಾತು ಹಾಳಾಗಲಿ ಬಿಡು "

—ಆಪ್ತರ ಶವವನ್ನೊರಗಿಸಿದ ಚಿತೆಗೆ ಬೆಂಕಿಯೊಟ್ಟುವ ರೀತಿಯಲ್ಲಿ ಹೇಳಿದ ಶ್ರೀಧರ.

" ನಮ್ಮ ಕನಸುಗಳೆಲ್ಲವೂ ಬಡವರ ಮಕ್ಕಳಂತೆ ಸಾಯಲೇ ಹುಟ್ಟಿದವು. ಆದರೆ ನಿನಗೆ ನಾನು ಹೇಳಬೇಕೆಂದಿರುವ ಮಾತು ಇಷ್ಟೇ ರಾಜಶೇಖರ. ನಿನ್ನ ಬಾಳನ್ನು ಹೊಳೆಯಲ್ಲಿ ಹರಿವ ಹುಲ್ಲಾಗಿ ಮಾಡಬೇಡ ; ಪರೀಕ್ಷೆಗೆ ದುಡಿವ ಯಂತ್ರವಾಗಬೇಡ ನಿನ್ನ ಬಾಳಿನ ಗಾಳಿಪಟಕ್ಕೆ ಯಾವುದೋ ಹೆಬ್ಬಯಕೆಯ ಸೂತ್ರ ಕಟ್ಟು. ಜೀವನದಲ್ಲಿ ನಿನಗೆ ಬೇಕಾದ ರಂಗ ಆರಿಸಿಕೋ. ಆ ರಂಗದಲ್ಲಿ ಹತ್ತುಜನಕ್ಕೆ ಉಪಯೋಗವಾಗುವಂತೆ ದುಡಿ."

" ನಿನ್ನ ಮಾತನ್ನು ನಾನು ಎಂದೂ ಮರೆಯುವುದಿಲ್ಲ ಶ್ರೀಧರ. ಇದು ವರೆಗೂ ಮುಂದೆ ಬಾಳಿನಲ್ಲಿ ನಾನು ಏನಾಗಬೇಕು ಎಂಬ ಕಲ್ಪನೆ ನನಗಿರಲಿಲ್ಲ. ಇಂದು ನಿನ್ನ ಮಾತು ನನ್ನ ಬಾಳಿಗೆ ಹೊಸ ಕಣ್ಣು ನೀಡಿದೆ. ನಿನ್ನ ಕನಸನ್ನೇ ನನ್ನ ಕನಸಾಗಿ ಮಾಡಿಕೊಳ್ಳುತ್ತೇನೆ."

" ಅಂದರೆ—? "

" ನಾನೂ ಡಾಕ್ಟರಾಗಲು ಯತ್ನಿಸುತ್ತೇನೆ."

" ಅದು ನನ್ನ ಕನಸಾಯಿತು ರಾಜಶೇಖರ. ನನ್ನ ಹುಚ್ಚು ನಿನಗೆ ಮೆಚ್ಚಾಗದಿರಬಹುದು. ನಿನಗಾವುದು ಪ್ರಿಯವೋ ಅದನ್ನು ಆರಿಸಿಕೋ."

" ಏಕೆ....ನಿನ್ನ ಬಯಕೆ ನನ್ನದಾದರೆ ತಪ್ಪೆ ? "

" ತಪ್ಪೇನೂ ಇಲ್ಲ, ಆದರೆ ಆ ನೇರದಲ್ಲಿ ನಡೆವ ಛಲ ಬೇಕು."

" ನನಗೆ ಆ ಶಕ್ತಿ ಇಲ್ಲವೇ ? "

" ನಿಜ ಹೇಳಬೇಕೆಂದರೆ ಈಗೆಲ್ಲ ರಾಜಶೇಖರ. ನೀನಿನ್ನೂ ಯಾರು ಹೇಗೆ ಆಕಾರ ಕೊಟ್ಟರ ಹಾಗೆ ತಿರುಗುವ ಮೇಣದ ಮುದ್ದೆಯಂತಿದ್ದೀಯೆ. ' ನಿನ್ನ ತನ ' ವನ್ನೇ ನೀನಿನ್ನೂ ಬೆಳೆಸಿಕೊಂಡಿಲ್ಲ ಮೊದಲು ಆ ಬೆನ್ನೆಲಬು ಬಲಿಯಲಿ. ಆ ಬಳಿಕ ಮುಂದಿನ ಮಾತು."

—ರಾಜಶೇಖರನ ಮನಸ್ಸು ನೋಯಿಸುವ ಇಚ್ಛೆಯಿಲ್ಲವಾದರೂ, ಅಸತ್ಯವನ್ನು ನುಡಿಯಲಾರದೆ ಹೇಳಿದ ಶ್ರೀಧರ. ರಾಜಶೇಖರನಿಗೂ ಶ್ರೀಧರನ ಮಾತು ಸತ್ಯವೆಂದೇ ತೋರಿತು. ಎಂತಲೇ ಅವನೂ ಅದಕ್ಕೆ ಪ್ರತಿ ಹೇಳಲಿಲ್ಲ.

ಬಳಿಕ, ಯಾವುದೋ ಅನಿರೀಕ್ಷಿತವಾದ ಮಜಲನ್ನು ಮುಟ್ಟಿದ ಆ ಮಾತನ್ನು ಬದಲಿಸಿ ಗೆಳೆಯರಿಬ್ಬರೂ ಲೋಕಾಭಿರಾಮವಾಗಿ ಕೊಂಚ ಹೊತ್ತು ಮಾತನಾಡುತ್ತಾ ಕುಳಿತಿದ್ದರು. ಬಳಿಕ ಶ್ರೀಧರ—

" ಅಂತೂ ನೀನು ಊರಿಗೆ ಹೋಗುವ ಮುನ್ನ ಒಮ್ಮೆ ನೋಡಬೇಕೆಂದಿದ್ದೆ. ನೋಡುವ ಮೊದಲೇ ಎಲ್ಲಿ ಊರಿಗೆ ಹೊರಟುಹೋಗಿರುತ್ತೀಯೊ ಎಂದಿದ್ದೆ. ಸಧ್ಯ – ಸಿಕ್ಕಿದೆಯಲ್ಲ."

" ನಾನೂ ಹಾಗೇ ಅಂದುಕೊಂಡಿದ್ದೆ. ನೀನು ಬಂದುದು ತುಂಬಾ ಸಂತೋಷವಾಯಿತು."

— ರಾಜಶೇಖರನ ಹೃದಯದಿಂದ ಮೂಡಿಬಂದಿತು ಆ ಮಾತು.

" ಏನು ಸಂತೋಷವೊ – ಅಂತೂ ಅಷ್ಟುಹೊತ್ತು ಕಿವಿ ಕೊರೆದಿದ್ದಾಯಿತು. ಈ ಮಾತನ್ನೆಲ್ಲಾ ಇಲ್ಲೇ ಮರೆತುಬಿಡು. ಓದಿ ದಣಿದಿದ್ದೀಯೆ. ಊರಿಗೆ ಹೋಗಿ ನಾಲ್ಕು ದಿನ ಹಾಯಾಗಿ ಇದ್ದು ಬಾ. ಬೆಂಗಳೂರಿಗೆ ಬಂದಾಗ ನಮ್ಮ ಪತ್ರಿಕೆ ಆಫೀಸಿನ ಕಡೆ ಬಾ. ನಾನಿನ್ನು ಬರುತ್ತೇನೆ. ಗುಡ್ ಬೈ. "

— ಎಂದು ಹೇಳಿ ಶ್ರೀಧರ ಹೊರಟು ಹೋದ. ರಾಜಶೇಖರ ಶ್ರೀಧರ ಹೇಳಿದ ಮಾತುಗಳನ್ನೇ ಮೆಲಕು ಹಾಕುತ್ತಾ ಕುಳಿತ. ' ಈ ಮಾತನ್ನೆಲ್ಲಾ ಇಲ್ಲೇ ಮರೆತುಬಿಡು ' ಎಂದು ಶ್ರೀಧರ ಹೇಳಿದ. ಆದರೆ ರಾಜಶೇಖರ ಎಂದೆಂದೂ ಮರೆಯಲಾಗದಂತೆ ಶ್ರೀಧರನ ಮಾತುಗಳು ಅವನ ಮನದಲ್ಲಿ ಅಚ್ಚೊತ್ತಿದ್ದವು. ಅದನ್ನು ಚಿಂತಿಸುತ್ತಾ, ಕಣ್ಣೆದುರಿಗಿರದ ಶ್ರೀಧರನಿಗೆ ಹೇಳುವವನಂತೆ ತನಗೆತಾನೇ ಹೇಳಿಕೊಂಡ ರಾಜಶೇಖರ.

' ಶ್ರೀಧರ, ಇಂದಿನಿಂದ ನಿನ್ನ ಕನಸು ನನ್ನದು.'

*

# ಕೆಲವು ಕಾಗದಗಳು

೧

ಮೈಸೂರು

ಗೆಳೆಯ ಶ್ರೀಧರ್, ಜುಲೈ, ೧೯೪೧

ನನ್ನಿಂದ ನೀನು ಈ ಕಾಗದವನ್ನು ನಿರೀಕ್ಷಿಸಿರಲಿಲ್ಲ ಅಲ್ಲವೇ ? ಆದರೆ ಇನ್ನು ಮೇಲೆ ಆಗಾಗ ಈ ಬಗೆಯ ಕಾಗದಗಳನ್ನು ನಿರೀಕ್ಷಿಸಬಹುದು. ಮೊದಲೇ ಎಚ್ಚರಿಕೆ ಕೊಡುತ್ತೇನೆ. ಹಾಗೇ ನಾನು ಬರೆದ ಕಾಗದಗಳಿಗೆ ನಿನ್ನಿಂದ ಉತ್ತರಗಳನ್ನು ನಿರೀಕ್ಷಿಸುತ್ತೇನೆ. ಬೆಂಗಳೂರು ಬಿಟ್ಟು ಮೈಸೂರಿಗೆ ಬಂದ ಮಾತ್ರಕ್ಕೆ ನನ್ನ ಕಾಟ ನಿನಗೆ ತಪ್ಪಿತೆಂದು ಭಾವಿಸಬೇಡ. ಸ್ಥಳಾಂತರದಿಂದ ತೊಲಗುವ ಭೂತವಲ್ಲ ನಾನು.

ನಾನು ಇಂಟರ್‌ನಲ್ಲಿ ಪಾಸಾದ ವಿಷಯ ನಿನಗೆ ಕಾಗದ ಬರೆದಿದ್ದೆ. ಆ ಬಳಿಕ ಒಮ್ಮೆ ಬೆಂಗಳೂರಿಗೆ ಬಂದಿದ್ದೆ ಆದರೆ ಆಗ ನಿನ್ನನ್ನು ನೋಡಲಾಗಲಿಲ್ಲ. ಎರಡು ದಿನ ಇದ್ದರೂ ಏನು ಏನೋ ಗದ್ದಲದಲ್ಲಿ ನಿನ್ನನ್ನು ನೋಡಲಾಗದೆ ಹಾಗೇ ಹಿಂದಿರುಗಬೇಕಾಯಿತು.

ನನ್ನ ಕಾಗದದಷ್ಟೇ, ನಾನು ಮೈಸೂರಿನಿಂದ ಕಾಗದ ಬರೆಯುತ್ತಿರುವುದು ನಿನಗೆ ಆಶ್ಚರ್ಯವನ್ನುಂಟುಮಾಡಿರಬಹುದು. ಅಲ್ಲವೆ ? ಆಶ್ಚರ್ಯವೇನೂ ಇಲ್ಲ – ನೀನು ಮೈಸೂರಿಗೆ ಹೋಗುತ್ತಿ ಎಂದು ನನಗೆ ಗೊತ್ತಿತ್ತು ಎಂದು ಸರ್ವಜ್ಞನ ಹಾಗೆ ಹೇಳಿದರೆ ನಾನು ನಂಬುವುದಿಲ್ಲ. ಬೆಂಗಳೂರು ಬಿಟ್ಟು ನಾನು ಮೈಸೂರಿಗೆ ಬಂದುದೇಕೆ ಗೊತ್ತೆ ?

ನನ್ನ ಸೀನಿಯರ್ ಪರೀಕ್ಷೆ ಮುಗಿದು, ಊರಿಗೆ ಹೊರಡುವ ಹಿಂದಿನ ದಿನ, ನೀನು ನನ್ನನ್ನು ಕಾಣಲು ಬಂದಿದ್ದೆಯಲ್ಲಾ – ಆಗ ನಮ್ಮಿರ್ವರ ನಡುವೆ ನಡೆದ ಮಾತುಕಥೆಗಳು ನಿನಗೆ ನೆನಪಿವೆ ತಾನೇ. ಏನೋ ಮಾತಿಗೆ ಮಾತು ಬಂದು, ನೀನು, ಡಾಕ್ಟರಾಗಬೇಕೆಂದಿದ್ದ ನಿನ್ನ ಬಾಳಿನ ಕನಸಿನ ವಿಚಾರ ಹೇಳಿ, ಅದು ಆಗಲಿಲ್ಲ ಎಂದು ಕೊರಗಿದೆ ಹಾಗೇ ನನ್ನನ್ನು ನೀನು ಮುಂದೆ ಏನು ಮಾಡುತ್ತೀಯ ಎಂದೂ ಕೇಳಿದೆ.

ಅಂದು ನಾನು ನಿನ್ನ ಪ್ರಶ್ನೆಗೆ ಉತ್ತರ ಕೊಡುವ ಸ್ಥಿತಿಯಲ್ಲಿರಲಿಲ್ಲ. ಮುಂದೆ ನನ್ನ ಬಾಳು ಯಾವ ಮಾರ್ಗದಲ್ಲಿ ಬೆಳೆಯಬೇಕು ಎಂಬ ವಿಚಾರ ಎಂದೂ ನನಗೆ ಬಂದಿರಲಿಲ್ಲ. ನೀನು ಹೇಳಿದ ಹಾಗೆ ಅಂದಿನವರೆಗೂ ನಾನು

ಹೊಳೆಯಲ್ಲಿ ತೇಲುವ ಹುಲ್ಲಾಗಿದ್ದೆ. ನೀನು ಹೋಗುವಾಗ 'ಕತ್ತಲಲ್ಲಿರಬೇಡ' ಎಂದು ದೀಪ ಹಚ್ಚಿ ಹೋಗಲಿಲ್ಲವೇ ? ಆ ದಿನ ನಿನ್ನ ಕೈ ದೀಪ ಹೊತ್ತಿಸಿದಂತೆ, ನಿನ್ನ ಮಾತು ನನ್ನ ಮನದಲ್ಲೂ ದೀಪ ಹೊತ್ತಿಸಿತು. ಧ್ಯೇಯರಾಹಿತ್ಯದ ಕತ್ತಲಾವರಿಸಿದ ಬಾಳಿನಲ್ಲಿ, ಯಾವುದೋ ಒಂದು ಗುರಿಯ ಬೆಳಕು ಹೊತ್ತಿಸಿತು.

ನೀನು ಅಲ್ಲಿಂದ ಹೋದ ಬಳಿಕ ಮುಂದೇನು ಮಾಡುವುದು ಎಂದು ಚಿಂತಿಸಿದೆ. ಎಂದೂ ಆ ರೀತಿ ಚಿಂತಿಸಿ ಅಭ್ಯಾಸವಿರದ ನನಗೆ, ಆ ದಿನ ತುಂಬಾ ಹಿಂಸೆಯಾಯಿತು. ಚಿಂತೆಗೆ ಪಳಗದ ಮಿದುಳು ತುಂಬಾ ತೊಂದರೆ ಕೊಟ್ಟಿತು. ಕಡೆಗೆ, ಬಹಳ ಹೊತ್ತು ಯೋಚನೆ ಮಾಡಿ 'ನಿನ್ನ ಕನಸನ್ನೇ ನನ್ನದಾಗಿ ಮಾಡಿಕೊಳ್ಳಬಾರದೇಕೆ ? ' ಎಂದು ಯೋಚಿಸಿದೆ. ಆ ದಾರಿಯಲ್ಲಿ ಯೋಚನೆ ಮಾಡಿದಷ್ಟು ಅದೇ ಸರಿ ಎಂದು ತೋರಿತು. ಪರೀಕ್ಷೆಯಲ್ಲಿ ಪಾಸಾದರೆ ಹಾಗೆ ಮಾಡುವುದು ಎಂದು ನಿರ್ಧಾರಮಾಡಿದೆ.

ಆದರೆ ಈ ನಿರ್ಧಾರವನ್ನು ಕಾರ್ಯರೂಪಕ್ಕೆ ತರುವುದು. ನಿರ್ಧಾರ ಮಾಡಿದಷ್ಟು ಸುಲಭವಾಗಲಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ತಂದೆಯುವರನ್ನು ಒಪ್ಪಿಸುವುದೇ ಕಷ್ಟವಾಯಿತು. ' ಐದು ವರ್ಷದ ಓದು , ದುಬಾರಿ ವೆಚ್ಚದ್ದು, ಬೇಡ. ಬಿ. ಎಸ್‌ಸಿ. ಗೆ ಓದು ' ಎಂದು ಅವರ ಅಭಿಪ್ರಾಯ. ' ಮೈಸೂರೆಲ್ಲಿ, ಚಿಂತಾಮಣಿಯೆಲ್ಲಿ ? ತುಂಬಾ ದೂರದ ಊರು. ಬೆಂಗಳೂರಿನಲ್ಲಿದ್ದರೆ ಹತ್ತಿರ ಬೇಕಾದಾಗ ಬಂದು ನೋಡಬಹುದು. ಅಲ್ಲದೆ ಹೆಣ ಕೊಯ್ಯುವ ಕೆಲಸ ಮಾಡುವುದೇಕೆ ? ಎಂದು ಮುಂತಾಗಿ ನನ್ನ ಹಳೇಕಾಲದ ತಾಯಿ ವಾದಿಸಿದಳು. ಆದರೂ ಕಡೆಗೆ ನನ್ನ ಹಟಕ್ಕೆ ಸೋತು ತಂದೆಯವರು ' ನಾಗರಾಜಶೆಟ್ಟರನ್ನು ಒಂದು ಮಾತು ಕೇಳಿ ನೋಡೋಣ. ನಿನ್ನಲ್ಲಿ ಅವರು ಬಹಳ ವಿಶ್ವಾಸವಿಟ್ಟುಕೊಂಡು ತುಂಬಾ ಉಪಕಾರ ಮಾಡಿದ್ದಾರೆ. ಏನು ಮಾಡುವುದಿದ್ದರೂ ಅವರನ್ನು ಕೇಳಿ ಮಾಡೋಣ. ಅವರೂ ಒಪ್ಪಿದರೆ ಆಗಲಿ ' ಎಂದರು.

ಪರೀಕ್ಷೆಯಲ್ಲಿ ತೇರ್ಗಡೆಯಾದ ಬಳಿಕ ನಾನು ಬೆಂಗಳೂರಿಗೆ ಬಂದಿದ್ದೆ ಎಂದು ಹೇಳಲಿಲ್ಲವೇ ? ಆಗ ನಾನು ಬೆಂಗಳೂರಿಗೆ ಬಂದದ್ದು ಇದೇ ಕೆಲಸಕ್ಕಾಗಿಯೇ , ನಾಗರಾಜಶೆಟ್ಟರನ್ನು ನೋಡಲು.

ನಾಗರಾಜಶೆಟ್ಟರು ಒಂದು ಬಗೆಯ ವಿಚಿತ್ರ ವ್ಯಕ್ತಿ , ಆದರೆ ಒಳ್ಳೆಯವರು. ನನ್ನ ಬಗ್ಗೆ ಅವರು ಏನೇನು ಕನಸು ಕಟ್ಟಿಕೊಂಡಿದ್ದರು ಬಲ್ಲೆಯಾ ? ನನ್ನ ನಿರ್ಧಾರವನ್ನು ಕೇಳಿ ಅವರಿಗೆ ಒಂದು ರೀತಿಯಲ್ಲಿ ನಿರಾ

ಶೆಯೇ ಆಯಿತು. ನನ್ನ ಬಗ್ಗೆ ಅವರು ಬೇರೇ ಲೆಕ್ಕಾಚಾರವನ್ನೇ ಹಾಕಿಕೊಂಡಿದ್ದರು. ಅವರ ಮನಸ್ಸಿನಲ್ಲಿದ್ದುದಿಷ್ಟು — ನಾನು ಇಂಟರ್ ಆದ ಬಳಿಕ ಬಿ.ಎಸ್‌ಸಿ. ಆನರ್ಸ್‌ಗೆ, ಜೂಆಲಜಿಯನ್ನೇ ಮುಖ್ಯ ವಿಷಯವಾಗಿ ತೆಗೆದುಕೊಂಡು ಓದಬೇಕು. 'ನಾನು ಇಷ್ಟರಲ್ಲೇ ಅಸಿಸ್ಟೆಂಟ್ ಪ್ರೊಫೆಸರಾಗುವ ಅವಕಾಶವಿದೆ. ಮುನ್ನ ಪ್ರೊಫೆಸರ್ ಆಗುವ ಸಂಭವವೂ ಇದೆ–ಕೆಲವು ವರ್ಷಗಳಲ್ಲಿ. ಆ ಕಾಲದಲ್ಲಿ ನಿನ್ನನ್ನೂ ಇದೇ ಶಾಖೆಯಲ್ಲಿ ಲೆಕ್ಚರರ್ ಆಗಿ ಮಾಡಿ, ನಿನ್ನ ಅಭ್ಯುದಯದ ದಾರಿಯನ್ನು ಸರಿಪಡಿಸಬೇಕೆಂದಿದ್ದೆ. ನಮ್ಮ ಜಾತಿಯ ಹುಡುಗರಲ್ಲಿ ಅಭ್ಯುದಯದ ಸೂಚನೆ ಇರುವವನು ನೀನೊಬ್ಬನೇ. ಆದರೆ ನೀನೂ ಕೈಗೆ ಸಿಕ್ಕ ಅವಕಾಶವನ್ನು ಕಳೆದುಕೊಳ್ಳಬೇಡ. ನೀನು ಇಲ್ಲಿ ಒಳ್ಳೆಯ ಪದವಿಗೆ ಬಂದರೆ, ನನ್ನ ಹಾಗೇ ನೀನೂ ನಮ್ಮ ಜಾತಿಯ ಹುಡುಗರಿಗೆ ಸಹಾಯ ಮಾಡಬಹುದು' ಎಂದು ಮುಂತಾಗಿ ಏನೇನೋ ಹೇಳಿದರು. ನಾನು ಅದಕ್ಕೆ ಒಪ್ಪದೆ 'ಡಾಕ್ಟರಾಗುವುದೇ ನನ್ನ ಜೀವನದ ಗುರಿ. ಈ ಮಾರ್ಗದಲ್ಲಿ ನಾನು ಸಿದ್ಧಿ ಪಡೆಯಲು ನೀವು ನೆರವಾಗಬೇಕು, ಆಶೀರ್ವದಿಸಬೇಕು' ಎಂದು ಬೇಡಿಕೊಂಡ ಮೇಲೆ ದಾರಿಕಾಣದೆ, 'ಹಾಗೇ ಮಾಡು' ಎಂದು ಒಪ್ಪಿದರು.

ಒಂದು ರೀತಿಯಲ್ಲಿ ನಾನು ಮೈಸೂರಿಗೆ ಬರಲೂ ಅವರೇ ಕಾರಣರಾದರು. ತಂದೆ ತಾಯಿಯ ಮಾತು ಕೇಳಿ ನಾನು ಬೆಂಗಳೂರಿನಲ್ಲೇ ಮೆಡಿಕಲ್ ಸ್ಕೂಲಿಗೆ ಸೇರಿ ಎಲ್. ಎಂ. ಪಿ. ಓದುವುದು ಎಂದಿದ್ದೆ. ಆದರೆ ನಾಗರಾಜಶೆಟ್ಟರು ಅದಕ್ಕೆ ಒಪ್ಪದೆ 'ಎಲ್. ಎಂ. ಪಿ. ಮಾಡಿದರೆ ಹಳ್ಳಿ ಡಾಕ್ಟರಾಗಿಯೇ ಜೀವನ ಮುಗಿಸಬೇಕು. ಅದಕ್ಕೇ ಹೋಗುವುದು ಎಂದರೆ, ಇಂಟರ್ ಓದಿದ್ದು ದಂಡವಾಗುತ್ತದೆ. ಅದು ಬೇಡ ಮೈಸೂರಿಗೆ ಹೋಗಿ ಎಂ. ಬಿ. ಬಿ. ಎಸ್. ಓದು. ಅಲ್ಲಿ ಹೆಚ್ಚು ಅಭ್ಯುದಯಕ್ಕೆ ಅವಕಾಶವಿದೆ' ಎಂದು ಹೇಳಿ, ನನ್ನ ತಂದೆಯನ್ನು ಅದಕ್ಕೆ ಒಪ್ಪಿಸಿದವರು ಅವರೇ. ನನಗೆ ಎಂ. ಬಿ. ಬಿ. ಎಸ್ ನಲ್ಲಿ ಸೀಟು ಸಿಗಲೂ ಅವರೇ ಕಾರಣ.

ಎಂ. ಬಿ ಬಿ. ಎಸ್. ನಲ್ಲಿ ಸೀಟು ಸಿಕ್ಕಿದ್ದು–ಅದೂ ಒಂದು ಕಥೆಯೇ.

ಸೀಟು ಹೇಗೆ ಸಿಕ್ಕಿತು ಎಂದು ಕೇಳಿದರೆ, ಹೀಗೆ ಎಂದು ಹೇಳಿಕೊಳ್ಳಲು ನನಗೇ ನಾಚಿಕೆಯಾಗುತ್ತದೆ ಶ್ರೀಧರ್. ಸೀಟು ಸಿಕ್ಕಿದ್ದು ನಾನು ಪ್ರತಿಭಾವಂತ, ಅರ್ಹ ಎಂಬ ಕಾರಣಕ್ಕಾಗಿಯಲ್ಲ. ಏಕೆಗೊತ್ತೆ? ನಿನ್ನ ಮುಂದೆ ಹೇಳಿಕೊಳ್ಳಲು ನನಗೆ ಏನೂ ಸಂಕೋಚವಿಲ್ಲ. ಅದು ಸಿಕ್ಕಿದ್ದೂ ನನ್ನ ಜಾತಿಯ ಬಲದ ಮೇಲೆ.

ಮೆಡಿಕಲ್ ಕಾಲೇಜ್ ಕಮಿಟಿಯಲ್ಲಿ ನಮ್ಮ ಜಾತಿಯವರೊಬ್ಬರಿದ್ದಾರೆ – ಡಾ|| ವೆಂಕಟಾಚಲ ಶೆಟ್ಟಿ ಅಂತ. ಅರ್ಹತೆಯ ದೃಷ್ಟಿಯಿಂದಲೇ ನನಗೆ ಸೀಟು ಸಿಗುವುದು ಕಷ್ಟ ಎಂದು ತೋರಿದಾಗ, ಅವರು ಅಂಕೆ–ಅಂಶಗಳನ್ನು ಸಂಗ್ರಹಿಸಿ, ‘ ಉಳಿದ ಕೋಮಿನವರಿಗೆಲ್ಲಾ ಎಷ್ಟು ಸೀಟು ಕೊಟ್ಟಿದ್ದೀರ ನೋಡಿ. ನಮ್ಮ ಕೋಮಿನವರಿಗೆ ಈ ಕೆಲವು ವರ್ಷಗಳಿಂದಲೂ ಸಾಕಷ್ಟು ಸೀಟು ಸಿಕ್ಕಿಲ್ಲ. ಇದು ಪರಮ ಅನ್ಯಾಯ. ಹೀಗೆ ಮಾಡಿಯೇ ಬಹುಸಂಖ್ಯಾತರು, ಅಲ್ಪ ಸಂಖ್ಯಾತರನ್ನು ಪಾತಾಳಕ್ಕೆ ಮೆಟ್ಟಿದ್ದಾರೆ. ಈ ಅಭ್ಯರ್ಥಿಗೆ ಸೀಟು ಕೊಡದಿದ್ದರೆ ನಾನು ಸಮಿತಿಗೇ ರಾಜೀನಾಮೆ ಕೊಡುತ್ತೇನೆ. ಪೇಪರುಗಳಿಗೆ ಬರೆದು ಗದ್ದಲ ಮಾಡುತ್ತೇನೆ, ಅಸೆಂಬ್ಲಿಯಲ್ಲಿ ಈ ಪ್ರಶ್ನೆ ಎತ್ತಿಸುತ್ತೇನೆ ’ ಎಂದು ಗಲಭೆ ಮಾಡಿ, ನನಗೆ ಸೀಟು ದೊರೆಕಿಸಿದರು, ಅವರಿದ್ದುದರಿಂದ ನನಗೆ ಸೀಟು ದೊರಕಿತು. ನನಗೆ ವೆಂಕಟಾಚಲಶೆಟ್ಟರ ಪರಿಚಯ ಮಾಡಿಸಿಕೊಟ್ಟು, ನನ್ನ ಪರವಾಗಿ, ಅವರು ಸಮಿತಿಯಲ್ಲಿ ಹೋರಾಡುವಂತೆ ಅವರನ್ನು ಹುರಿದುಂಬಿಸಿದವರೂ ನಾಗರಾಜಶೆಟ್ಟರೇ.

ಅಂತೂ ನನಗೆ ಸೀಟು ಸಿಕ್ಕಿತು. ಈ ಕಥೆ ಕೇಳಿ ನಿನಗೆ ನಗುಬರುತ್ತದೆಯೇನೋ. ಆದರೆ ನನಗೆ ನಾಚಿಕೆಯಾಗುತ್ತದೆ.

ಜಾತಿಯ ಬಂಡವಾಳದ ಮೇಲೆ ನಮ್ಮ ಬಾಳಿನ ವ್ಯಾಪಾರ ನಡೆಸುವುದು ಸರಿಯೇ ? ಜಾತಿಗಳೇ ಹೋಗಬೇಕು, ಗಂಡು ಹೆಣ್ಣು ಎಂಬ ವ್ಯತ್ಯಾಸವಲ್ಲದೆ ಬೇರಾವ ಬಗೆಯ ವ್ಯತ್ಯಾಸವೂ ಇರಬಾರದು. ಪ್ರಾಚೀನ ಕಾಲದಿಂದ ಬೆಳೆದುಬಂದ ಜಾತಿಭೇದವನ್ನು ತೊಡೆದುಹಾಕಿ ಒಂದಾಗಿ ಬಾಳಬೇಕು ಎಂಬ ಗಾಂಧೀ ಯುಗದಲ್ಲಿ ಜಾತಿಯ ಬಾವುಟವನ್ನೆತ್ತಿ ಬದುಕಲೆತ್ನಿಸುವುದು ನಗೆಪಾಟಲಲ್ಲವೇ ?

ಇದಕ್ಕಿಂತಲೂ ದೊಡ್ಡ ವಿಚಿತ್ರ, ಅಲ್ಲ ವಿರೋಧಾಭಾಸ,—ಕೋಮುವಾರು ಕಾರಣದ ಮೇಲೆ ನನ್ನ ಪರವಾಗಿ ಹೊಡೆದಾಡಿದ ಡಾ|| ವೆಂಕಟಾಚಲ ಶೆಟ್ಟರು ಕಾಂಗ್ರೆಸ್ಸಿಗರು. ಕಾಂಗ್ರೆಸ್ ಪರವಾಗಿ ಅಸೆಂಬ್ಲಿಯಲ್ಲಿ ಸದಸ್ಯರಾಗಿರುವರು.

ನಿನಗೆ ಇವೆಲ್ಲವನ್ನೂ ಕೇಳಿ ಏನು ಅನಿಸುತ್ತದೆಯೋ ನಾನರಿಯೆ. ಆದರೆ ನನಗೇನೋ ಒಮ್ಮೊಮ್ಮೆ ನಗು ಬಂದರೆ, ಮತ್ತೊಮ್ಮೆ ದಿಗಿಲಾಗುತ್ತದೆ.

ಅಂತೂ ನನಗೆ ಸೀಟು ಸಿಕ್ಕಿತು. ಈಗ ನಾನು ಮೆಡಿಕಲ್ ಕಾಲೇಜಿನ ವಿದ್ಯಾರ್ಥಿ. ಮೆಡಿಕಲ್ ಕಾಲೇಜ್ ಹಾಸ್ಟಲಿನಲ್ಲೇ ವಾಸ.

ಸರಿಯೊ – ತಪ್ಪೋ ಮೆಡಿಕಲ್ ಕಾಲೇಜಿಗೆ ಸೇರಿ, ನಿನ್ನ ಕನಸನ್ನು

ನನ್ನದಾಗಿ ಮಾಡಿಕೊಂಡಿದ್ದೇನೆ. ಮುಂದಿನದು ಹೇಗೋ ನಾನರಿಯೆ.

ಸಣ್ಣ ಕಾಗದವನ್ನೇ ಬರೆಯಬೇಕೆಂದು ಹೊರಟರೂ ಕಾಗದ ಬಹಳ ದೊಡ್ಡದಾಯಿತು. ಓದುವಾಗ ಬೇಸರ ಬಂದರೆ ಕ್ಷಮಿಸು.

ನಿನ್ನಿಂದ ಇದಕ್ಕೆ ಮಾರೋಲೆ ಬಂದು, ಮುಂದೆಯೂ ಬರೆಯಬಹುದು ಎಂದು ಅಪ್ಪಣೆ ದೊರೆತರೆ ಬರೆಯುತ್ತೇನೆ. ನನ್ನ ಲೇಖನಿಗೆ ಇನ್ನು ವಿಶ್ರಾಂತಿ ಕೊಡಲೇ.

ನಿನ್ನ ಪ್ರಿಯ ಬಂಧು,
ರಾಜಶೇಖರ್

ಮ. ಮಾ.

ಅಂದಹಾಗೆ, ನೀನು ಪತ್ರಿಕೋದ್ಯೋಗಿ ಎಂಬುದನ್ನು ಮರೆತು ಮನಸ್ಸಿಗೆ ಬಂದದ್ದನ್ನೆಲ್ಲಾ ಗೀಚಿಬಿಟ್ಟೆ. ವಿಳಾಸ ಬರೆಯುವಾಗ ಅದರ ನೆನಪಾಯಿತು. ನಾನು ಬರೆದ ವಿಚಾರವೆಲ್ಲಾ ನಿನ್ನಲ್ಲೇ ಇರಲಿ. ಯಾರಿಗೂ ತಿಳಿಯಬಾರದು. ಅಷ್ಟೇ.

ನಿನ್ನ
ರಾಜಶೇಖರ್.

೨

ಬೆಂಗಳೂರು,
ಜುಲೈ, ೧೯೪೧

ಪ್ರಿಯ ರಾಜಶೇಖರ,

ನಿನ್ನ ಸುದೀರ್ಘವಾದ ಪತ್ರ ಸೇರಿತು. ಓದಿದೆ. ತುಂಬಾ ಸಂತೋಷವಾಯಿತು; ಹಲವು ಕಾರಣಕ್ಕಾಗಿ.

ಎಲ್ಲಕ್ಕಿಂತ ಹೆಚ್ಚು ಸಂತೋಷ – ನನ್ನನ್ನು ನೀನು ಮರೆತುಬಿಡಲಿಲ್ಲ ಎಂಬುದು. ಮರೆತಿದ್ದರೆ ಹೆಚ್ಚು ನಷ್ಟವಾಗುತ್ತಿತ್ತು ಎಂದಲ್ಲ. ಕೆಲವು ಸಂದರ್ಭಗಳಲ್ಲಿ ನೆನಪಿಗಿಂತಲೂ ಮರವೇ ಮೇಲು

ಎರಡನೆಯ ಸಂತೋಷ – ನಿನಗೆ ತೇರ್ಗಡೆಯಾದುದು; ಮೆಡಿಕಲ್ ಕಾಲೇಜಿನಲ್ಲಿ ಸೀಟು ಸಿಕ್ಕಿ ಅಲ್ಲಿ ಸೇರಿದುದು.

ಈ ಸಂದರ್ಭದಲ್ಲಿ ನಿನಗೊಂದು ಮಾತು ಹೇಳಬೇಕು ಅನಿಸುತ್ತದೆ. ಅದು ನಿನಗೆ ಎಷ್ಟುಮಟ್ಟಿಗೆ ಅಂಗೀಕಾರಾರ್ಹವೊ ನಾನರಿಯೆ. ಸರಿ ಕಂಡರೆ ಸ್ವೀಕರಿಸು – ಇಲ್ಲವಾದರೆ ಗಾಳಿಗೆ ತೂರಿಬಿಡು.

ನೀನು ವೈದ್ಯ ವಿದ್ಯೆಯನ್ನು ಆರಿಸಿಕೊಂಡದ್ದು 'ನಿನ್ನ ಕನಸನ್ನು ನನ್ನೆದಾಗಿ ಮಾಡಿಕೊಳ್ಳಲು' ಎಂದು ಬರೆದಿದ್ದೀಯೆ. ಇದು ನೀನು ನಮ್ಮಿಬ್ಬರ ಸ್ನೇಹಕ್ಕೆ ಕೊಟ್ಟ ಅತಿ ಹೆಚ್ಚಿನಬೆಲೆ ಎಂದೇ ನಾನು ಭಾವಿಸಿದ್ದೇನೆ. ನಮಗೆ ನಮ್ಮ ಬಾಳಿನಲ್ಲಿ ನಮ್ಮದಾದ ಕನಸೇ, ಧ್ಯೇಯವೇ ಇರಬೇಕೇ ಹೊರತು ಎರವಲು ಕನಸಿಗಾಗಿ ಬದುಕುವುದು ಕೂಡದು ಎಂದೇ ನನ್ನ ಅಭಿಪ್ರಾಯ. ಹಾಗೆಂದಮಾತ್ರಕ್ಕೆ ನನ್ನ ಕನಸಿನ ಭಾರ ಹೊರುವ ಶಕ್ತಿ ನಿನಗಿಲ್ಲ ಎಂದಲ್ಲ. ನನಗಿಂತಲೂ ಹೆಚ್ಚಾಗಿ ನಿನಗೆ ಶಕ್ತಿ ಇರಬಹುದು. ಆನೆ ಎತ್ತಿಗಿಂತಲೂ ಬಲವಾದರೂ ಅದನ್ನು ನಾವು ನೇಗಿಲಿಗೆ ಕಟ್ಟುವುದಿಲ್ಲ. ಅದು ಕಾಡಿನಲ್ಲಿ ದಿಮ್ಮಿ ಎಳೆಯಲು ಸರಿ. ಹಾಗೆಯೇ ಮನುಷ್ಯರಲ್ಲೂ, ಒಬ್ಬೊಬ್ಬರಲ್ಲೂ ಒಂದೊಂದು ಬಗೆಯ ಧ್ಯೇಯವನ್ನು ಹೊರುವ ಶಕ್ತಿ ಇರುತ್ತದೆ. ಅದನ್ನು ಕಂಡುಕೊಂಡು ಬದುಕುವುದು ಉತ್ತಮ. ಹಾಗಲ್ಲದೆ, ಒಬ್ಬೊಬ್ಬರಿಗೂ ಅವರ ಬಾಳಿನೊಂದಿಗೆ ಬೆಳೆದುಬಂದ ಧ್ಯೇಯವೇ, ಅದನ್ನು ಹೊರುವ ಶಕ್ತಿಯನ್ನು ನೀಡಿರುತ್ತದೆ. ಪರರ ಕನಸನ್ನು ತಮ್ಮದಾಗಿ ಮಾಡಿಕೊಳ್ಳುವವರಿಗೆ ಈ ಅನುಕೂಲವಿರುವುದಿಲ್ಲ, ಕಂಡವರ ಮಗುವನ್ನು ತನ್ನದು ಎಂದು ಸಾಕಿಕೊಳ್ಳುವಂತೆ, ಒಂದಲ್ಲ ಒಂದು ಬಾರಿಯಾದರೂ ಬೇಸರ ಬರಬಹುದು; ಸುಮ್ಮನಿರಲಾರದೆ ನಾನೇಕೆ ಇದನ್ನು ಕಟ್ಟಿಕೊಂಡೆ ಎಂದು ರೋಸಿಗೆಯೂ ಆಗಬಹುದು. ಈ ಗಳಿಗೆಯಲ್ಲಿ ನೀನು ಹಾಗಾಗುವುದಿಲ್ಲ ಎಂದೇ ಹೇಳಬಹುದು. ಹಾಗಾಗದಿರಬಹುದು (ನಿನ್ನಮಟ್ಟಿಗೆ ಹಾಗಾಗದಿರಲಿ ಎಂದೇ ಬಯಸುತ್ತೇನೆ). ವಾದಕ್ಕಾಗಿ ಹೇಳುತ್ತೇನೆ – ಒಂದುವೇಳೆ ಬೇಸರವಾಯಿತು, ಇದು ಬೇಡ ಎನಿಸಿತು ಎನ್ನು: ಆಗ? ಆಗ ನೀನು ಇದನ್ನು ಬಿಡಲು ಸಿದ್ಧವಾದರೂ, ಅದು ನಿನ್ನನ್ನು ಬಿಡುವುದಿಲ್ಲ ಎಂತಲೇ ಈ ಹೆಜ್ಜೆ ಇಡುವ ಮೊದಲು ಇನ್ನಷ್ಟು ಯೋಚಿಸಬೇಕಿತ್ತು. ಈ ನಿರ್ಧಾರಕ್ಕೆ ಬರುವ ಮೊದಲೇ ನನ್ನನ್ನು ಕೇಳಬಹುದಿತ್ತು. ಇಲ್ಲವಾದರೆ ನಿನ್ನ ಎಂದಿನ ರೀತಿಯಂತೆಯೇ ಹಿರಿಯರು ತೋರಿದ ದಾರಿ ಹಿಡಿದು ನಡೆದಿದ್ದರೂ ಆಗಿತ್ತು. ಆಯಿತು – ಇದೆಲ್ಲಾ ಹಿಂದಿನ ಮಾತಾಯಿತು; ಹೆಜ್ಜೆ ಮುಂದಿಟ್ಟದ್ದಾಯಿತು. ಈಗ ನಾನು ನಿನಗೆ ಹೇಳಬಹುದಾದುದಿಷ್ಟೆ – ನಿನಗಾಗಿ ಹಾರೈಸಬಹುದಾದುದಿಷ್ಟೆ, ನಿನ್ನ ಧ್ಯೇಯ ಸಾರ್ಥಕವಾಗಲಿ. ನಿನ್ನ ಕನಸು ನನಸಾಗಲಿ; ಆ ಸಾಧನೆಯ ಮಾರ್ಗ ಸುಗಮವಾಗಲಿ.

ಇನ್ನೊಂದು ಮಾತು: ನೀನು ಎತ್ತಿರುವ ಕೋಮುವಾರು ಭಾವನೆಯ ವಿಷಯದ್ದು. ಅಲ್ಲಿ ವಿರೋಧಾಭಾಸವಿದೆ, ಅದನ್ನು ನೆನೆದುಕೊಂಡರೆ ನನಗೆ ನಾಚಿಕೆಯಾಗುತ್ತದೆ ಎಂದು ಬರೆದಿದೀಯ. ಅದು ಅಗತ್ಯವೆಂದೇ ನನ್ನ

ಭಾವನೆ. ಇಂದಿನ ದಾಸ್ಯದ ವಾತಾವರಣದಲ್ಲಿ ದೇಶ ಉಳಿಯಬೇಕಾದರೆ, ಯಾವುದಾದರೂ ಒಂದು ರೀತಿಯಲ್ಲಿ ಒಟ್ಟಿಗೆ ಕಲೆಯಬೇಕು : ರಾಜಕೀಯ ಪಕ್ಷಗಳಾಗಿ, ಇಲ್ಲವೆ ಬೇರೊಂದು ಹೆಸರಿನಲ್ಲಿ. ನಮ್ಮ ಜನದ ರಾಜಕೀಯ ತಿಳುವಳಿಕೆ ಬಹು ಕೆಳಮಟ್ಟದ್ದು. ಹಾಗಲ್ಲ – ಕಾಂಗ್ರೆಸ್ಸು ದೇಶದಲ್ಲಿ ಬಹು ಸಂಖ್ಯಾತರ ಅಭಿಮಾನದ ಬೆಂಬಲ ಪಡೆದ ರಾಜಕೀಯ ಸಂಸ್ಥೆಯಲ್ಲವೇ ಎಂದು ನೀನು ಸವಾಲು ಹಾಕಬಹುದು. ಆದರೆ ನನಗೆ ಹಾಗನಿಸುವುದಿಲ್ಲ, ಕಾಂಗ್ರೆಸ್ಸಿಗೆ ಅಪಾರ ಜನ ಬೆಂಬಲ ದೊರೆತಿರುವುದು, ಜನತೆಯ ರಾಜಕೀಯ ತಿಳುವಳಿಕೆಯಿಂದಲ್ಲ, ಗಾಂಧೀಜಿ, ನೆಹರೂ ಮೊದಲಾದವರ ವೈಯುಕ್ತಿಕ ಆಕರ್ಷಣೆಯಿಂದಾಗಿ ; ಗಾಂಧೀಜಿ ರಾಜಕೀಯಕ್ಕೆ ಕೊಟ್ಟಿರುವ ಧಾರ್ಮಿಕ ಚಳುವಳಿಯ ಸ್ವರೂಪದಿಂದಾಗಿ. ಅಲ್ಲವೇ ? – ಯೋಚಿಸಿ ನೋಡಿದರೆ ನಿನಗೂ ನನ್ನ ಮಾತು ಸರಿ ಎಂದು ತೋರಬಹುದು. ಅಲ್ಲದೆ ಈಗ ನಮ್ಮನ್ನು ಆಳುತ್ತಿರುವ ಸರಕಾರ ಬೇಕೆಂದೇ ನಮ್ಮಲ್ಲಿ ಕೋಮುವಾರು ಭಿನ್ನತೆಯನ್ನು ಬೆಳೆಸುತ್ತಿದೆ. ಅದು ಅವರ ಒಡೆದು ಆಳುವ ನೀತಿಯ ವಿಷಫಲ. ಹೀಗಾಗಿ ಕೋಮುವಾರು ಜಾಗ್ರತಿಯೇ ರಾಜಕೀಯ ಜಾಗ್ರತಿ ಎಂದು ಬಹು ಜನಕ್ಕೆ ಅನಿಸಿದೆ.

ಅಲ್ಲದೆ, ಈಗ ನಮ್ಮ ದೇಶದಲ್ಲಿ ಕಾಂಗ್ರೆಸ್ಸನ್ನು ಕಟ್ಟಿರುವವರು ಯಾರು ನೋಡು ? ಇವರು ಎಲ್ಲಿದ್ದರು, ಹೇಗೆ ಬಂದರು ಎಂದು ವಿಚಾರಿಸಿದರೆ, ಈಗಿನ ಕೆಲ ಕಾಂಗ್ರೆಸ್ಸಿಗರಲ್ಲಿ ಕಾಣುವ ವಿರೋಧಾ ಭಾಸದ ಸಮಸ್ಯೆ ತಾನೇ ಇತ್ಯರ್ಥವಾಗುತ್ತದೆ.

ಈಗ ನಮ್ಮ ಕಾಂಗ್ರೆಸ್ಸು ನಾಯಕರು ಎನಿಸಿಕೊಂಡವರೆಲ್ಲಾ – ಅವರಲ್ಲಿ ಬಹು ಮಂದಿ – ಹಿಂದೆ ಪ್ರಜಾ ಪಕ್ಷದಲ್ಲಿದ್ದವರು, ಕೋಮುವಾರು ಭಾವ ನೆಯೋ ಆ ಜರತಾರೀ ಪೇಟದ ಚಳುವಳಿಗಾರರ ಲಾಂಛನವಾಗಿತ್ತು. ಆಗ ಅವರು ತಮ್ಮ ಕೋಮುವಾರು ಭಾವನೆಯನ್ನು ಬಹಿರಂಗವಾಗಿಯೇ ಸಾರು ತ್ತಿದ್ದರು. ಈಗ ಆ ಜನ ಪೇಟಾ ತೆಗೆದಿಟ್ಟು, ಗಾಂಧೀ ಟೋಪಿ ಇಟ್ಟುಕೊಂಡಿ ದ್ದಾರೆ. ತಲೆಯುಡಿಗೆ ಬದಲಾದ ಮಾತ್ರಕ್ಕೆ ಮಿದುಳು ಬದಲಾದೀತೇ ? ಈಗಲೂ ಆ ಹಳೆಯ ಮಿದುಳೇ ಕೆಲಸ ಮಾಡುತ್ತಿದೆ. ನಿಮ್ಮ ವೆಂಕಟಾಚಲ ಶೆಟ್ಟರೂ ಅದೇ ಜಾತಿಯ ಜನ. ಅವರಿಂದ ಅದಕ್ಕಿಂತ ಹೆಚ್ಚನ್ನು ನಿರೀಕ್ಷಿಸು ವುದು ನಮ್ಮ ತಪ್ಪು.

ಅಷ್ಟೇ ಅಲ್ಲ – ನನಗೆ ಹೀಗೂ ಅನ್ನಿಸುತ್ತದೆ, ಕೆಲವರೇನೋ ಈ ಬಗೆಯ ಕೋಮುವಾರು ಭಾವನೆ ತಪ್ಪು ಎಂದೇ ಹೇಳುತ್ತಾರೆ. ಅದು

ಹಾಗೂ ಇರಬಹುದು. ಆದರೆ ಇದು ಶತಶತಮಾನಗಳಿಂದ ನಡೆದು ಬಂದ ಬೇರೊಂದು ಅನ್ಯಾಯದ ಫಲ ಎಂಬುದನ್ನು ಮರೆಯಬೇಡ. ಬೇರೊಬ್ಬರನ್ನು ತಪ್ಪುಗಾರ ಎನ್ನುವ ಮೊದಲು ಅದರ ಚಾರಿತ್ರಿಕ ಹಿನ್ನೆಲೆಯನ್ನು ಯೋಚಿಸುವುದು ಮೇಲು – ಎಂತಲೇ ನಮ್ಮ ಜನಾಂಗದ ಒಂದು ಪಂಗಡದಲ್ಲಿ ಇಂದು ಕಾಣುತ್ತಿರುವ ಈ ಪ್ರತಿಕ್ರಿಯೆ ಅಸಹಜವಾದುದೆಂದು ನನಗೆ ತೋರುವುದಿಲ್ಲ. ಹೀಗಾಗಬೇಕಾಗಿತ್ತು, ಆಗಿದೆ. ಆದರೆ ನಾನು ಬಯಸುವುದಿಷ್ಟೆ – ಈ ಭಾವನೆ ಹೋಗಬೇಕು, ಹೋಗುತ್ತದೆ, ಆದರೆ ಆ ಮೊದಲು ಇದು ಬರಿ ವಿಷವನ್ನೇ ಕಲಕದೆ, ತನ್ನ ದಾರಿಯಲ್ಲೇ, ತನಗೆ ಬೇಕಾದವರಿಗೇ ಆದರೂ, ಆದಷ್ಟು ಒಳಿತನ್ನು ಮಾಡಲಿ. ಯಾವ ಹೆಸರಿನಡಿಯಲ್ಲಾದರೇನು – ಒಳಿತಾಗುವುದು ಮುಖ್ಯ. ಈಗ ನಿನಗೆ ಶೆಟ್ಟರಿಂದ ಏನೋ ಕಾರಣಕ್ಕಾಗಿ ಸಹಾಯವಾಯಿತು. ಅದೇ ಬೇಕಾದದ್ದು. ಒಂದರ ಪ್ರೇಮ, ಮತ್ತೊಂದರ ಕುರುಡುದ್ವೇಷದಲ್ಲೇ ಮುಕ್ತಾಯವಾಗದಿದ್ದರೆ ಸರಿ.

ಈ ಸಂದರ್ಭದಲ್ಲಿ ನಾನು ನಿನಗೆ ಹೇಳುವುದಿಷ್ಟೆ – ಯಾವುದೋ ಕಾರಣದಿಂದಾಗಿ, ನಿನಗೆ ಜನಸೇವೆ ಮಾಡುವ ಯೋಗ ಲಭ್ಯವಾಗಿದೆ. ಕಾರಣವನ್ನು ಮರೆತು ಬಿಡು ; ಗುರಿ ಮಾತ್ರ ನೆನಪಿನಲ್ಲಿರಲಿ. ಹಾಗೇ ಇದಕ್ಕಾಗಿ ಹೆದರುವುದೂ ಬೇಡ. ಬರಲಿರುವ ನಮ್ಮ ರಾಜಕೀಯ ವಿಮೋಚನೆ, ಈ ಎಲ್ಲ ಕಸ ಕಡ್ಡಿಯನ್ನೂ ಕೊಚ್ಚಿ ಹಾಕಿ, ನಮ್ಮನ್ನು ಮತ್ತೆ ಒಂದು ಜನಾಂಗವಾಗಿ ಬೆಸೆಯುತ್ತದೆ ; ಕೋಮುವಾರು ಭಿನ್ನತೆಯನ್ನು ಮರೆತು ನಾವೆಲ್ಲರೂ ಭಾರತೀಯರಾಗಿ ಬಾಳುತ್ತೇವೆ.

ಹಾಗಾಗುವವರೆಗೂ ನಾವು ಯಾತ್ರಿಕರು ; ದಾರಿಯ ಕಷ್ಟನಷ್ಟ – ಇರಲಿ ಬಿಡು ; ಅದು ಚಿರವಲ್ಲ.

ನಾನು ಇಂದು ಪತ್ರಿಕಾವೃತ್ತಿಯಲ್ಲಿ ದುಡಿಯುತ್ತಿರುವುದೂ, ಹೊಟ್ಟೆಗೆ ಅಷ್ಟು ಅನ್ನ ಕೊಡುತ್ತದೆ ಎಂದಲ್ಲ, ಈ ಕನಸಿಗಾಗಿಯೇ. ಜನತೆಯ ಮನಸ್ಸನ್ನು ತಿದ್ದಿ, ಅದನ್ನು ಒಂದು ಜನಾಂಗವಾಗಿ ಕಟ್ಟುವ ಕಾರ್ಯ, ಇಂದು ಶಾಲೆಗಳಿಂದ ಆಗುತ್ತಿಲ್ಲ : ಪತ್ರಿಕೆಗಳಿಂದ ಆಗುತ್ತಿದೆ. ಪತ್ರಿಕೆಗಳೇ ನಮ್ಮ ವಿಶ್ವವಿದ್ಯಾನಿಲಯ.

ಒಂದೇ ಗುರಿ ತಲುಪಲು ನಾವಿಬ್ಬರೂ ಬೇರೆ ಬೇರೆ ದಾರಿ ಹಿಡಿದಿದ್ದೇವೆ. ಎಂತಲೇ ನಾವಿಬ್ಬರೂ ಸಮಾನ ಧರ್ಮೀಯರು. ಈ ನಂಬಿಕೆಯಿಂದಲೇ ನಿನಗೆ ಗೆಲುವನ್ನು, ನಿನ್ನ ಉದ್ಯಮದಲ್ಲಿ ಸಫಲತೆಯನ್ನು ಹಾರೈಸುತ್ತೇನೆ.

ನಿನ್ನ ಕಾಗದದಲ್ಲಿ ನೀನು ಬರೆದ ವಿಷಯಗಳು ಬಹಿರಂಗವಾಗುವುದಿಲ್ಲ.

ಹೆದರಬೇಡ. ಎಲ್ಲವನ್ನೂ ನಾನು ಪತ್ರಿಕೋದ್ಯೋಗಿಯಾಗಿ, ಪ್ರಕಟನೆಯ ದೃಷ್ಟಿಯಿಂದಲೇ ನೋಡುತ್ತೇನಾದರೂ ಹಾಗೆಂದು ಔಚಿತ್ಯವನ್ನು ಮರೆತಿಲ್ಲ.

ಇನ್ನೇನು – ಹಾಸ್ಟಲ್ ವಾಸ ಹೇಗಿದೆ? ಲಂಗು ಲಗಾಮಿಲ್ಲದ ಹೂವಿನ ಸುಪ್ಪತ್ತಿಗೆಯೇ? ಹಾಗಾಗದಿರಲಿ. ಸೂಟುಬೂಟಿನ ಬೇಟೆಗಾರನಾಗಬೇಡ. ಯಾವ ಕಾರಣಕ್ಕೂ ಚಪಲಕ್ಕೂ, ನಿನ್ನ ಅಭ್ಯಾಸವನ್ನು ಬಲಿಗೊಡಬೇಡ. ಉಳಿದವರು ಹೇಗಿದ್ದರೂ, ನೀನು ಕನಸಿನ ಹೊರೆಯನ್ನು ಹೊತ್ತವನು. ಅದು ಮಾತ್ರ ಎಂದೆಂದೂ ನೆನಪಿರಲಿ.

ಸಾಕೇ – ವಾಕರಿಕೆ ಬರುವಷ್ಟಾಯಿತೇನೋ ಈ ಬುದ್ಧಿವಾದ, ಬೋಧನೆ. ಹಾಗಾಗಿದ್ದರೆ ಕ್ಷಮಿಸು.

ಆಗಾಗ ಕಾಗದ ಬರೆಯುತ್ತಿರು ಆದರೆ ನಿನ್ನ ಎಲ್ಲ ಕಾಗದಕ್ಕೂ ಇಷ್ಟೇ ಬೇಗ ಉತ್ತರ ಕೊಡುತ್ತೇನೆ ಎಂಬ ಭರವಸೆಯನ್ನೇನೂ ನಾನು ಕೊಡಲಾರೆ. ಆದ್ದರಿಂದ ಬರೆಯ ಬೇಕೆನಿಸಿದಾಗ ಬರಿ – ಉತ್ತರ ನಿರೀಕ್ಷಿಸದೆ.

ನಿನಗೆ ಸದಾ ಶುಭವಾಗಲಿ.

ನಿನ್ನ ಪ್ರಿಯ ಬಂಧು
ಶ್ರೀಧರ.

೩

ಮೈಸೂರು
ಗೆ. ಶ್ರೀಧರ, ಸೆಪ್ಟೆಂಬರ್, ೧೯೪೧

ನೀನೇನೋ ನನ್ನ ಕಾಗದಕ್ಕೆ ಬೇಗ, ಬಹು ಬೇಗ, ನಾನು ನಿರೀಕ್ಷಿಸಿದುದಕ್ಕಿಂತ ಬೇಗ ಉತ್ತರ ಬರೆದೆ. ಆದರೆ ನಾನೇ ಬೇಗ ಉತ್ತರ ಬರೆಯಲಿಲ್ಲ. ಈಗಲೂ, ನೀನು ನಿನ್ನ ಕಾಗದದಲ್ಲಿ ಬರೆದ ಮಾತುಗಳನ್ನೇ ಮತ್ತೊಬ್ಬರಿಂದ ಕೇಳಿ, ನಿನ್ನ ಕಾಗದಕ್ಕೆ ಉತ್ತರ ಬರೆಯದಿದ್ದುದು ನೆನಪಾಗದಿದ್ದರೆ, ಕಾಗದ ಬರೆಯುತ್ತಿದ್ದೆನೋ ಇಲ್ಲವೋ. ಹೇಗೊ, ಎಂತೋ ಅಂತೂ ಮತ್ತೆ ನಿನಗೆ ಕಾಗದ ಬರೆಯುವ ಹಾಗಾದುದೇ ನನಗೆ ದೊಡ್ಡ ಸಂತೋಷ. ಹಾಗೇ ಈ ಮಾತನ್ನು ನಿನಗೆ ಹೇಳಬೇಕು. ನಿನಗೆ ಕಾಗದ ಬರೆಯದಿರಲು ಕಾರಣ ಬರಿಯ ಮೈ ಮರವೇ ಅಲ್ಲ. ಇಲ್ಲಿನ ಹೆಚ್ಚಿನ ಓದೂ ಕಾರಣವೇ. ಒಮ್ಮೊಮ್ಮೆ ಎಲ್ಲಾ ಬಿಟ್ಟು ಇಲ್ಲಿಗೇಕೆ ಬಂದೆ ಎಂದೂ ಬೇಸರವಾಗುತ್ತದೆ. ಈಗ ನನ್ನದು ಹೆಚ್ಚಿನ ಓದೇನೂ ಅಲ್ಲ. ಡಿಸೆಂಬರ್‌ನಲ್ಲಿ ನಡೆದ ಪ್ರೀ ಮೆಡಿಕಲ್‌ಗೆ ತರಬೇತು – ಆದರೆ ಓದಬೇಕು ಎನ್ನುವವರಿಗೆ ಇದೇ ಸಾಕಾಗುವಷ್ಟಾಗುತ್ತದೆ.

ಅಲ್ಲದೆ ಮೊನ್ನೆ ಒಂದು ಮಾತು ಕೇಳಿದೆ – ನನ್ನ ಜೊತೆಗೆ ಓದುತ್ತಿರುವ ವಿದ್ಯಾರ್ಥಿಯೊಬ್ಬನಿಂದ. ಇದು ಐದು ವರ್ಷದ ಓದು ತಾನೇ. ಆದರೆ ಐದು ವರ್ಷಕ್ಕೆ ಇದನ್ನು ಮುಗಿಸಿದವರನ್ನು ನನ್ನ ಜೊತೆಗಾರ ಇನ್ನೂ ಕಂಡಿಲ್ಲ ಎನ್ನುತ್ತಾನೆ. ಎಷ್ಟು ಚೆನ್ನಾಗಿ ಓದುವ ವಿದ್ಯಾರ್ಥಿಯಾದರೂ ಆರುವರ್ಷವನ್ನೋ, ಏಳು ವರ್ಷವನ್ನೋ ತೆಗೆದುಕೊಳ್ಳುತ್ತಾನಂತೆ. ಬಹು ಬಾರಿ ಪರೀಕ್ಷಕರು ಬೇಕೆಂದೇ ಒಂದು ವರ್ಷ ಫೇಲು ಮಾಡಿಸುತ್ತಾರಂತೆ. ಇದನ್ನು ಕೇಳಿ ನನಗೆ ಜೀವವೇ ಹಾರಿ ಹೋದ ಹಾಗಾಯಿತು.

ಇದು ನಾನು ಅಂದುಕೊಂಡಿದ್ದಕ್ಕಿಂತಲೂ ದುಬಾರಿ ವೆಚ್ಚದ ಓದು. ಫೀಸು ಹಾಗಿರಲಿ – ಉಡುಗೆ ತೊಡಿಗೆಗಳೇ ಸಾಕಷ್ಟು ಹಣ ತಿನ್ನುತ್ತವೆ. ಸೂಟಿಲ್ಲದೆ ಕಾಲೇಜಿನಲ್ಲಿ ಕಾಲಿಡುವಂತಿಲ್ಲ. ಅದೂ ಸದಾ ಶುಭ್ರವಾಗಿರ ಬೇಕೆಂದರೆ ಒಂದೆರಡು ಜೊತೆಯಲ್ಲೇ ಮುಗಿಯುವುದಿಲ್ಲ. ಉಡುಪಿನ ಈ ನಿಯಮ ನನ್ನಂಥವನನ್ನು ಎದೆಗೆಡಿಸಿದ್ದರೆ, ಕೆಲವರಿಗೆ, ಮನೆಯವರನ್ನು ಹೆದರಿಸಿ ಹೆಚ್ಚು ಬಟ್ಟೆ ಹೊಲಿಸಿಕೊಳ್ಳಲು ಅನುಕೂಲಸಿಂಧುವೂ ಅಗಿದೆ. ಉಡುಪಿನಲ್ಲಿ ಶಿಸ್ತುಗಾರತನವನ್ನು ಕಾಣಬೇಕೆಂದರೆ ಮೆಡಿಕಲ್ ಕಾಲೇಜಿಗೇ ಬರಬೇಕು. ಇದೊಂದು ರೀತಿಯಲ್ಲಿ ವಸ್ತ್ರಪ್ರದರ್ಶನ ಶಾಲೆ. ಹಾಗೇ ಪಠ್ಯ ಪುಸ್ತಕಗಳೂ ತುಂಬಾ ದುಬಾರಿ ಬೆಲೆಯವೇ. ಅತ್ಯಗತ್ಯವಾದ ಒಂದೆರಡನ್ನು ಕೊಳ್ಳಬೇಕಾದರೂ ನೂರಾರು ರೂಪಾಯಿ ತೆರಬೇಕು. ಸಾಧ್ಯವಿರಲಿ, ಬಿಡಲಿ ಹಣ ಹೊಂದಿಸಲೇಬೇಕು. ನನ್ನ ತಂದೆಯವರೇನೋ ಕೇಳಿದಷ್ಟು ಹಣ ಕಳಿಸುತ್ತಿದ್ದಾರೆ. ಆದರೆ ನನ್ನ ತಾಯಿ ಬರೆದ ಕಾಗದದಲ್ಲಿ ಅವರಿಗೂ ಕೊಂಚ ಗಾಬರಿಯಾದಂತಿದೆ. ಮೊನ್ನೆ ನನ್ನ ತಾಯಿಯ ಕಾಗದ ಬಂದಾಗ ಹಾಗೇ ಯೋಚಿಸಿದೆ – ಎಲ್ಲರೂ ಹೇಳುತ್ತಾರೆ, ಹೆಚ್ಚು ಜನ ವೈದ್ಯರು ಬೇಕು ಎಂತ. ಆದರೆ ಶಿಕ್ಷಣವನ್ನು ಇಷ್ಟು ದುಬಾರಿ ಮಾಡಿದರೆ, ಈ ಬಡದೇಶದಲ್ಲಿ ಎಷ್ಟು ಜನ ವೈದ್ಯರಾಗುವುದು ಸಾಧ್ಯ? ಅಜ್ಞಾನ, ಬಡತನದಿಂದಾಗಿ, ಹಲ ಬಗೆಯ ರೋಗಗಳ ಗೂಡಾದ ನಮ್ಮ ಜನ ಈ ಜಾಡ್ಯ ಜಾಲದಿಂದ ಮುಕ್ತರಾಗುವ ಬಗೆ ಏನು? ಹೀಗೇ ಯೋಚಿಸುತ್ತಾ ಕುಳಿತಾಗ – ಕಣ್ಣ ಮುಂದೆ ಬರೇ ಕತ್ತಲೇ ಹರಡಿದಂತೆ ಕಾಣಿಸಿತು. ವಿಮೋಚನೆಗೆ ದಾರಿ ಯಾವುದೂ ಕಾಣಲಿಲ್ಲ. ನಿನಗೇನಾದರೂ ಕಾಣುತ್ತದೆಯೇ?

ಅಂದಹಾಗೆ – ಏನೋ ಹೇಳಬೇಕೆಂದು ಹೊರಟವನು ಎಲ್ಲೆಲ್ಲಿಯೋ ಸುತ್ತಿ ಎಲ್ಲಿಗೋ ಬಂದ ಹಾಗಾಯಿತು. ನಾನು ನಿನಗೆ ಬರೆಯಬೇಕೆಂದಿದ್ದುದು ನಮ್ಮ ಪ್ರೊಫೆಸರೊಬ್ಬರ ವಿಷಯ.

ಡಾ. ನಂಬಿಯಾರ್‌ರವರ ಹೆಸರು ನೀನು ಕೇಳಿರಬಹುದು. ನಮ್ಮ ದೇಶದಲ್ಲೇ ತುಂಬಾ ಹೆಸರುವಾಸಿಯಾದ ಡಾಕ್ಟರು ಅವರು. ಇಲ್ಲೇ ಕೃಷ್ಣ ರಾಜೇಂದ್ರ ಆಸ್ಪತ್ರೆಯಲ್ಲಿ ಡಾಕ್ಟರಾಗಿದ್ದು, ನಮ್ಮ ಹಾಸ್ಟಲ್ಲಿನ ವಾರ್ಡನ್ ರಾಗಿದಾರೆ. ನನಗೆ ಅವರ ಪರಿಚಯವಾದುದು ಹೇಗೆ ಗೊತ್ತೆ ?

ಕಾಲೇಜಿಗೆ ಸೀಟು ಕೊಡುವ ಸಮಿತಿಯಲ್ಲಿ ಅವರೂ ಒಬ್ಬ ಸದಸ್ಯರು. ಸಮಿತಿಯಲ್ಲಿ ಡಾ. ವೆಂಕಟಾಚಲಶೆಟ್ಟರು ನನ್ನ ಪರವಾಗಿ ಹೂಡಿದ ಕೋಮು ವಾರು ವಾದದಿಂದಾಗಿ ಅವರಿಗೆ ನನ್ನ ನೆನಪು ಉಳಿಯಿತು. ಒಮ್ಮೆ ಹಾಸ್ಟಲ್ಲಿಗೆ ಬಂದಾಗ ನನ್ನ ಹೆಸರು ಕೇಳಿ 'ಸೋ ಯೂ ಆರ್ ರಾಜಶೇಖರ ಶೆಟ್ಟಿ ?' ಎಂದು ಹೇಳಿ ನನ್ನ ಮುಖವನ್ನು ವಿಚಿತ್ರವಾಗಿ ನೋಡಿ, ಒಂದು ಗಳಿಗೆ ಬಿಟ್ಟು ಕೊಂಡು, 'ಬಿಡುವಾದಾಗ ಒಮ್ಮೆ ಬಂದು ನೋಡಿ. ನಿಮ್ಮಲ್ಲಿ ಸ್ವಲ್ಪ ಮಾತ ನಾಡುವುದಿದೆ' ಎಂದರು. ಅವರು ನನ್ನ ಹೆಸರು ಉಚ್ಚರಿಸಿದ ರೀತಿ ಆ ಬಳಿಕ ನನ್ನನ್ನು ನೋಡಿದ ಬಗೆ, ಬಳಿಕ ಈ ಮಾತು. ನನಗೇಕೋ ಒಂದು ರೀತಿ ದಿಗ್ಭ್ರಮೆಯೂ ಆಯಿತು ; ದಿಗಿಲೂ ಆಯಿತು ಎನ್ನು. ಅಷ್ಟು ಬೇಗ ಅವರ ಗಮನಕ್ಕೆ ಬರುವಂಥ ಕೆಲಸವನ್ನು ನಾನೇನು ಮಾಡಿರಬಹುದು ಎಂದು ಯೋಚಿಸಿದೆ. ಏನೂ ತೋಚಲಿಲ್ಲ. ಇಲ್ಲಿ ಪ್ರೊಫೇಸರು ಕಣ್ಣಿಗೆ ಬೀಳುವು ದರಲ್ಲಿ ಎರಡು ರೀತಿ – ಒಂದು ಅವರ ಆಪ್ತನಾಗಿ ; ಇಲ್ಲವೆ ಅವರ ಸಿಟ್ಟಿಗೆ ಕಾರಣವಾಗಿ. ಸಿಟ್ಟಿಗೆ ಕಾರಣವಾದರೆ ಆ ವಿದ್ಯಾರ್ಥಿಯ ಕಥೆ ಮುಗಿದಂತೆಯೇ. ಎಷ್ಟು ಚೆನ್ನಾಗಿ ಓದಿದರೂ ಫೇಲಿನ ಪಟ್ಟ ಕಟ್ಟಿಟ್ಟ ಬುತ್ತಿ. ಹಾಗಾಗಿ ಬಹಳ ಯೋಚಿಸಿದೆ. ನಾನು ಅವರ ಆಪ್ತನಾಗಲು ಏನೂ ಕಾರಣವಿರಲಿಲ್ಲ. ಹಾಗೇ ಸಿಟ್ಟಿಗೆ ಗುರಿಯಾಗುವಂಥಹುದನ್ನೇನೂ ಮಾಡಿರಲಿಲ್ಲ. ಹೊಸಬನಾದ ನನಗೆ ಅದಕ್ಕೆ ಅವಕಾಶವೇ ಇರಲಿಲ್ಲ. ಹೀಗಿರುವಾಗ ಈ ಕರೆ ಏಕೆ ? ಏನು ಕಾದಿ ರಬಹುದು ಎಂದು ಚಿಂತಿಸಿದೆ. ಈ ವಿಷಯವನ್ನು ಬೇರೆ ಯಾರಲ್ಲಿಯಾದರೂ ಚಿಂತಿಸಲು ಅವಕಾಶವೂ ನನಗಿರಲಿಲ್ಲ ಅಷ್ಟು ಆಪ್ತರಾದ ಸ್ನೇಹಿತರಾರೂ ಇನ್ನೂ ನನ್ನ ಪಾಲಿಗೆ ಇಲ್ಲಿ ದೊರಕಿಲ್ಲ, ಈ ಚಿಂತೆಯಲ್ಲಿ ಆ ದಿನ ಕೇಳಿದ ಪಾಠವಾವುದೂ ನನ್ನ ಮನಸ್ಸಿಗೆ ಹೋಗಲಿಲ್ಲ. ಆ ಚಿಂತೆಯಲ್ಲೇ ಕ್ಲಾಸು ಮುಗಿಯುವವರೆಗೂ ಕಾಲ ಕಳೆದು, ಕ್ಲಾಸು ಮುಗಿಯುತ್ತಿದ್ದ ಹಾಗೇ ಅವ ರನ್ನು ಕಾಣಲು ಹೋದೆ.

ಕೃಷ್ಣರಾಜೇಂದ್ರ ಆಸ್ಪತ್ರೆಯಲ್ಲಿ ಅವರಿಗೆ ಒಂದು ಪ್ರತ್ಯೇಕವಾದ ಕೋಣೆ ಇದೆ. ನಾನು ಹೋಗುವಾಗ ಸಂಜೆ ಐದು ಗಂಟೆಯ ಸಮಯ. ಡಾಕ್ಟರು ಇರುತ್ತಾರೋ ಇಲ್ಲವೋ, ಮನೆಗೆ ಹೋಗಿದ್ದರೇನು ಮಾಡುವುದು ಎಂದು

ಕೊಂಡೇ ಹೋದೆ. ಆದರೆ ಅವರು ಮನೆಗೆ ಹೋಗಿರಲಿಲ್ಲ. ಅವರ ಕೋಣೆಯ ಮುಂದಿನ ಬೆಂಚಿನ ಮೇಲೆ ಇನ್ನು ಅವರನ್ನು ಕಾಣಲು ಬಂದ ಕೆಲವು ಜನ ರೋಗಿಗಳು ಕಾದು ಕುಳಿತಿದ್ದರು. ನಾನೂ ಆರ್ಡರ್ಲಿಯೊಂದಿಗೆ ಹೆಸರಿನ ಚೀಟಿ ಒಳಗೆ ಕಳಿಸಿ, ಉಳಿದವರೊಂದಿಗೆ ಕಾಯುತ್ತಾ ಕುಳಿತೆ. ಆದರೆ ಬಹು ಬೇಗ ಒಳಗಿನಿಂದ ಕರೆ ಬಂದಿತು. ಹೋದೆ. ಯಾವುದೋ ರೋಗಿಯೊಂದಿಗೆ ಮಾತನಾಡುತ್ತಿದ್ದ ಡಾಕ್ಟರು ಕುಳಿತುಕೊಳ್ಳಿ ಎಂದು ಹೇಳಿ, ಮತ್ತೆ ತಮ್ಮ ಕೆಲಸದಲ್ಲಿ ತೊಡಗಿದರು.

ತಮ್ಮ ಕೆಲಸದ ಹೊತ್ತು ಮೀರಿದ್ದರೂ, ಸಾಕಷ್ಟು ಆಯಾಸವಾಗಿದೆ ಯೆಂಬುದನ್ನು ಅವರ ದಣಿದ ಮುಖಮುದ್ರೆ ಸೂಚಿಸುತ್ತಿದ್ದರೂ, ರೋಗಿಗಳನ್ನು ಪರೀಕ್ಷಿಸುವಾಗ ಅವರಿಗೆ ಯಾವ ಆತುರವೂ ಇದ್ದಂತಿರಲಿಲ್ಲ. ಮುಖದಲ್ಲಿರಲಿ ಮಾತಿನಲ್ಲೂ ಆ ಆತುರವಿರಲಿಲ್ಲ. ನಗುನಗುತ್ತಾ ಅವರು ಆಡಿದ ಮಾತು ಕೇಳಿಯೇ, ರೋಗದ ಹೊರೆ ಹೊತ್ತು ಬಂದವರಿಗೆ, ಆ ಭಾರ ಅರ್ಧ ಕಡಿಮೆಯಾಗಬೇಕು. ಹಾಗಿತ್ತು ಅವರ ಮಾತಿನ ರೀತಿ. ಅವರ ಪರೀಕ್ಷಾ ವಿಧಾನ ನಿಜವಾಗಿಯೂ ಆಶ್ಚರ್ಯಕರವಾದುದು. ಆ ರೋಗಿಗಳೋ — ಎಂಥೆಂಥವರು ಬರುತ್ತಾರೆ ಶ್ರೀಧರ್. ಒಬ್ಬಾಕೆ ಬಂದಿದ್ದಳು ಆ ದಿನ, ಬೇರೆ ಯಾವುದೋ ಊರಿನ ಹೆಣ್ಣುಮಗಳು ; ಉದರವ್ಯಾಧಿಯಿಂದ ನರಳುತ್ತಿದ್ದಾಕೆ. ಆಕೆಯ ಮುಖ ನಡಿಗೆಯನ್ನು ನೋಡಿಯೇ ನಂಬಿಯಾರ್‌ರಿಗೆ ಆಕೆ ಇಂತಹ ವ್ಯಾಧಿಯಿಂದಲೇ ನರಳುತ್ತಿದ್ದಾಳೆ ಎಂಬುದು ಅರಿವಾದಂತಿತ್ತು. ಬಹು ದಿನಗಳ ವ್ಯಾಧಿಯಿಂದ ಬಳಲಿದ ಆಕೆಯ ಮೊಗದ ಮೇಲೆ ದಟ್ಟವಾದ ನಿರಾಶೆಯ ಕಾರ್ಮೋಡ ಕವಿದಿತ್ತು. ಆಕೆಯೊಂದಿಗೆ ಆಕೆಯ ಗಂಡನೂ ಬಂದಿದ್ದ. ಆಕೆ ಬಂದು ಕುಳಿತುಕೊಳ್ಳುತ್ತಿದ್ದ ಹಾಗೆಯೇ ಆಕೆಯ ಮುಖವನ್ನು ನೋಡಿ ಇವರು —

" ಏನು, ಈಗಲೂ ಹೊಟ್ಟೆನೋವು ಇದೆಯೆ ? ಬಹಳ ಹೊತ್ತು ಕುಳಿತು ಕಾದಿರೆಂದು ಕಾಣುತ್ತದೆ. ಹೋಗಿ. ಅಲ್ಲಿ ಒಂದು ಗಳಿಗೆ ಮಲಗಿಕೊಳ್ಳಿ "

—ಎಂದು ಅಲ್ಲೇ ಇದ್ದ ನರ್ಸ್‌ಗೆ ಆಕೆಯನ್ನು ಪರೀಕ್ಷೆಯ ಕೋಣೆ ಯಲ್ಲಿ ಮಲಗಿಸುವಂತೆ ಹೇಳಿದರು. ಆಕೆ ಏನೂ ಮಾತನಾಡದೆ ಯಾಂತ್ರಿಕ ವಾಗಿ ನರ್ಸ್‌ನ ಹಿಂದೆ ನಡೆದು ಹೋದಳು. ಆಕೆ ಹೋಗುವುದನ್ನೇ ನೋಡು ತ್ತಿದ್ದ ಡಾಕ್ಟರು, ಆಕೆಯ ಗಂಡನತ್ತ ತಿರುಗಿ—

" ಈ ರೋಗ ಗುಣವಾಗುವುದೇ ಇಲ್ಲವೆಂದು ಯಾರೋ ಹೇಳಿರಬೇಕು. ಅಲ್ಲವೇ ? ಎಂಥ ಹುಚ್ಚು. ವಾಸಿಯಾಗದ ರೋಗವೇ ಇಲ್ಲವೆಂದು ನಿಮಗೆ

ತಿಳಿಯದೇ ? ನೀವಾದರೂ ಅವರಿಗೆ ಈ ಮಾತು ಹೇಳಿ, ಅವರ ಮನಸ್ಸನ್ನು ಗೆಲುವಾಗಿಡಬೇಕಾಗಿತ್ತು ”

—ಎಂದರು.

“ ಊಹೂ. ಅವಳನ್ನು ಗೆಲುವಾಗಿಡುವುದು ಯಾರಿಗೂ ಸಾಧ್ಯವಿಲ್ಲ.”

“ ಏಕೆ ? ”

“ ತನ್ನ ರೋಗ ಸಾವಿನಿಂದಲೇ ವಾಸಿಯಾಗುವುದು. ಈ ಜನ್ಮದಲ್ಲಿ ಅದರಿಂದ ವಿಮೋಚನೆ ಇಲ್ಲ ಎಂದುಕೊಂಡಿದಾಳೆ ನಾನೂ ಎಷ್ಟೋ ಹೇಳಿದೆ. ಹೇಳಿದಾಗ ನಂಬಿದಂತೆ ನಟಿಸುತ್ತಾಳೆ. ಆದರೆ ನಂಬುವುದಿಲ್ಲ. ಅವಳ ಈ ಭಯಂಕರ ನಿರಾಶೆ, ಆ ಘೋರ ನರಳಾಟ ನನನ್ನು ಕೊಲ್ಲುತ್ತಿದೆ.”

—ಎಂದ ಆಕೆಯ ಜೊತೆಗೆ ಬಂದಾತ, ತೀವ್ರ ನಿರಾಶೆಯ ಕಟು ಧ್ವನಿಯಲ್ಲಿ, ಆತನ ಮಾತನ್ನು ಕೇಳಿ ಡಾಕ್ಟರ ಮುಖದ ಮೇಲೆ ಒಂದು ಗಳಿಗೆ ಏನೋ ನೋವು ಸುಳಿದು, ಮರೆಯಾಯಿತು. ಮುಖದ ಮೇಲಿನ ನೋವನ್ನು ಮಾತಿನಲ್ಲಿ ತೋರಗೊಡದೆ—

“ ಆಕೆ ನಿಮಗೇನಾಗಬೇಕು ? ”

—ಎಂದು ಕೇಳಿದರು.

“ ನನ್ನ ಹೆಂಡತಿ.”

“ ಹಾಗಾದರೆ ನೀವು ಸರಿಯಾದ ಗಂಡನಲ್ಲ ”

—ಎಂದರು ಡಾಕ್ಟರು ನಗುತ್ತಾ. ಅವರ ಮಾತನ್ನು ಕೇಳಿ ಆತ ಪೆಚ್ಚಾಗಿ ಕೇಳಿದ—

“ ಏಕೆ ? ”

“ ನೋಡಿ, ಗಂಡು ತನ್ನನ್ನು ಪ್ರೀತಿಸಿದ ಹೆಣ್ಣಿಗೆ ಬೇಕಾದದ್ದನ್ನು ನಂಬುವಂತೆ ಮಾಡಬಲ್ಲ. ಕಣ್ಣು, ಮಾತಿನಲ್ಲಿ ಪ್ರೀತಿಯನ್ನು ತುಂಬಿ ‘ಇದೇ ನೋಡು ಕೈಲಾಸ’ ಎಂದು ಅಂಗೈಯನ್ನು ತೋರಿಸಿದರೂ ಪ್ರೇಮದ ಮಂಕು ಬೂದಿಗೆ ವಶವಾದ ಹೆಣ್ಣು ನಂಬುತ್ತದೆ ಅಂಥ ಬಲವಾದ ಅಸ್ತ್ರ ನಿಮ್ಮ ಬಳಿ ಇದ್ದೂ, ಅದನ್ನು ಉಪಯೋಗಿಸದ ನಿಮ್ಮ ಮೂರ್ಖತನಕ್ಕೆ ಏನು ಹೇಳಲಿ ? ಇನ್ನಾದರೂ ಅದನ್ನು ಉಪಯೋಗಿಸಿ. ಆಕೆಯ ಖಾಯಿಲೆ ಗುಣವಾಗುತ್ತದೆ.”

“ ಗುಣವಾಗುತ್ತದೆ ! ”

—ಡಾಕ್ಟರ ಮಾತನ್ನು ನಂಬಲಾಗದಂತೆ ಅಚ್ಚರಿಯನ್ನು ವ್ಯಕ್ತಪಡಿಸಿ ಕೇಳಿದ ಆತ.

ಏಕೆ? ಗುಣವಾಗುವುದಿಲ್ಲವೆ? ನಿಮಗೂ ಅದೇ ನಂಬಿಕೆಯಾಗಿದೆಯೇನು?

"ಬೇರೆ ರೀತಿ ಭಾವಿಸಲು ಏನೂ ಕಾರಣವೇ ಇಲ್ಲ."

"ಸಾವಿರಾರು ಜನ ಡಾಕ್ಟರಾಯಿತು, ನೂರಾರು ಔಷಧಗಳಾಯಿತು. ಇಂಜಕ್ಷನ್ ಚುಚ್ಚಿಸಿ, ಚುಚ್ಚಿಸಿ ಅವಳ ಮೈ ಜರಡಿಯಾಯಿತು. ಒಂದು ಆಪರೇಷನ್ನೂ ಆಯಿತು. ಆಯುರ್ವೇದ, ಯುನಾನಿಗಳೂ ಮುಗಿಯಿತು. ಮಾಟ ಮಂತ್ರ, ದೇವರು, ದಿಂಡರು ಎಲ್ಲವೂ ಆಯಿತು, ರೋಗ ಮಾತ್ರ ಗುಣವಾಗಲಿಲ್ಲ. ಈಗ ಕಡೆಯ ಬಾರಿಗೆಂದು ನಿಮ್ಮ ಬಳಿ ಬಂದಿದೇವೆ. ನೋಡಿ – ಡಾಕ್ಟರ್, ದುಡ್ಡಿನದು ನನಗೆ ಲಕ್ಷ್ಯವಿಲ್ಲ. ಅವಳಿಗೆ ವಾಸಿಯಾದರೆ ಸಾಕು. ಎಷ್ಟು ಹಣ ಬೇಕಾದರೂ ಖರ್ಚು ಮಾಡಲು ಸಿದ್ಧನಾಗಿದ್ದೇನೆ."

—ಎಂದು ಉದ್ವಿಗ್ನನಾಗಿ ನುಡಿದು ಆತ, ತನ್ನ ಉದ್ವಿಗ್ನತೆಯಲ್ಲಿ ತಾನೇನು ಮಾಡುತ್ತಿರುವೆನೆಂದು ಅರಿಯದೆ, ಜೋಬಿನಲ್ಲಿಟ್ಟುಕೊಂಡಿದ್ದ ನೋಟಿನ ಕಂತೆಯನ್ನು ತೆಗೆದು ಅವರ ಮುಂದಿಟ್ಟ, ಆ ನೋಟಿನ ಕಂತೆಯನ್ನು ತೆಗೆದುಕೊಂಡು, ತಮ್ಮ ಕೈಯಲ್ಲಿ ಒಂದು ಗಳಿಗೆ ಹಿಡಿದು ನೋಡಿ, ಮತ್ತೆ ಅದನ್ನು ಅವನಿಗೆ ಕೊಟ್ಟು ಹೇಳಿದರು—

"ಈ ಹಣದಿಂದ ರೋಗ ಗುಣವಾಗುವುದೇ ?"

"ಹಣವಿಲ್ಲದೆ ಗುಣವಾಗುವ ಆಸೆಯೇ ಇಲ್ಲವಲ್ಲ."

"ಅದು ತಪ್ಪು ಭಾವನೆ. ರೋಗ ಗುಣವಾಗುವುದು ಹಣದಿಂದಲ್ಲ, ಔಷಧದಿಂದ. ಅದಕ್ಕ ಇಲ್ಲಿ ಹಣ ಕೊಡಬೇಕಾಗಿಲ್ಲ. ಈ ಹಣದಿಂದ ನಿಮ್ಮ ಹೆಂಡತಿಗೆ ಒಂದು ಒಳ್ಳೆಯ ಸೀರೆ ತೆಗೆದುಕೊಡಿ. ಇನ್ನೂ ಚಿಕ್ಕ ವಯಸ್ಸು – ಉಟ್ಟು ಸಂತೋಷಪಡಲಿ."

"ಇರುವಷ್ಟು ಸೀರೆಗಳನ್ನು ಅವಳು ಸಂತೋಷದಿಂದ ಉಟ್ಟು ಹರಿದರೆ, ಮತ್ತ ನೂರು ತಂದು ಕೊಡಬಲ್ಲೆ."

"ಹೂ, ಹಾಗೇನು ? ಇಲ್ಲಿಗೆ ನೀವು ಬಂದಾಗ ಆಕೆಯೊಬ್ಬಳೇ ರೋಗಿ ಎಂದಿದ್ದೆ. ನೀವೂ ರೋಗಿಗಳೆಂದು ತಿಳಿದಿರಲಿಲ್ಲ. ನಿಮಗೂ ಔಷಧ ಬೇಕು."

—ಗಂಭೀರ ಧ್ವನಿಯಲ್ಲಿ ಹೇಳಿದರು ಡಾಕ್ಟರು.

"ಆ್ಞ ! ನನಗೂ ರೋಗವೇ ?"

—ಡಾಕ್ಟರ ಮಾತು ಕೇಳಿ ಆತ ಗಾಬರಿಯಾಗಿ ಕೇಳಿದ.

"ನಿಜ. ನೀವೂ ರೋಗಿಯೇ. ನಿಮ್ಮಿಬ್ಬರಿಗೂ ಒಂದೇ ರೋಗ ಬಂದಿದೆ—ನಿರಾಶೆಯ ಭಯಂಕರ ರೋಗ. ಅದನ್ನು ಬಿಡುವ ವರೆಗೂ ನಿಮ್ಮ ಪತ್ನಿಯ ಆರೋಗ್ಯ ಸರಿ ಹೋಗುವುದಿಲ್ಲ. ಬಂದೆ – ತಡೆಯಿರಿ. ಆಕೆಯನ್ನು ಪರೀಕ್ಷಿಸಿ ಬರುತ್ತೇನೆ."

—ಎಂದು ಹೇಳಿ ಒಳಗೆ ಹೋದರು. ಆತ ಪರೀಕ್ಷೆಯ ಕೋಣೆಯತ್ತಲೇ ನೋಡುತ್ತಾ ಕುಳಿತ. ಹದಿನೈದು ನಿಮಿಷಗಳಲ್ಲೇ ಡಾಕ್ಟರು ಹೊರಗೆ ಬಂದರು. ಆಕೆಯೂ ಅವರ ಹಿಂದೆ ಬಂದಳು. ಬಂದಾಗ ಆಕೆಯ ಮುಖದ ಮೇಲಿದ್ದ ನಿರಾಶೆಯ ಮೋಡ ಅಷ್ಟು ದಟ್ಟವಾಗಿರಲಿಲ್ಲ. ಆಗ ತಾನೇ ಮರೆಯಾದ ನಗು ಆಕೆಯ ಕಣ್ಣಂಚಿನಲ್ಲಿ ಇನ್ನೂ ಕೊಂಚ ಉಳಿದಿತ್ತು. ಆಕೆ ತನ್ನ ಗಂಡನತ್ತ ಅಭಿಮಾನದಿಂದ ನೋಡುತ್ತಾ—

"ನಿಮ್ಮ ಮಾತು ಕೇಳಿ ನನಗೆ ಹೊಸ ಜನ್ಮ ಬಂದಹಾಗಾಯಿತು ಡಾಕ್ಟರೇ."

—ಎಂದಳು, ಅಪಾರ ಕೃತಜ್ಞತೆ ತುಂಬಿದ ಧ್ವನಿಯಲ್ಲಿ.

"ನಿಮ್ಮನ್ನು ಕೊಲ್ಲುತ್ತಿದ್ದುದು ರೋಗವಲ್ಲ, — ಭಯ, ನಿರಾಶೆ. ಇದೇನು ದೊಡ್ಡ ರೋಗವಲ್ಲ. ಹಾಗೆಂದವರು ಮೂರ್ಖರು. ನಾಳೆ ನಾನು ಹೇಳಿದ ಹಾಗೆ ಚೆಲುವಾಂಬಾ ಆಸ್ಪತ್ರೆಗೆ ಹೋಗಿ ಪರೀಕ್ಷೆಮಾಡಿಸಿಕೊಂಡು ಬನ್ನಿ. ಎಂ. ಓ. ಗೆ ನಾನು ಚೀಟಿ ಕೊಡುತ್ತೇನೆ – ಅವರ ಪರೀಕ್ಷೆಯ ಫಲಿತಾಂಶ ತಿಳಿದು ಔಷಧ ಕೊಡುತ್ತೇನೆ. ಏನೂ ಭಯವಿಲ್ಲ, ಹೆದರಿಕೆಯ, ನಿರಾಶೆಯ ಗೊಬ್ಬರ ಹಾಕಿ ರೋಗವನ್ನು ಬೆಳೆಸಿಕೊಳ್ಳಬೇಡಿ."

"ಹಾಗಾದರೆ ನನ್ನ ಖಾಯಿಲೆ ಗುಣವಾಗುತ್ತದೆ ಎನ್ನುತ್ತೀರಾ ?"

"ಖಂಡಿತವಾಗಿ"

ಡಾಕ್ಟರ ಮಾತು ಕೇಳಿ ಆಕೆಯ ಬಡಕಲಾದ ಮೈಯಲ್ಲಿ ಹೊಸ ಜೀವ ತುಂಬಿ ಬಂದಂತಾಯಿತು. ಅವನಿಗೂ ಉತ್ಸಾಹ ಬಂದಂತಾಯಿತು.

"ಪರೀಕ್ಷೆಯ ಫೀಸು ಏನಾದರೂ ಕೊಡಬೇಕೇ ಡಾಕ್ಟರೇ ?"

—ಎಂದು ಕೇಳಿದ.

"ಹೂ."

"ಎಷ್ಟು ?"

"ನಿಮ್ಮ ಪತ್ನಿಗೆ ಅದೇನೆಂದು ಹೇಳಿದೇನೆ. ಅವರನ್ನೇ ಕೇಳಿನೋಡಿ."

"ಏನು ಲಲಿತಾ ?"

—ಎಂದು ಆತ ತನ್ನ ಪತ್ನಿಯತ್ತ, ನೋಡಿದ. ಆಕೆ ಆತನ ಪ್ರಶ್ನೆಗೆ ಉತ್ತರ ಕೊಡದೆ ನಾಚಿ ತಲೆಬಾಗಿಸಿದಳು.

"ಏಕೋ ಅವಳು ಹೇಳಲು ನಾಚುತ್ತಾಳೆ. ನೀವೇ ಹೇಳಿ ಡಾಕ್ಟರ್ ?"

"ಏನಮ್ಮಾ ನಾನೇ ಹೇಳಬೇಕೇ ? ಯಾರ ಮನಸ್ಸಿನ ಮಾತು ಅವರು ಹೇಳಿದರೇ ಚೆನ್ನ. ಅಲ್ಲವೇ"

ಡಾಕ್ಟರಾಡಿದ ಮಾತು ಕೇಳಿ ಆಕೆಯ ಮುಖ ಆರಕ್ತವಾಯಿತು. ಕಣ್ಣು ನೆಲವನ್ನು ನೋಡಿತು. ಮಾತು ಮಾತ್ರ ಹೊರಡಲಿಲ್ಲ.

"ಹೋಗಲಿ ಬಿಡಿ. ನೀವು ನಾಚುವುದಾದರೆ ನಾನೇ ನಿಮ್ಮ ವೈಕ್ರಾಫೋ಼ನ್ ಆಗುತ್ತೇನೆ. ನೋಡಿ-ಈಗ ನನಗೇನೂ ಫೀಸು ಕೊಡಬೇಡಿ. ಆಕೆಯ ಖಾಯಿಲೆ ಗುಣವಾದ ಒಂದು ವರ್ಷದೊಳಗಾಗಿ ಫೀಸು ತಂದು ತೋರಿಸಬೇಕು."

" ಏನು ? "

" ಆಕೆಯ ತೋಳ ತುಂಬಾ ತುಂಬಿಕೊಂಡು, ಕುಲುಕುಲು ನಗುವ ಗಂಡುಮಗು ! ಆ ಫೀಸು ತಪ್ಪಿಸಿದರೆ ನಾನು ಬಿಡುವುದಿಲ್ಲ. ತಿಳಿಯಿತೇ ? ಸರಿ. ಇನ್ನು ನೀವು ಹೋಗಿ. ಈ ಚೀಟಿ ತೆಗೆದುಕೊಳ್ಳಿ. ನಾಳೆ ಚೆಲುವಾಂಬ ಆಸ್ಪತ್ರೆಗೆ ಹೋಗಿ. ನರ್ಸ್ – ಇನ್ನು ಯಾರಾದರೂ ಇದ್ದಾರೆಯೇ ?"

— ಎಂದರು ಡಾಕ್ಟರು, ಅವನಿಗೆ ಚೀಟಿ ಬರೆದು ಕೊಟ್ಟು, ಹೋಗಲು ಅನುಮತಿ ಇತ್ತು. ನಿರಾಶೆಯ ಕಾರ್ಮೋಡ ಹೊತ್ತು ಬಂದ ದಂಪತಿಗಳು, ಹರ್ಷದ ಗೊಂಬೆಗಳಾಗಿ ಹಿಂದಿರುಗಿದರು.

ಅವರ ಮಾತು ಕಥೆಗಳಲ್ಲಿ ಯಾವ ಭಾಗವನ್ನೂ ವಹಿಸದೆ, ಮೂಕ ಸಾಕ್ಷಿಯಾಗಿ ಕುಳಿತುಕೊಂಡಿದ್ದ ನನಗೆ ಕಣ್ಣೆದುರಿನಲ್ಲೇ ಒಂದು ಪವಾಡ ನಡೆದಂತಾಯಿತು. ಆ ಬೆರಗಿನಲ್ಲಿ ಮಾತುಸೋತು ಸುಮ್ಮನೆ ನೋಡುತ್ತಾ ಕುಳಿತಿದ್ದೆ. ಒಂದೆರಡು ನಿಮಿಷದಲ್ಲೇ ನರ್ಸನ್ನು ಹಿಂಬಾಲಿಸಿ ಯುವಕನೊಬ್ಬ ಒಳಗೆ ಬಂದು, ಡಾಕ್ಟರ ಮುಂದೆ ಒಂದು ಕಾಗದವಿಟ್ಟು—

" ನಿಮ್ಮ ಮಿತ್ರರು ನಿಮಗೆ ನನ್ನ ಪರವಾಗಿ, ಈ ಪರಿಚಯ ಪತ್ರ ಕೊಟ್ಟಿದಾರೆ "

—ಎಂದ.

" ಪರಿಚಯ ಪತ್ರ ಆಗಲೇ ಬಂತಲ್ಲ."

" ಯಾವುದು ? ಅವರೇ ಫೋ಼ನ್ ಮಾಡಿ ತಿಳಿಸಿದರೇ ? ಫೋ಼ನ್ ಮಾಡುವುದಾಗಿ ಹೇಳಿದ್ದರು "

—ಆಶ್ಚರ್ಯದಿಂದ ಕೇಳಿದ ಆತ.

" ಊಹೂ, ಅದರ ಅಗತ್ಯವೇ ಇಲ್ಲ."

" ಮತ್ತೆ ? "

" ಡಾಕ್ಟರಿಗೆ ನಿಮ್ಮ ರೋಗಕ್ಕಿಂತ ದೊಡ್ಡ ಪರಿಚಯ ಪತ್ರ ಬೇರಾವುದೂ ಬೇಡ. ಇದನ್ನಂತೂ ತಂದಿದ್ದೀರಲ್ಲಾ, ಈಗ ಹೇಳಿ ನಿಮಗೆ ಏನು ಖಾಯಿಲೆ ? "

—ಎಂದವರೇ ಏನನ್ನೋ ನೆನಸಿಕೊಂಡು ನಗಲಾರಂಭಿಸಿದರು.

ಅಕಾರಣವಾದ ಆ ನಗುವನ್ನು ಕೇಳಿ ಅಲ್ಲಿದ್ದ ನಮಗೆಲ್ಲಾ ಆಶ್ಚರ್ಯ ವಾಯಿತು. ನರ್ಸ್ ಮಾತ್ರ ಡಾಕ್ಟರೊಂದಿಗೆ ನಗೆಯಲ್ಲಿ ಬೆರೆತಳು, ಆ ನಗುವಿನ ಕಾರಣ ಅರಿಯದೆ ಆ ಯುವಕ ತಬ್ಬಿಬ್ಬಲಾಗಿ—

" ಏನು, ಏನಾಯಿತು ಡಾಕ್ಟರ್ ? "

—ಎಂದ.

" ಕ್ಷಮಿಸಿ. ನಿಮಗೆ ಸಂಬಂಧಿಸಿದುದೇನೂ ಅಲ್ಲ."

ನಗೆಯನ್ನು ತಡೆಹಿಡಿದು ಹೇಳಿದರು ಡಾಕ್ಟರ್ : ಯಾವುದೋ ' ಪತ್ರಿಕೆಯಲ್ಲಿ ಓದಿದ್ದ ಹಾಸ್ಯವೊಂದು ನೆನಪಿಗೆ ಬಂದಿತು ನೀವು ಅದನ್ನು ಓದಿಲ್ಲವೇ. ತುಂಬಾ ಹೆಸರುವಾಸಿಯಾದ ಜೋಕ್ (Joke) ಅದು.'

" ಊಹೂ ನನಗೆ ತಿಳಿಯದು."

" ನೋಡಿ—ಒಮ್ಮೆ ನಿಮ್ಮ ಹಾಗೇ ಒಬ್ಬರು ರೋಗಿ, ನನ್ನಂಥ ಒಬ್ಬ ಡಾಕ್ಟರ್ ಬಳಿ ಬಂದರು. ಡಾಕ್ಟರ್ ಆತನನ್ನು ' ನಿನಗೇನಾಗಿದೆ ? ' ಎಂದು ಕೇಳಿದರು, ಲಕ್ಷಣಗಳನ್ನು ಆತನಿಂದಲೇ ಕೇಳಿ ತಿಳಿದುಕೊಳ್ಳಲು. ಆತ ಕೊಂಚ ಘಾಟಿ, ಚುರುಕು ನಾಲಗೆಯಾತ. ಡಾಕ್ಟರಿಗೆ ತನ್ನ ನಾಲಗೆಯ ಚುರುಕು ಮುಟ್ಟಿಸಬೇಕೆಂದು, ' ನನಗೇನಾಗಿದೆ ಎಂದು ತಿಳಿದಿದ್ದರೆ ನಿಮ್ಮ ಬಳಿ ಏಕೆ ಬರುತ್ತಿದ್ದೆ ' ಎಂದ. ಅದನ್ನು ಕೇಳಿದ ಡಾಕ್ಟರು, ' ಹಾಗಾದರೆ ಈಗಲೂ ನೀವು ಇಲ್ಲಿಗೆ ಬಂದದ್ದು ತಪ್ಪಾಯಿತು ' ಎಂದರು. ' ಹಾಗಾದರೆ ಮತ್ತೆಲ್ಲಿಗೆ ಹೋಗಬೇಕಾಗಿತ್ತು ? ' ಎಂದು ಮರುಪ್ರಶ್ನೆ ಮಾಡಿದ ಆತ. ' ಪಶುವೈದ್ಯಶಾಲೆಗೆ ಮೂಕ ಪ್ರಾಣಿಗಳಿಗೆ ಔಷಧ ಕೊಡುವುದು ಅಲ್ಲಿ ' ಎಂದರಂತೆ ನಿಮಗೆ ಏನಾಗಿದೆ ಎಂದು ನಾನು ಕೇಳಿದಾಗ ಆ ಜೋಕ್ ನೆನಪಾಗಿ ನಗುಬಂದಿತು. ಅಷ್ಟೆ. ಅಂದಹಾಗೆ – ನಿಮಗೆ ಏನೂ ರೋಗವಿಲ್ಲ. ನನ್ನ ಬಳಿ ಏಕೆ ಬಂದಿರಿ ? "

ಆ ಮಾತು ಕೇಳಿ ಆತ ಅದುವರೆಗೂ ಡಾಕ್ಟರ ಜೋಕ್ ಕೇಳಿ ನಗುತ್ತಿದ್ದವನು ಗಂಭೀರವಾಗಿ—

" ಇಲ್ಲ, ಡಾಕ್ಟರೇ. ನನಗೇನೋ ಆಗಿದೆ. ಊಟ ಸೇರುವುದಿಲ್ಲ. ನಿದ್ದೆ ಬರುವುದಿಲ್ಲ. ಹತ್ತು ಹೆಜ್ಜೆ ನಡೆದರೆ ಆಯಾಸವಾಗುತ್ತದೆ "

—ಎಂದ.

" ನಿಜ. ನನಗೆ ಗೊತ್ತು."

" ಮತ್ತೆ ? "

" ಅದಕ್ಕೇ ನಾನು ಹೇಳಿದ್ದು. ಇದು ರೋಗವಲ್ಲ, ಕೆಟ್ಟ ಚಾಳಿ. ಇಲ್ಲಿ ಬನ್ನಿ."

—ಎಂದು ಆತನನ್ನು ಹತ್ತಿರ ಕರೆದು ದೀಪದ ಬೆಳಕಿನಲ್ಲಿ ಕಣ್ಣು, ನಾಲಗೆಯನ್ನು ಪರೀಕ್ಷಿಸಿ, ಹೊಟ್ಟೆಯನ್ನು ಹಿಸುಕಿ ನೋಡಿ—

" ನೀವು ಸಿಗರೇಟ್ ಹೆಚ್ಚಿಗೆ ಸೇದುತ್ತೀರೊ, ಕಾಫಿ ಹೆಚ್ಚಿಗೆ ಕುಡಿಯುತ್ತೀರೋ ? "

—ಎಂದರು.

" ಎರಡೂ ಇದೆ."

—ಎಂದ ಆತ ಮಾತು ಎತ್ತ ಹೊರಳುತ್ತಿದೆ ಎಂದರಿಯದೆ.

" ಅದೇ ನಿಮ್ಮ ರೋಗ. ಅತಿ ಸಿಗರೇಟು, ಕಾಫಿ ನಿಮ್ಮ ಲೀವರ್ ಕೆಡಿಸಿದೆ. ಅವನ್ನು ಕಡಮೆ ಮಾಡಿ. ಪೂರಾ ಬಿಟ್ಟುಬಿಡುವುದು ಸಾಧ್ಯವಿಲ್ಲ. ನಾನು ಬಲ್ಲೆ, ನಾನೂ ಸಿಗರೇಟಿನ ಬಲಿಯೇ. ಕಾಡ್‌ಲಿವರ್ ಆಯಿಲ್ ತೆಗೆದುಕೊಳ್ಳಿ. ಹಗಲುಹೊತ್ತು ಎದ್ದು ಸ್ವಲ್ಪ ಸುತ್ತಾಡಿ ಬನ್ನಿ. ಅಷ್ಟು ಸಾಕು. ಉಳಿದುದು ತಾನೇ ಸರಿಹೋಗುತ್ತದೆ. ಇನ್ನು ನೀವು ಹೊರಡಬಹುದು."

ಎಂದು ಹೇಳಿ ಅವನನ್ನು ಕಳಿಸಿ

" ನರ್ಸ್ ಇನ್ನು ಯಾರಿದ್ದಾರೆ ? " ಎಂದರು

" ಯಾರೂ ಇಲ್ಲ, ಆದರೆ ನೀವು ಇಲ್ಲಿಯೇ ಇದ್ದರೆ ಯಾರಾದರೂ ಬರಬಹುದು. ಕಾಯುತ್ತೀರಾ ? ಅಥವಾ ಯಾರಿಗಾದರೂ ಹೇಳಿ ಕಳಿಸಲೇ ? " ಎಂದಳು ನರ್ಸ್ ನಗುತ್ತಾ.

" ನೀನೂ ಈಚೆಗೆ ಬಹಳ ಕೆಟ್ಟುಹೋಗಿಬಿಟ್ಟೆ ಗ್ರೇಸಿ. ಮೇಟ್ರನ್‌ಗೆ ಹೇಳಿ ನಿನಗೆ ತಕ್ಕ ಬಂದೋಬಸ್ತು ಮಾಡಿಸಬೇಕು ಕೆಟ್ಟ ಹುಡುಗಿ ! ನನ್ನನ್ನೇ ತಮಾಷೆ ಮಾಡುತ್ತೀಯಾ ? "

—ಎಂದು ಮೃದುವಾಗಿ ಅವಳ ಕೆನ್ನೆಯನ್ನು ತಟ್ಟಿ—

" ತಪ್ಪು ತಿಳಿದುಕೊಳ್ಳಬೇಡ. ಇದು ಆಹ್ವಾನವಲ್ಲ, ಎಚ್ಚರಿಕೆ ! ಹೋಗು. ಮೊದಲ ಷೋ ಸಿನೀಮಾಕ್ಕೆ ಹೋಗಲು ಹೊತ್ತು ಮೀರಿತೇನೋ ಅಲ್ಲವೇ ? "

—ಎಂದರು ನಗುತ್ತಾ.

" ಥ್ಯಾಂಕ್ ಯೂ ಡಾಕ್ಟರ್. ಗುಡ್ ಈವಿನಿಂಗ್ "

—ಎಂದು ನರ್ಸ್ ನಗುತ್ತಾ ಹೋದಳು. ನರ್ಸ್ ಹೋದ ಮೇಲೆ ಡಾಕ್ಟರು,

" ಕ್ಷಮಿಸಿ ರಾಜಶೇಖರ್. ಬಹಳ ಹೊತ್ತು ಕಾಯಿಸಿಬಿಟ್ಟೆ "

—ಎಂದು, ಕುರ್ಚಿಯ ಬೆನ್ನಿಗೆ ಹೊದೆಸಿದ ಕೋಟನ್ನು ಧರಿಸಿಕೊಂಡು, ಹಾಗೇ ಕುರ್ಚಿಯಲ್ಲಿ ಕುಳಿತು, ಮೇಜಿನ ಮೇಲೆ ತೋಳು ಊರಿ ಬಾಗಿದರು. ಆ ಬಾಗಿದ ಬೆನ್ನು ಹೊರಲಾರದ ಭಾರ ಹೊತ್ತು ಬಳಲಿದಂತೆ ಮೇಜಿನ ಮೇಲೆ ಬಾಗಿತ್ತು. ಒಂದು ಗಳಿಗೆ ಹಾಗೇ ಇದ್ದು, ಬಳಿಕ ಅಂಗೈಗಳಿಂದ ಮುಖವನ್ನು ಉಜ್ಜಿಕೊಂಡರು. ಅದುವರೆಗೂ ಕಾಣದ ದಣಿವು ಅವರ ಮುಖದ ಮೇಲೆ ಆಗ ತೆರೆತೆರೆಯಾಗಿ ತೂಗುತ್ತಿತ್ತು. ಆ ಗಳಿಗೆಯಲ್ಲಿ ಅವರ ಮುಖವನ್ನು ನೋಡಿ ನನಗೇಕೋ ಕರುಳು ಹಿಚುಕಿದಂತಾಯಿತು. ಕೇಳ ಬೇಕೋ, ಕೇಳಬಾರದೋ ಎಂಬುದನ್ನು ಅರಿಯದೆ—

" ದಿನವೂ ಇಷ್ಟೇ ಹೊತ್ತಾಗುತ್ತದೆಯೇ ಡಾಕ್ಟರ್ " ಎಂದೆ.

" ಹೂ. ಇಷ್ಟು ಹೊತ್ತು ಆಗುತ್ತದೆ. ಇದಕ್ಕಿಂತಲೂ ಹೆಚ್ಚು ಹೊತ್ತು ಆಗುತ್ತದೆ. ಅದಕ್ಕೇನು ಮಾಡುವುದಕ್ಕಾಗುತ್ತದೆ ಹೇಳಿ ಇದು ನಾವೇ ಬಯಸಿ ಕಟ್ಟಿಕೊಂಡ ಕರ್ಮ. ಏಳಿ ಹೋಗೋಣ ಇನ್ನು ಇಲ್ಲಿದ್ದರೆ ಗ್ರೇಸಿ ಹೇಳಿದಹಾಗೇ ಆಗಬಹುದು "

—ಎಂದು ಹೇಳಿ, ಕೋಣೆಯಿಂದ ಹೊರಬಂದು—

" ಒಂದು ಗಳಿಗೆ ಇರಿ. ಕಾರು ತರುತ್ತೇನೆ "

—ಎಂದು ಒಂದು ಬದಿಯಲ್ಲಿ ಬಿಟ್ಟಿದ್ದ ಕಾರನ್ನು ಪೋರ್ಟಿಕೋದ ಬಳಿ ತಂದು—

" ಬನ್ನಿ ಕುಳಿತುಕೊಳ್ಳಿ. ಎಲ್ಲಾದರೂ ಹೋಗುವುದಿತ್ತೇನು ? "

—ಎಂದು ಕೇಳಿದರು.

" ಬೇರೇನೂ ಕೆಲಸವಿರಲಿಲ್ಲ. ನಿಮ್ಮನ್ನು ನೋಡಬೇಕೆಂದೇ ಬಂದೆ."

" ಹಾಗೇ. ಆದರೆ ತುಂಬಾ ತಡವಾಯಿತು. ಅಷ್ಟು ಅವಸರದ ಕೆಲ ಸವಿದ್ದರೆ, ಈಗ ಬೇರೆ ಕಡೆ ಹೋಗುವ ಕೆಲಸವಿದ್ದರೆ ಹೇಳಿ. ನೀವು ಎಲ್ಲಿಗೆ ಹೋಗಬೇಕೋ ಅಲ್ಲಿಗೆ ತಲುಪಿಸಿ ಮನೆಗೆ ಹೋಗುತ್ತೇನೆ. ಒಹಳ ಹೊತ್ತು ಕಾಯಿಸಿ ದಣಿಸಿದೆ ಬನ್ನಿ ಕಾಫೀಬಾರ್‌ನಲ್ಲಿ ಮೊದಲು ಸ್ವಲ್ಪ ಕಾಫಿ ಕುಡಿ ಯೋಣ. ಆಮೇಲೆ ಮುಂದಿನ ಮಾತು."

ಡಾಕ್ಟರಾಡಿದ ಮಾತನ್ನು ಕೇಳಿ ನನಗೆ ಅವರು ಇಷ್ಟು ಬೇಗ, ತಾವೇ ನನ್ನನ್ನು ಬಂದು ನೋಡಲು ಹೇಳಿದುದು ಮರೆತೇಹೋಯಿತೇನೋ ಎನಿಸಿತು. ಆ ಮಾತನ್ನು ನಾನೇ ಅವರಿಗೆ ನೆನಪಿಸದೆ ಬೇರೆ ದಾರಿಯೇ ಇರಲಿಲ್ಲವಾದು ದರಿಂದ ನಾನೇ ಆ ಕೆಲಸ ಮಾಡಿದೆ.

"ಕ್ಷಮಿಸಿ. ಇಂದು ಕ್ಲಾಸಿನಲ್ಲಿ ಏಕೋ ನೀವೇ ನನ್ನನ್ನು ಬಂದು ನೋಡಲು ಹೇಳಿದ್ದಿರಿ."

"ನಿಜ, ನಿಜ. ಮರೆತೇಬಿಟ್ಟಿದ್ದೆ. ನಿಮಗೆ ಏನೋ ಹೇಳಬೇಕೆಂದು ಬರಹೇಳಿದೆ. ಆದರೆ ಇಷ್ಟು ಅವಸರವಿರಲಿಲ್ಲ. ನಾನು ನಿಮಗೆ ಹೇಳಬೇಕೆಂದಿದ್ದ ಮಾತು ಇಂದಲ್ಲ ಎಂದು ಹೇಳಿದರೂ ಆಗುತ್ತದೆ. ಇವತ್ತೇ ಏನೂ ಅವಸರವಿಲ್ಲ. ಈಗಾಗಲೇ ಸಾಕಷ್ಟು ಹೊತ್ತಾಗಿದೆ. ಬೇರೇನಾದರೂ ಕೆಲಸವಿದ್ದರೆ, ಹೋಗಬಹುದು. ನನ್ನದೇನೂ ಅಭ್ಯಂತರವಿಲ್ಲ."

"ನಿಜ. ತಮಗೂ ಬೇರೆಲ್ಲಿಯಾದರೂ ಹೋಗುವ ಕೆಲಸವಿರಬಹುದು...."

"ಇಲ್ಲ, ನನಗೇನೂ ಕೆಲಸವಿಲ್ಲ, ಮನೆಗೆ ಹೊರಟಿದೇನೆ. ಬರುವುದಾದರೆ ಬನ್ನಿ."

"ತಮಗೆ ಈಗಾಗಲೇ ಸಾಕಷ್ಟು ದಣಿವಾಗಿರಬೇಕು."

"ಮಾತನಾಡಿದರೆ, ಮಾತಿನಲ್ಲಿ ಆ ದಣಿವು ಮರೆತುಹೋಗಬಹುದು. ಬನ್ನಿ, ಬೇಗ ಇಲ್ಲಿಂದ ಜಾಗ ಬಿಡೋಣ. ಬೇರೆ ಏನಾದರೂ ಸುದ್ದಿ ಬಂದರೆ ಇಲ್ಲೇ ಇರಬೇಕಾಗಿ ಬಂದೀತು."

—ಎಂದರು. ನಾನು ಅದಕ್ಕೆ ಪ್ರತ್ಯುತ್ತರ ಕೊಡದೆ ಕಾರಿನಲ್ಲಿ ಹತ್ತಿ ಅವರ ಪಕ್ಕದಲ್ಲಿ ಕುಳಿತೆ. ಡಾಕ್ಟರು ಸಿಗರೇಟು ಹೊತ್ತಿಸಿ ಕಾರು ನಡೆಸಿದರು. ದಾರಿಯಲ್ಲಿ ಹೆಚ್ಚು ಮಾತನಾಡಲಿಲ್ಲ, ಕಾಫೀ ಬಾರ್‌ನಲ್ಲಿ ಕಾಫಿ ಕುಡಿಯುವಾಗಲೂ ಲೋಕಾಭಿರಾಮವಾಗಿ ಒಂದೆರಡು ಮಾತು ಕೇಳಿದರೇ ವಿನಾ, ಹೆಚ್ಚಿನ ವಿಷಯವನ್ನೇನೂ ಪ್ರಸ್ತಾಪಮಾಡಲಿಲ್ಲ. ಕಾಫಿ ಮುಗಿಸಿ ಒಂಟಿ ಕೊಪ್ಪಲಿನಲ್ಲಿದ್ದ ಅವರ ಮನೆಯತ್ತ ಹೊರಟೆವು.

ಡಾಕ್ಟರ ಮನೆಯ ಬಾಗಿಲಿನಲ್ಲೇ ಅವರ ಪತ್ನಿ ಅವರಿಗಾಗಿ ಕಾದು ನಿಂತಿದ್ದರು. ಕಾರು ಕಾಂಪೌಂಡಿನ ಬಾಗಿಲ ಬಳಿ ಬಂದಾಗ ಅವರೇ ಅದರ ಬಾಗಿಲು ತೆಗೆದರು. ಕಾರು ಮನೆಯ ಮುಂದಿನ ಪೋರ್ಟಿಕೋದಲ್ಲಿ ನಿಂತಾಗ ಡಾಕ್ಟರ್ ತಮ್ಮ ಪತ್ನಿಗೆ—

"ಕುಸುಮಾ, ಕಾರನ್ನು ನೀನೇ ಗ್ಯಾರೇಜಿನಲ್ಲಿ ಬಿಟ್ಟು ಬಾ"

—ಎಂದು ಹೇಳಿ, ನನ್ನತ್ತ ತಿರುಗಿ—

"ಬನ್ನಿ ರಾಜಶೇಖರ್. ಕುಳಿತುಕೊಳ್ಳಿ. ಮುಖ ತೊಳೆದುಕೊಂಡು ಬಟ್ಟೆ ಬದಲಿಸಿ ಬರುತ್ತೇನೆ."

—ಎಂದು ನುಡಿದು ಒಳಗೆ ಹೋದರು. ನಾನು ವರಾಂಡಾದಲ್ಲಿನ

ಮೆತ್ತೆ ಹಾಕಿದ ಚಿತ್ತದ ಕುರ್ಚಿಯಲ್ಲಿ, ಅವರು ಬರುವುದನ್ನೇ ಕಾಯುತ್ತಾ ಕುಳಿತೆ. ಸ್ವಲ್ಪಹೊತ್ತಿನಲ್ಲೇ ಡಾಕ್ಟರು ಸೂಟು ಬದಲಿಸಿ, ಕಚ್ಚೆ ಪಂಚೆ, ಸಿಲ್ಕ್ ಜುಬ್ಬಾ ಧರಿಸಿ ಸಿಗರೇಟ್ ಹೊತ್ತಿಸಿಕೊಂಡೇ ಹೊರಗೆ ಬಂದು, ನನ್ನ ಬದಿಯಲ್ಲಿದ್ದ ಈಸಿ ಛೇರಿನಲ್ಲಿ ಮೈಚಾಚಿ ಕುಳಿತರು. ಅವರೇ ಮಾತನ್ನು ಆರಂಭಿಸಲಿ ಎಂದು ನಾನೂ ಸುಮ್ಮನೆ ಕುಳಿತಿದ್ದೆ ಒಂದೆರಡು ನಿಮಿಷದಲ್ಲೇ ಡಾಕ್ಟರ ಪತ್ನಿ ಒಂದು ಪ್ಲೇಟಿನಲ್ಲಿ ಬಿಸ್ಕತ್ತು, ಎರಡು ಕಪ್ಪುಗಳಲ್ಲಿ ಕಾಫಿ ತಂದಿಟ್ಟು ಹೋಗುವಾಗ, ಅವರಿಗೆ ಡಾಕ್ಟರು,—

" ನೀನೂ ನಿನ್ನ ಕಾಫಿಯನ್ನು ಇಲ್ಲೇ ತೆಗೆದುಕೊಂಡು ಬಾ ಕುಸುಮಾ. ನಾವಾರು ಪಾಲಿಗೆ ಬರುವುದಿಲ್ಲ. ಅಂದ ಹಾಗೆ ಇವರ ಪರಿಚಯ ಮಾಡಿಸಿ ಕೊಡಲಿಲ್ಲ. ಇವರು ರಾಜಶೇಖರ್ ಎಂತ. ಈ ವರ್ಷ ಮೆಡಿಕಲ್ ಕಾಲೇಜಿಗೆ ಬಂದಿದಾರೆ. ಇವರು ನನ್ನ ಪತ್ನಿ ಕುಸುಮಾ "

—ಎಂದು ನಮ್ಮೀರ್ವರಿಗೂ ಪರಸ್ಪರ ಪರಿಚಯ ಮಾಡಿಕೊಟ್ಟರು. ಡಾಕ್ಟರ ಪತ್ನಿ ನನಗೆ ವಂದಿಸಿ, ತಮ್ಮ ಕಾಫಿ ತರಲು ಒಳಗೆಹೋಗಿ ತಾವೂ ಕಾಫಿಯನ್ನು ತಂದು ನಮ್ಮ ಜೊತೆ ಸೇರಿದರು. ಕಾಫಿ ಮುಗಿಯುವವರೆಗೂ ಸುಮ್ಮನಿದ್ದು, ಬಳಿಕ ಡಾಕ್ಟರು ಆರಿಹೋಗಿದ್ದ ಸಿಗರೇಟನ್ನು ಆಷ್‌ಟ್ರೇಯಲ್ಲಿ ತಿಕ್ಕಿ ಮತ್ತೊಂದನ್ನು ಹೊತ್ತಿಸಿಕೊಂಡು, ಒಂದು ಗಳಿಗೆ ಮಾತು ಹೇಗೆ ಆರಂಭಿಸಬೇಕೋ ಏನೋ ಎಂದು ಯೋಚಿಸಿ ಬಳಿಕ ನನ್ನ ಕಡೆ ನೋಡದೆ ಗಾಳಿಯಾಡದ ವರಾಂಡದಲ್ಲಿ ನಿಧಾನವಾಗಿ ಛಾವಣಿಯತ್ತ ತೇಲಿ ಹೋಗುತ್ತಿದ್ದ ಸಿಗರೇಟು ಹೊಗೆಯ ವರ್ತುಲಗಳನ್ನು ನೋಡುತ್ತಾ ಅದನ್ನೇ ಮಾತನಾಡಿಸು ವಂತೆ ಕೇಳಿದರು—

" ನೀವು ವೈದ್ಯ ವೃತ್ತಿ ಕಲಿಯಲು ಏಕೆ ಬಂದಿರಿ ರಾಜಶೇಖರ್ ? "

" ನಿಮ್ಮ ಹಾಗೇ ಕೈ ಹಿಡಿದವರನ್ನು ಗೋಳಾಡಿಸಲಿಕ್ಕೆ ಇರಬೇಕು "

—ಎಂದರು ಡಾಕ್ಟರ ಪತ್ನಿ, ಅವರ ಪ್ರಶ್ನೆಗೆ ನನ್ನ ಬದಲು ತಾವೇ, ನಗುತ್ತಾ ಉತ್ತರವಿತ್ತು.

" ಹುಡುಗಾಟ ಮಾಡಬೇಡ ಕುಸುಮಾ. ಅವರನ್ನು ನಾನು ತಮಾಷೆಗೆ ಈ ಪ್ರಶ್ನೆ ಕೇಳುತ್ತಿಲ್ಲ."

" ಹಾಗೇನು. ಹಾಗಾದರೆ ಗಂಭೀರ ಚರ್ಚೆ ಮುಗಿಯಲಿ. ಬಳಿಕ ನಾನು ಬರುತ್ತೇನೆ."

—ಎಂದರು ಕೊಂಚ ಅಸಮಾಧಾನದ ಧ್ವನಿಯಲ್ಲಿ ಡಾಕ್ಟರ ಪತ್ನಿ.

" ನಿನ್ನ ಮನಸ್ಸು ನೋಯಿಸಲು ಹಾಗೆ ಹೇಳಲಿಲ್ಲ ಡಾರ್ಲಿಂಗ್. ಆದರೆ

ಇವರು ಎಲ್ಲಾ ಬಿಟ್ಟು ಈ ಶಿಕ್ಷಣಕ್ಕೆ ಏಕೆ ಬಂದರೆಂದು ತಿಳಿದುಕೊಳ್ಳ ಬೇಕೆಂದು ನನಗೆ ಅಭಿಲಾಷೆಯಿದೆ. ಹೇಳಿ ರಾಜಶೇಖರ್ ?"

"ಬೇರೇನು ಉದ್ದೇಶ ಸಾರ್, ಡಾಕ್ಟರಾಗಬೇಕೆಂದು."

—ಅದುವರೆಗೂ ಅವರ ಸಂಭಾಷಣೆಯನ್ನಾಲಿಸುತ್ತಾ ಸುಮ್ಮನೆ ಕುಳಿತಿದ್ದ ನಾನೇ ಈ ಬಾರಿ ಅವರಿಗೆ ಉತ್ತರವಿತ್ತೆ.

"ಉಳಿದ ವೃತ್ತಿಗಳಿಗಿಂತ ಈ ವೃತ್ತಿಯಲ್ಲಿ ಚೆನ್ನಾಗಿ ಹಣಗಳಿಸಬಹುದು. ಅಲ್ಲವೇ ?"

—ಎಂದರು ತಟಕ್ಕನೆ ನನ್ನ ಮೊಗದತ್ತ ಚುರುಕಾಗಿ ನೋಡಿ. ಆ ಮಾತು ಏಕೋ ಬಿರುಸಾಗಿತ್ತು. ಅವರ ಪ್ರಶ್ನೆಗೆ ಏನು ಉತ್ತರಕೊಡಬೇಕೆಂದು ನನಗೆ ತಟಕ್ಕನೆ ತೋಚಲಿಲ್ಲ, ಸುಮ್ಮನಿದ್ದೆ ಅವರೇ ಕೊಂಚ ಕಾವೇರಿದ ಧ್ವನಿಯಲ್ಲಿ ಹೇಳಿದರು—

"ಏಕೆ ಸುಮ್ಮನಾದಿರಿ. ನಾನು ಹೇಳಿದುದು ಸತ್ಯ ಅಲ್ಲವೇ ? ಈ ಸಂಜೆ ನೀವೇ ನೋಡಲಿಲ್ಲವೇ – ಆ ಮೂರ್ಖ ನಾನು ಕೇಳದೆಯೇ ನೋಟಿನ ಕಂತೆ ಹೊರಗೆ ತೆಗೆದುದನ್ನು. ನಿಜ, ರಾಜಶೇಖರ್, ರೋಗದ ಭೀತಿಗೆ ಬಲಿಯಾದವರು, ಎಷ್ಟು ಹಣ ಕೇಳಿದರೂ ಕೊಡಲು ಸಿದ್ಧವಾಗಿ ಬರುತ್ತಾರೆ ಸ್ವಾಭಾವಿಕವಾಗಿಯೇ ಅವರಲ್ಲಿರುವ ಭೀತಿಗೆ ಮೆಟೀರಿಯಾ ಮೆಡಿಕಾದಲ್ಲಿರುವ ದೊಡ್ಡ ದೊಡ್ಡ ಹೆಸರಿಟ್ಟರೆ ಹಣದ ಮಳೆ ಕರೆಯಲೇ ಸಿದ್ಧವಾಗುತ್ತಾರೆ. ವರ್ಷದಲ್ಲಿ ಕಾರಿಡಬಹುದು. ಎರಡು ವರ್ಷದಲ್ಲಿ ಮನೆ ಕಟ್ಟಬಹುದು. ಈ ವೃತ್ತಿ ಬಂಗಾರದ ಮೊಟ್ಟೆ ಇಡುವ ಬಾತುಕೋಳಿ ಅಲ್ಲವೇ ? ಅದಕ್ಕೆಂದೇ ತಾನೇ ಇಲ್ಲಿಗೆ ಬಂದದ್ದು."

—ಆ ಮಾತನಾಡುತ್ತಾ ಆಡುತ್ತಾ, ಅದುವರೆಗೆ ಅವರ ಮುಖದ ಮೇಲಿದ್ದ ಸೌಮ್ಯಕಳೆ ಮಾಯವಾಗಿ ಏನೋ ಒಂದು ಬಗೆಯ ಬಿರಸುತನ ಮೂಡಿತು. ಮಾತನಾಡುವಾಗ ನನ್ನತ್ತ ತಿರುಗಿದ ಕಣ್ಣುಗಳು ಏಕೋ ಉಗ್ರವಾಗಿದ್ದಂತಿತ್ತು. ಆ ಮಾತು ಕೇಳುತ್ತಾ ಬಿರುಸಾದ ಮಳೆಯಲ್ಲಿ ಅಸಹಾಯಕ ಪರಿಸ್ಥಿತಿಯಲ್ಲಿ ಸಿಕ್ಕಿದವನಂತಾಯಿತು ನನ್ನ ಅವಸ್ಥೆ. ಏನೂ ಮಾತನಾಡಲಾಗದೆ ಸುಮ್ಮನೆ ಅವರ ಮುಖವನ್ನೇ ನೋಡುತ್ತಾ ಕುಳಿತಿದ್ದೆ

"ಸತ್ಯವನ್ನು ನುಡಿಯಲು ಬಾಯಿ ಬರುವುದಿಲ್ಲವೇ ರಾಜಶೇಖರ್. ಸತ್ಯವನ್ನು ಒಪ್ಪಿಕೊಳ್ಳಲು ಸಂಕೋಚವೆನಿಸುತ್ತಿದ್ದರೆ, ಉಳಿದವರ ಹಾಗೇ ನೀವೂ ಬರಡು ಆದರ್ಶದ ಬುರುಡೆ ಉರುಳಿಸಿ. ಲೋಕೋದ್ಧಾರ ಮಾಡಲು ಇಲ್ಲಿಗೆ ಬಂದೆ ಎಂದು ಹೇಳಿ. ಅಂಥಮಾತು ಕೇಳಿ ಕೇಳಿ ನನ್ನ ಕಿವಿ ಕಿವು

ಡಾಗಿದೆ. ಆದುದರಿಂದ ಏನೂ ಹೆದರದೆ ಹೇಳಿ."

ಅವರು ಒಂದೊಂದು ಮಾತನ್ನು ಆಡಿದ ರೀತಿಯೂ ಮುಖಕ್ಕೆ ಹೊಡೆಯುವಂತಿತ್ತು, ಪುಂಖಾನುಪುಂಖವಾಗಿ ಬಂದ ಆ ವಾಗ್ಬಾಣಗಳ ಇದಿರು 'ನೀವು ಎರಡನೆ ಬಾರಿ ಹೇಳಿದುದೇ ನನ್ನ ಉದ್ದೇಶ' ಎಂದು ಹೇಳಲೂ ನನಗೆ ಬಾಯಿ ಬರಲಿಲ್ಲ. ಅಲ್ಲದೆ ಅವರ ಅನಿರೀಕ್ಷಿತ ಉಗ್ರವರ್ತನೆ ನನ್ನ ಮಿದುಳನ್ನು ಗೊಂದಲದಲ್ಲಿ ಕೆಡವಿತ್ತು. ತಲೆ ಬಾಗಿಸಿ ಸುಮ್ಮನೆ ಕುಳಿತಿದ್ದೆ. ಪುಣ್ಯಾತ್ಮಗಿತ್ತಿ – ಡಾಕ್ಟರ ಪತ್ನಿ ನನ್ನ ನೆರವಿಗೆ ಬರದಿದ್ದರೆ, ಆ ಮಾತಿನ ಬೆಂಕಿಯ ಮಳೆಯಲ್ಲಿ ನಾನು ಮೇಣದ ಬೊಂಬೆಯಂತೆ ಕರಗಿಯೇ ಹೋಗುತ್ತಿದ್ದೆನೋ ಏನೋ. ನಾನು ಸುಮ್ಮನೆ ಕುಳಿತಾಗ ಅವರೇ ಡಾಕ್ಟರನ್ನು ಕೇಳಿದರು—

" ನಾನು ನಿಮಗೆ ಕೊಟ್ಟದ್ದು ಕಾಫಿಯೇ ಅಲ್ಲವೇ ? "

ಅನಿರೀಕ್ಷಿತವಾದ ಆ ಪ್ರಶ್ನೆಯನ್ನು ಕೇಳಿ ಡಾಕ್ಟರರೂ ಒಂದುಗಳಿಗೆ ತಬ್ಬಿಬ್ಬಲಾದಂತಿತ್ತು.

" ನಿಜ ಕಾಫಿಯೇ. ಏಕೆ ?"

" ಅಲ್ಲ – ನಿಮ್ಮ ಮಾತಿನ ರೀತಿ ನೋಡಿದರೆ ಕಾಫಿಯ ಬದಲು ವ್ಹಿಸ್ಕಿ ಕೊಟ್ಟೆನೇನೋ ಎಂದು ಗಾಬರಿಯಾಯಿತು. ಸಧ್ಯ ಹಾಗೇನೂ ಆಗಲಿಲ್ಲವಲ್ಲ. ನೋಡಿ ಮಿ. ರಾಜಶೇಖರ್ ಅವರಿಗೆ ನಾನು ಕೊಟ್ಟದ್ದು ಕಾಫಿಯೇ. ಆದ್ದರಿಂದ ಧೈರ್ಯವಾಗಿ ಅವರು ಕೇಳಿದ ಪ್ರಶ್ನೆಗೆ ಉತ್ತರ ಕೊಡಿ."

—ಎಂದರಾಕೆ ಡಾಕ್ಟರತ್ತ ನೋಡುತ್ತಾ. ಆಕೆಯ ನೋಟದ ಸೋಂಕಿನಿಂದೆಂಬಂತೆ, ಬಿರುಸಾಗಿದ್ದ ಡಾಕ್ಟರರ ಮೋರೆಯು ಕೊಂಚ ಮೃದುವಾಯಿತು ; ಅದರೊಂದಿಗೆ ಮಾತೂ.

" ಸಾರಿ, ರಾಜಶೇಖರ್. ನನ್ನ ಮಾತು ಕೊಂಚ ಗಡುಸಾಯಿತೇನೋ. ಒಮ್ಮೊಮ್ಮೆ ನನಗೆ ಹೀಗೆ ಮೈ ಮರೆವಾಗುವುದುಂಟು. ಎಚ್ಚರಿಸಿದ್ದಕ್ಕೆ ವಂದನೆಗಳು ಕುಸುಮಾ. ನನ್ನ ಪ್ರಶ್ನೆಯ ರೀತಿ ಕೇಳಿ ಗಾಬರಿಯಾಗಬೇಡಿ ರಾಜಶೇಖರ್. ನಿರ್ಭಯವಾಗಿ ನಿಮಗೆ ಹೇಳಬೇಕೆನಿಸಿದುದನ್ನು ಹೇಳಿ" ಎಂದರು.

ಆ ಮಾತು ಕೇಳಿ ಬಿಗಿದ ವಾತಾವರಣ ಸಡಿಲವಾಗಿ, ನನ್ನ ನಾಲಗೆಯಲ್ಲಿ ನೀರಾಡಿತು. ಧೈರ್ಯ ತಂದುಕೊಂಡು ಹೇಳಿದೆ—

" ನಾನೇನೋ ನಿಜವನ್ನೇ ಹೇಳುತ್ತೇನೆ ಸಾರ್. ನಂಬುವುದು ಬಿಡುವುದು ನಿಮಗೆ ಸೇರಿದ್ದು. ಆದರೆ ತಮಗೆ ಸುಳ್ಳು ಹೇಳಿ ಮೋಸಗೊಳಿಸುವ ಇಛ್ಛೆ ನನಗಿಲ್ಲ."

"ಸುಳ್ಳಿನಂತೆ ಸತ್ಯವೂ ಮೋಸಗಳಿಸಬಹುದು ರಾಜಶೇಖರ್. ಆದ್ದರಿಂದ ನಿಮಗೆ ಸರಿ ಕಂಡದ್ದನ್ನು ಹೇಳಿ."

ಅವರು ಆಡಿದ ಮಾತನ್ನು ಕೇಳಿ ನಾನು ಸತ್ಯ ಹೇಳಿದರೂ, ಅವರು ನಂಬದಿರಬಹುದೇನೋ ಎಂದು ತೋರಿತು. ಹಾಗೇ ಡಾಕ್ಟರ ಬಳಿಯಲ್ಲಿ ಕುಳಿತ ಅವರ ಪತ್ನಿಯ ಮುಖ ನೋಡಿದೆ. ಅವರ ಮೊಗದಲ್ಲಿ ಮಿನುಗಿದ ನಸುನಗೆ ನಾನು ಬಯಸಿದ ಅಭಯದಾನ ನೀಡಿತು. ಅದನ್ನು ನಂಬಿ, ಇಂಟರ್‌ಮೀಡಿಯಟ್ ಕಾಲೇಜಿನಲ್ಲಿ ನಿನ್ನ ಪರಿಚಯವಾದುದು, ನಂತರದ ಬೆಳವಣಿಗೆ, ನಿನ್ನ ಕನಸು, ಅದನ್ನು ನೀನು ಸಾದಿಸಿಕೊಳ್ಳಲಾಗದ ವಿಷಾದ ವೃತ್ತಾಂತ, ಬಳಿಕ ನಿನ್ನ ಕನಸನ್ನು ನನ್ನದಾಗಿ ಮಾಡಿಕೊಳ್ಳುವ ನಿರ್ಧಾರ ಮಾಡಿದುದು ಎಲ್ಲವನ್ನೂ ಹೇಳಿದೆ. ನಿನ್ನ ಕಥೆಯನ್ನು ಕೇಳಿ ಡಾಕ್ಟರರೂ, ಅವರ ಮನೆಯವರೂ ತುಂಬಾ ಮರುಗಿದರು. ಪರಕೀಯರೊಬ್ಬರ ಮುಂದೆ ನಿನ್ನ ಖಾಸಗಿ ವಿಚಾರವನ್ನು ಹೇಳಿದುದಕ್ಕೆ ನನ್ನನ್ನು ಕ್ಷಮಿಸು. ಆಗಿನ ಪರಿಸ್ಥಿತಿಯಲ್ಲಿ ನಾನು ಅದೆಲ್ಲವನ್ನೂ ಹೇಳದಿರಲು ಸಾಧ್ಯವೇ ಇರಲಿಲ್ಲ. ಅಂತೂ ನಾನು ಹೇಳಿದುದನ್ನು ಕೇಳಿ ಡಾಕ್ಟರಿಗೆ ಏನೋ ತುಂಬಾ ಸಮಾಧಾನವಾದಂತಾಯಿತು. ನನ್ನ ಮಾತೆಲ್ಲವೂ ಮುಗಿದ ಮೇಲೆ ಒಂದು ಗಳಿಗೆ ಸುಮ್ಮನಿದ್ದು—

"ಇದೆಲ್ಲವನ್ನೂ ನಿಮ್ಮನ್ನು ಕೇಳಲು ನನಗೇನೂ ಅಧಿಕಾರವಿಲ್ಲ. ಆದರೆ ಕೇಳಿದ ಬಳಿಕ ನನ್ನ ಮನಸ್ಸಿನಲ್ಲಿದ್ದ ದೊಡ್ಡ ಕೊರಗು ಬಹು ಭಾಗ ನಿವಾರಣೆಯಾಯಿತು" ಎಂದರು

"ಏಕೆ ಸಾರ್? ನನ್ನಿಂದೇನಾದರೂ ತಪ್ಪಾಗಿತ್ತೆ? ಅಥವಾ ನನ್ನ ವಿಷಯವಾಗಿ ತಮಗೆ ಯಾರೇನಾದರೂ ಹೇಳಿದರೆ?"

—ಎಂದು ಕೇಳಿದೆ.

"ನಿಮಗೆ ಸೀಟು ಸಿಕ್ಕಿದ್ದು ಹೇಗೆ ಗೊತ್ತೆ? ನಿಮ್ಮ ಬುದ್ಧಿಗಾಗಿಯಾಗಲಿ, ಅರ್ಹತೆಗಾಗಿಯಾಗಲಿ ಅಲ್ಲ – ಕೋಮುವಾರು ಕಾರಣಕ್ಕಾಗಿ. ಸಮಿತಿಯ ಸದಸ್ಯರೊಬ್ಬರು ಕೋಮುವಾರು ಕಾರಣವೆತ್ತಿಕೊಂಡು ನಿಮ್ಮ ಪರವಾಗಿ ವಾದಿಸಿದುದರಿಂದ ನಿಮಗೆ ಸೀಟು ಸಿಕ್ಕಿತು. ಅದರ ಪರಿಣಾಮವಾಗಿ ನಿಮಗಿಂತ ಹೆಚ್ಚಿನ ಅರ್ಹತೆಯುಳ್ಳವರಿಗೆ ಸಿಗಬೇಕಾದದ್ದು ತಪ್ಪಿಹೋಯಿತು. ನಿಮ್ಮ ಪರವಾಗಿ ವಾದ ಮಾಡಿದವರ ಮಾತು ಕೇಳಿ ನಿಮ್ಮ ತೂಕವೂ ಅಷ್ಟೆಯೋ ಏನೋ ಎಂದುಕೊಂಡಿದ್ದೆ. ಅದಕ್ಕೇ ಕೆಲವು ಕಟುವಾದ ಮಾತುಗಳನ್ನಾಡಿದೆ, ಕ್ಷಮಿಸಿ. ಆದರೂ ನಿಮಗೆ ಒಂದು ಮಾತು ಹೇಳುತ್ತೇನೆ ಕೇಳಿ

ರಾಜಶೇಖರ್. ನೀವು ಬಂದಿರುವುದು ಪರಮಪವಿತ್ರವಾದ ವೃತ್ತಿಯೊಂದಕ್ಕೆ ತರಬೇತನ್ನು ಪಡೆಯಲು, ಸಾವು ಸುಳಿಯುವಲ್ಲಿ ಬಾಳನ್ನು ಬೆಳಗಿಸುವುದು, ನಿರಾಶೆಯ ಅಂಧಕಾರವಿದ್ದಲ್ಲಿ ಆಸೆಯ ಬೆಳಕು ಹೊತ್ತಿಸುವುದು, ಕಣ್ಣೀರು ಹರಿವೆಡೆಯಲ್ಲಿ ನಗೆಯಮೃತ ತುಳುಕಿಸುವುದು, ಜಡವೆ ಆವರಿಸುತ್ತಿರುವಲ್ಲಿ ಚೇತನವನ್ನು ತುಳುಕಿಸುವುದು ನಿಮ್ಮ ಕರ್ತವ್ಯ. ಕೋಟ್ಯಾಂತರ ರೂಪ ಗಳಲ್ಲಿ ಜೀವವನ್ನು ಕಬಳಿಸಲು ಯತ್ನಿಸುತ್ತಿರುವ ಸಾವಿನೊಂದಿಗೆ ಹೋರಾ ಡುವ ಸೈನಿಕರು ನೀವು. ಈ ಯೋಧ ಪಡೆಯಲ್ಲಿ ಸೇರಲು ಕೋಮುವಾರು ಕಾರಣ ಎಂದೂ ಅರ್ಹತೆಯಾಗಲಾರದು. ಈ ರಂಗದಲ್ಲಿ ಕೋಮುವಾರು ಭಾವನೆಯನ್ನು ಬಿತ್ತುವವರು ನಿಜವಾಗಿಯೂ ನಮ್ಮ ಹೊಣಗಾರಿಕೆಯನ್ನರಿ ತವರಲ್ಲ; ನಿರ್ದಾಕ್ಷಿಣ್ಯವಾಗಿ ಹೇಳಬೇಕೆಂದರೆ ಜನದ್ರೋಹಿಗಳು. ದೇವ ಸ್ಥಾನಕ್ಕೆ ಹೋಗುವಾಗ ಪಾದರಕ್ಷೆಗಳನ್ನು ಹೊರಗಿಟ್ಟು, ಭಕ್ತಿಯೊಂದನ್ನು ಮಾತ್ರ ಜೊತೆಗಿಟ್ಟು ಬರುವವರಂತೆ, ಈ ರಂಗಕ್ಕೆ ಬರುವವರು ಉಳಿದೆಲ್ಲ ಭಾವನೆಗಳನ್ನೂ ಆಚೆಗೆ ತಳ್ಳಿ, ಸೇವೆಯೊಂದನ್ನು ಮಾತ್ರವೇ ದೃಷ್ಟಿಯಲ್ಲಿಟ್ಟು ಕೊಂಡು ಬರಬೇಕು. ನಿಮ್ಮ ಹೃದಯದಲ್ಲೂ ಏನಾದರೂ ಕೋಮುವಾರ ಕಸಿರು ಉಳಿದಿದ್ದರೆ, ಈಗಲೇ ಅದನ್ನು ತೊಳೆದುಬಿಡಿ. ಆದರಿಂದ ನೀವು ಉಳಿಯುವುದಿಲ್ಲ, ಲೋಕವೂ ಉಳಿಯುವುದಿಲ್ಲ. ಕಾಲ, ಅಂತಸ್ತು, ವರ್ಣ ಯಾವ ಭೇದ ಭಾವನೆಯೂ ಇಲ್ಲದೆ ಅಖಂಡ ಮಾನವ ಕೋಟಿಯ ಸೇವೆಯೇ ನಮ್ಮ ಗುರಿಯಾಗಬೇಕು. ನೀವು ಆ ದಾರಿಯಲ್ಲೇ ನಡೆದರೆ ನನಗೆ ತುಂಬಾ ಸಂತೋಷವಾಗುತ್ತದೆ."

"ಇದು ನನ್ನ ಭಾವನೆ ಎಂದಲ್ಲ ಸಾರ್. ಆದರೂ ಮಾತು ಬಂದುದ ಕ್ಕಾಗಿ ಹೇಳುತ್ತೇನೆ ಕೆಲವು ಕಾಲ ತಮ್ಮ ಕೋಮಿನ ಅನರ್ಹತೆಯಿಂದಾ ಗಿಯೇ ತುಳಿಯಲ್ಪಟ್ಟ ಜನ, ಇಂದು ಆ ಹೆಸರಿನಲ್ಲಿ ತಮ್ಮ ಹಿತ ಕಾಯ್ದು ಕೊಳ್ಳಲು ಯತ್ನಿಸುವುದು ತಪ್ಪೇ?"

"ನಿಜ. ಒಂದುಕಾಲಕ್ಕೆ ಒಂದು ಕೋಮು ಕೆಲವು ಬೇರೆ ಕೋಮು ಗಳನ್ನು ತುಳಿಯಿತು. ಆದರೆ ಇಂದು ಅದು ಅವರ ವಿಷಪರಿಣಾಮವನ್ನು ಅನುಭವಿಸುತ್ತಿಲ್ಲವೇ? ಕೋಮುವಾರು ಭಾವನೆಯೆನ್ನುವುದೊಂದು ಭಯಂ ಕರ ವಿಷವೃತ್ತ ರಾಜಶೇಖರ್. ಕ್ರಾಂತಿ ತನ್ನ ಮಕ್ಕಳನ್ನೇ ತಿನ್ನುತ್ತದೆ ಎನ್ನು ತ್ತಾರೆ. ಅದು ಅಹುದೋ ಅಲ್ಲವೋ. ಆದರೆ ಈ ಕೋಮುವಾರು ಶಕ್ತಿ ತನ್ನನ್ನು ಹಡೆದವರನ್ನೇ ಕಬಳಿಸುವುದು ಖಂಡಿತ. ಇಂದಿನ ಸಂಕುಚಿತ ದೃಷ್ಟಿಯಲ್ಲಿ ನಾವು ಹಾಲೆಂದುಕೊಂಡು ಕುಡಿದುದೇ ಮುಂದೆ ಹಾಲಾಹಲ

ವಾಗಿ ಪರಿಣಮಿಸುವುದು ಖಂಡಿತ. ಸಾವಿನಂತೆ ರೋಗವೂ ಸರ್ವವ್ಯಾಪಿ ; ಯಾವೊಂದು ಗುಂಪಿಗೂ ಮೀರಿಸಲಾದುದಲ್ಲ. ಎಂತಲೇ ಚಿಕಿತ್ಸಕನಲ್ಲೂ ಸರ್ವ ಸಮತಾದೃಷ್ಟಿ ಬರಬೇಕು. ಅಖಂಡ ಮಾನವ ಕೋಟಿಯ ಪ್ರೇಮವೊಂದೇ, ಅವರ ಕ್ಷೇಮಕ್ಕಾಗಿ ದುಡಿವ ಫಲವೊಂದೇ ಈ ವೃತ್ತಿಗೆ ರಹದಾರಿ. ಆ ಅರ್ಹತೆಯನ್ನು ಗಳಿಸಿಕೊಳ್ಳಿ. ಈ ಮಾತನ್ನೇ ನಿಮಗೆ ಹೇಳಬೇಕೆಂದು ನೋಡಲು ಬಯಸಿದೆ. ಹೇಳಬೇಕೆಂದಿದ್ದುದನ್ನು ಹೇಳಿಯೂ ಆಯಿತು. ಮುಂದಿನದು ನಿಮ್ಮ ಇಷ್ಟ. ನನ್ನ ಮಾತನ್ನು ನೆನಪಿನಲ್ಲಿಟ್ಟುಕೊಳ್ಳಬೇಕು ಎನಿಸಿದರೆ ಇಟ್ಟುಕೊಳ್ಳಿ. ಇಲ್ಲವಾದರೆ ಗಾಳಿಗೆ ತೂರಿಬಿಡಿ "

—ಎಂದರು ಡಾಕ್ಟರು ತಮ್ಮ ಮಾತು ಮುಗಿಸಿ.

" ತಾವು ಇಂದು ಆಡಿದ ಮಾತನ್ನು ನಾನು ಎಂದೆಂದಿಗೂ ಮರೆಯುವುದಿಲ್ಲ. ಇಂದು ನೀವು ಹೇಳಿದ ಮಾತನ್ನು ನಡೆಸುವ ಬಲ ನನ್ನಲ್ಲಿ ಬರಲಿ ಎಂದು ಆಶೀರ್ವದಿಸಿ."

" ನಿಮ್ಮ ಶ್ರದ್ಧೆಯೇ ಸಾಕು, ಯಾರ ಆರ್ಶಿವಾರ್ದವೂ ಬೇಡ."

" ಹಾಗುಂಟೇ ನೀವು ನಮ್ಮ ಗುರುಗಳು."

" ಊಹೂ, ಸದ್ಯಕ್ಕೆ ನಾನು ಗುರುವಲ್ಲ. ನಾನು ನಿಮ್ಮ ಗುರುವಾಗಲು ಇನ್ನೂ ಎರಡು ವರ್ಷ ಕಳೆಯಬೇಕು. ಈಗ ನಾನು ಬರೀ ವಾರ್ಡನ್; ಮಂದೆಯನ್ನು ಕಾಯುವ ಕುರುಬ."

" ಹಾಗಲ್ಲ ಸಾರ್. ಈ ಊರಿನಲ್ಲಿ ನನಗೆ ದಾರಿತೋರುವ ಹಿರಿಯರು ಯಾರೂ ಇಲ್ಲವೆಂದಿದ್ದೆ. ನನ್ನ ಪಾಲಿಗೆ ನೀವು ದೀಪಸ್ತಂಭವಾಗಿ ದೊರೆಕಿದಿರಿ. ಇದೇ ವಿಶ್ವಾಸವನ್ನೇ ಕಡೆಯವರೆಗೂ ನನ್ನಲ್ಲಿ ತೋರಬೇಕು."

" ಕುದುರೆಯೇ ' ಹೂ, ಬಾ, ಸವಾರಿ ಮಾಡು ' ಎಂದು ಬೆನ್ನುಚಾಚಿದರೆ ಸವಾರಿ ಮಾಡಲು ಯಾರು ಬೇಡ ಎನ್ನುತ್ತಾರೆ. ಇಷ್ಟು ಸುಲಭವಾಗಿ ಲಗಾಮು ಕಂಡವರ ಕೈಗೆ ಕೊಡಬಾರದು "

—ಎಂದರು, ಅದುವರೆಗೂ ನಮ್ಮ ಮಾತನ್ನು ಸುಮ್ಮನೆ ಕುಳಿತು ಕೇಳುತ್ತಿದ್ದ ಡಾಕ್ಟರರ ಪತ್ನಿ.

" ಆ ಮಾತನ್ನು ಅವರ ಮದುವೆಯ ಕಾಲದಲ್ಲಿ ಎಚ್ಚರಿಕೆಯಾಗಿ ಹೇಳುವುದು ಒಳಿತಲ್ಲವೇ ? "

—ಡಾಕ್ಟರು ತಮ್ಮ ಪತ್ನಿಗೆ ಉತ್ತರ ಕೊಟ್ಟರು.

" ಪಾಪ ? ಡಾಕ್ಟರಾದವರ ಕೈ ಹಿಡಿಯಲು ಯಾವ ನಿರ್ಭಾಗ್ಯೆ ಕಾದಿದಾಳೋ. ಏಳೇಳು ಜನ್ಮಕ್ಕೂ ಆ ಪುಣ್ಯ ಬಯಸಬಾರದು. ಹೋಗಲಿ ಬಿಡಿ.

ಹೊಸಬರೆದುರು ನಿಮ್ಮ ಗುಟ್ಟನ್ನೆಲ್ಲಾ ಏಕೆ ಬಯಲು ಮಾಡಲಿ ? ನಿಮ್ಮ ಭಾಷಣ ಮುಗಿದಿದ್ದರೆ ಊಟಕ್ಕೇಳಿ. ಏನೋ ಪುಣ್ಯಕ್ಕೆ ಟೆಲಿಫೋನ್ ಬಾಯಿ ಮುಚ್ಚಿಕೊಂಡಿದೆ ಇಷ್ಟು ಹೊತ್ತಿನ ವರೆಗೂ."

" ಮಕ್ಕಳು ಬರಬೇಡವೇ ? ಎಲ್ಲಿ ಹೋದರು ಅವರು ? "

" ಈ ದಿನ ಫಸ್ಟ್ ಷೋ ಸಿನಿಮಾಕ್ಕೆ ಹೋಗುವ ಪ್ರೋಗ್ರಾಂ ಇದ್ದುದು ಮರೆತೇ ಹೋಯಿತೇನೋ ಡಾಕ್ಟರ್ ಸಾಹೇಬರಿಗೆ. ನೀವು ಹೀಗೆ ಕೈಕೊಡುತ್ತೀರಿ ಅಂತ ನನಗೆ ಗೊತ್ತಿತ್ತು. ಆದಕ್ಕೇ ಅವರಾದರೂ ಹೋಗಿ ಬರಲಿ ಎಂದು ಕಳಿಸಿದೆ."

" ಹೌದೇ ? ಮರತೇ ಹೋಗಿತ್ತು ಆ ವಿಷಯ. ಕ್ಷಮಿಸು ಕುಸುಮ್. ಇವತ್ತೇ ಕಡೆಯ ದಿನವಲ್ಲವೇ ' ಲಗನ್ ' ಚಿತ್ರಕ್ಕೆ ? "

" ಹೂಂ."

" ಹಾಗಾದರೆ ಬೇಗ ಬಡಿಸಲು ಹೇಳು. ಬೇಗ ಊಟ ಮಾಡಿಕೊಂಡು ಸೆಕೆಂಡ್ ಷೋಗೆ ಹೋಗಿ ಬರೋಣ."

" ಅದಾದರೂ ಖಂಡಿತವೇ ? "

" ನೋಡು ಯಾವಾಗಲೂ ಅಪನಂಬಿಕೆಯೇ ? ಊಟದ ಏರ್ಪಾಡು ಬೇಗ ಮಾಡುವುದು ನಿನ್ನ ಜವಾಬ್ದಾರಿ."

" ಹಾಗಾದರೆ ಏಳಿ. ಆ ಸಿದ್ಧತೆಯೇನು ಎರಡು ನಿಮಿಷದ ಕೆಲಸ."

—ಎಂದರು ಡಾಕ್ಟರ ಪತ್ನಿ. ಅವರು ಸಿನಿಮಾಕ್ಕೆ ಹೋಗುವ ಸಿದ್ಧತೆಯನ್ನರಿತು ನಾನೂ ಹಾಸ್ಟಲಿಗೆ ಹೊರಡಲು ಸಿದ್ಧವಾಗಿ–' ಅಪ್ಪಣೆಯಾದರೆ ನಾನು ಬರುತ್ತೇನೆ ' ಎಂದೆ

" ಊಹೂ, ನೀವು ಇಲ್ಲೇ ಊಟಮಾಡಿಕೊಂಡು ಹೋಗಿ "

—ಎಂದರು ಡಾಕ್ಟರ ಮಡದಿ.

" ನನಗೆ ಹಸಿವೇನೂ ಇಲ್ಲ. ಹಾಗೇ ಹಾಸ್ಟಲಿಗೇ ಹೋಗುತ್ತೇನೆ."

" ಏಕೆ ಅವರ ಭಾಷಣ ಕೇಳಿ ಹೊಟ್ಟೆ ತುಂಬಿತೇ ? ಅಥವಾ ನಮ್ಮ ಮನೆಯ ಅಡುಗೆಯೂ ಅವರ ಭಾಷಣದ ಹಾಗೆ ಇರಬಹುದೆಂದು ಹೆದರಿಕೆಯೇ. ಹಾಗೇನೂ ಇರುವುದಿಲ್ಲ ಏಳಿ. ಅವರನ್ನೂ ಕರೆದುಕೊಂಡು ಬನ್ನಿ "

—ಎಂದು ಕುಸುಮಾದೇವಿ ಒಳಕ್ಕೆ ಹೋದರು.

" ಏಳಿ ರಾಜಶೇಖರ್, ಇವಳು ಹೆಂಡತಿಯಲ್ಲ, ಹಿಟ್ಲರ್ "

—ಎಂದರು ಡಾಕ್ಟರು ನಗುತ್ತಾ. ಬೇರೆ ದಾರಿ ಕಾಣದೆ ನಾನೂ ಊಟಕ್ಕೆ ಸಿದ್ಧನಾದೆ.

ಊಟ ಮುಗಿದ ಬಳಿಕ ಡಾಕ್ಟರು ತಾವು ಸಿನಿಮಾಕ್ಕೆ ಹೋಗುವಾಗ ದಾರಿಯಲ್ಲೇ ನನ್ನನ್ನು ಹಾಸ್ಟಲ ಬಳಿ ಬಿಟ್ಟು ಹೋಗುವುದಾಗಿ ಹೇಳಿದುದರಿಂದ, ತಮ್ಮ ಪತ್ನಿ ಉಡುಪು ಧರಿಸಿ ಬರುವುದನ್ನೇ ಕಾಯುತ್ತಿದ್ದ ಡಾಕ್ಟರೊಂದಿಗೆ ನಾನೂ ವರಾಂಡಾದಲ್ಲಿ ಕುಳಿತಿದ್ದೆ. ಒಂದೆರಡು ನಿಮಿಷ ಹಾಗೆ ಕುಳಿತಿರ ಬಹುದು. ಅಷ್ಟರಲ್ಲೇ ಹಾಲ್‌ನಲ್ಲಿದ್ದ ಟೆಲಿಫೋನು ಕರೆಯಿತು. ಕೂಡಲೇ ಡಾಕ್ಟರು ಅದರ ಬಳಿಗೆ ಧಾವಿಸಿ, ಒಂದು ಘಳಿಗೆ ಮಾತಾಡಿ 'ಈಗ ಬಂದು ಬಿಟ್ಟೆ' ಎಂದು ಹೇಳಿ ಫೋನ್ ಕೆಳಗಿಟ್ಟರು. ಆ ವೇಳೆಗೆ ಸರಿಯಾಗಿ ಅವರ ಪತ್ನಿ ಉಡುಪು ಧರಿಸಿ, ಸಿನಿಮಾಕ್ಕೆ ಹೊರಡಲು ಸಿದ್ಧವಾಗಿ ಬಂದರು.

"ಕುಸುಂ, ನನ್ನ ಹ್ಯಾಂಡ್ ಬ್ಯಾಗ್ ಎಲ್ಲಿದೆ ?"

—ಎಂದು ಆಕೆಯನ್ನು ಕೇಳಿದರು ಡಾಕ್ಟರು.

"ಸಿನಿಮಾಕ್ಕೆ ಹೋಗಲು ಅದೇಕೆ ಬೇಕು ?"

"ಕ್ಷಮಿಸು ಡಾರ್ಲಿಂಗ್. ಶ್ರೀನಿವಾಸಮೂರ್ತಿಗಳ ಮಗುವಿಗೆ ಲಿವರ್ ತೊಂದರೆ ಇರಲಿಲ್ಲವೇ ? ಏಕೋ ಪರಿಸ್ಥಿತಿ ಉಲ್ಬಣಿಸಿದಂತೆ ಕಾಣುತ್ತದೆ. ಫೋನ್ ಮಾಡಿದ್ದರು. ಅಲ್ಲಿಗೆ ಹೋಗಬೇಕು. ಬೇಗ ಹ್ಯಾಂಡ್ ಬ್ಯಾಗ್ ಕೊಡು. ನೀನು ಅದು ತರುವಷ್ಟರಲ್ಲಿ ನಾನು ಕಾರು ತರುತ್ತೇನೆ.

—ಎಂದರು ಡಾಕ್ಟರು. ಅವರು ಹೇಳಿದುದನ್ನು ಕೇಳಿ ಆಕೆಯ ಮುಖ ದಲ್ಲಿದ್ದ ಹೊಳಪು ಮಾಯವಾಗಿ ಹೋಯಿತು. ಆದರೆ ಡಾಕ್ಟರು ಅದನ್ನು ಗಮನಿಸದೆ ಗ್ಯಾರೇಜಿನತ್ತ ಧಾವಿಸಿದರು.

ಡಾಕ್ಟರು ಕಾರನ್ನು ತರುವ ವೇಳೆಗೆ ಅವರ ಹೆಂಡತಿ, ಔಷಧಗಳಿದ್ದ ಹ್ಯಾಂಡ್‌ಬ್ಯಾಗ್ ತಂದುಕೊಟ್ಟರು.

"ಬನ್ನಿ ರಾಜಶೇಖರ್. ದಾರಿಯಲ್ಲೇ ನಿಮ್ಮನ್ನು ಇಳಿಸಿ ಹೋಗು ತ್ತೇನೆ. ನಾನು ಬರಲೇ ಕುಸುಮಾ. ಸಾರಿ ಫಾರ್ ದಿ ಡಿಸಪಾಯಿಂಟ್ ಮೆಂಟ್"

—ಎಂದರು ಡಾಕ್ಟರು. ನಾನೂ ಬೇರೆ ಮಾತನಾಡದೆ ಕಾರಿನಲ್ಲಿ ಹೋಗಿ ಕುಳಿತು ಡಾಕ್ಟರ ಹೆಂಡತಿಗೆ–

"ಹೋಗಿ ಬರುತ್ತೇನೆ"

—ಎಂದು ಹೇಳಿದೆ.

"ಹೋಗಿ ಬನ್ನಿ ರಾಜಶೇಖರ್. ನೋಡಿ, ನಾಳೆ ನೀವು ಡಾಕ್ಟ ರಾಗೋರು. ಒಂದು ಮಾತು ನೆನಪಿನಲ್ಲಿಡಿ. ನೀವು ಮದುವೆಯಾದರೆ, ಮನೆ ಯಲ್ಲಿ ಫೋನಿಟ್ಟುಕೊಳ್ಳಬೇಡಿ"

—ಎಂದವರೇ ಸರ್ರನೆ ಒಳಗೆ ಹೊರಟುಹೋದರು. ನನಗೆ ಕರುಳಿನಲ್ಲಿ ಕತ್ತರಿಯಾಡಿಸಿದಂತಾಯಿತು. ಡಾಕ್ಟರ ಮುಖ ನೋಡಿದೆ. ಡ್ಯಾಷ್ ಬೋರ್ಡಿನ ಮಂಕಾದ ಬೆಳಕಿನಲ್ಲಿ ಅರೆ ಬರೆ ಕಾಣುತ್ತಿದ್ದ ಅವರ ಮುಖವನ್ನು ಹಿಂಡಿದ ಹಾಗಿತ್ತು.

" ನಿಜ ರಾಜಶೇಖರ್. ಆ ದೃಷ್ಟಿಯಲ್ಲಿ ನಾನು ಘೋರ ಅಪರಾಧಿ "

—ಎಂದರು ಡಾಕ್ಟರು, ಆಕ್ಸಿಲೇಟರನ್ನು ಒತ್ತಿ. ಕಾರು ಒಮ್ಮೆ ಓಡಿತು. ಕಾರಿನಷ್ಟೇ ವೇಗವಾಗಿ ನನ್ನ ಮಿದುಳೂ ಓಡುತ್ತಿತ್ತು. ಹಾಸ್ಟಲಿನ ಬಳಿಯ ದಾರಿಯಲ್ಲಿ ಡಾಕ್ಟರು ಕಾರು ನಿಲ್ಲಿಸಿದಾಗ ಇಳಿದು, ವಂದಿಸಿ ಹಾಸ್ಟಲಿನತ್ತ ನಡೆದೆ. ಆದರೆ ನಾನು ನಡೆದುದು, ಹಾಸ್ಟಲು ಸೇರಿದುದು ನನ್ನ ಕಾಲಿಗೆ ಗೊತ್ತಿತ್ತೇ ವಿನಾ, ನನಗೆ ನೆನಪಿರಲಿಲ್ಲ.

ನಿಜವಾಗಿಯೂ ಶ್ರೀಧರ್, ನನ್ನ ಬಾಳಿನಲ್ಲಿ ನಾನೆಂದೆಂದೂ ಆ ದಿನವನ್ನು ಮರೆಯಲಾರೆ. ಮಿದುಳನ್ನು ಮುತ್ತಿ ಎದೆಯನ್ನು ತುಂಬಿದ ಆದಿನದ ನೆನಪನ್ನು ಯಾರಲ್ಲಿಯಾದರೂ ಹೇಳಿಕೊಳ್ಳದೆ ನನ್ನ ಜೀವಕ್ಕೆ ಸಮಾಧಾನವಾಗುವಂತಿರಲಿಲ್ಲ. ಇಲ್ಲಿ ಯಾರಿಗೆ ಹೇಳಿಕೊಳ್ಳಲಿ ? ಅದಕ್ಕೇ ನಿನ್ನ ಮುಂದೆ ತೋಡಿಕೊಂಡಿದ್ದೇನೆ–ಎಲ್ಲವನ್ನೂ ಸವಿವರವಾಗಿ ಬರೆದು. ಬೇಸರವಾಗಿದ್ದರೆ ಕ್ಷಮಿಸು.

ಬೆಂಗಳೂರಿನಲ್ಲಿ ನಿನ್ನನ್ನು ಬಿಟ್ಟುಬಂದ ಬಳಿಕ ನನ್ನ ಪಾಲಿಗೆ ಇಲ್ಲಿ ಯಾರೂ ಇಲ್ಲ ಎಂದುಕೊಂಡಿದ್ದೆ. ಆದರೆ ದೈವ ಇಲ್ಲೂ ನನ್ನ ಪಾಲಿಗೆ ಒಂದು ದೀಪಸ್ತಂಭವನ್ನು ತೋರಿಸಿತು. ನಿನ್ನಂಥ ಸ್ನೇಹಿತರು, ಇಂಥ ಗುರುಗಳು ಇದ್ದರೆ, ನನ್ನ ಕನಸು–ಅಲ್ಲ, ನಾನು ಹೊತ್ತ ನಿನ್ನ ಕನಸು–ಸಫಲವಾಗುವುದರಲ್ಲಿ ಎಳ್ಳಷ್ಟೂ ಸಂದೇಹ ನನಗಿಲ್ಲ.

ನಿನ್ನ ಆರೋಗ್ಯ ಹೇಗಿದೆ ? ನಿನ್ನ ಪ್ರಪಂಚ ಹೇಗೆ ನಡೆಯುತ್ತಿದೆ ?

ನಿನ್ನ ಕಾಗದಕ್ಕೆ ನಾನು ಉತ್ತರ ಬರೆಯುವುದು ತಡವಾಯಿತು. ಆದರೆ ಸಾಕಷ್ಟು ದೀರ್ಘವಾದುದನ್ನೇ ಬರೆದು, ಆ ತಪ್ಪಿನ ದಂಡ ಕೊಟ್ಟಿದ್ದೇನೆ ನೀನೂ ಈ ದೀರ್ಘವಾದ ಕಾಗದ ಬರೆದ ತಪ್ಪಿಗೆ ಇಂಥದೇ ದಂಡ ·ವಿಧಿಸುವುದಾದರೆ ತುಂಬಾ ಸಂತೋಷ. ಹಾಗೆ ಮಾಡುತ್ತೀಯಾ ?

ಆದಷ್ಟು ಬೇಗ ಉತ್ತರ ಬರಿ. ಪ್ರೀತಿ ಇರಲಿ.

ನಿನ್ನ ಪ್ರಿಯ ಬಂಧು,
ರಾಜಶೇಖರ್

೪

ಬೆಂಗಳೂರು

ಗೆ. ರಾಜಶೇಖರ್, ಡಿಸೆಂಬರ್, ೧೯೪೧

ನೀನು ಬರೆದ ಬಹು ಸುದೀರ್ಘವಾದ ಕಾಗದ ಕೈ ಸೇರಿತು. ಆ ಕಾಗದಕ್ಕಾಗಿ ನಾನು ಚಿರಋಣಿ. ದಿನದಿನದ ಜಡ ಜೀವನಕ್ಕೆ ಬಲಿಗೊಟ್ಟ ಬಾಳ ಮರಳುಗಾಡಿನಲ್ಲಿ, ಇಂಥ ಕಾಗದ ಅಪರೂಪವಾಗಿ ಬಿಸಿ ಬರುವ ತಂಗಾಳಿ.

ಮೈಸೂರಿನಲ್ಲಿ ನಿನಗೆ ಡಾಕ್ಟರ್ ನಂಬಿಯಾರ್‌ರಂಥ ಮಾರ್ಗದರ್ಶಕರು ಸಿಕ್ಕಿದುದು ನಿನ್ನ ಪುಣ್ಯ. ಆದಷ್ಟು ಅವರ ಮಾರ್ಗದರ್ಶನದ ನೆರವು ಪಡೆ. ಏಕೆಂದರೆ ಇಂದಿನ ಜಗತ್ತಿನಲ್ಲಿ ಅಂಥವರ ಕೆಳೆ ದೊರೆಯುವುದು ಅಪರೂಪ. ಈ ವ್ಯಾವಹಾರಿಕ ಜಗತ್ತಿನಲ್ಲಿ ನಮ್ಮ ಸುತ್ತಲೂ ಸುಳಿಯುವವು ತಿಮಿ, ತಿಮಿಂಗಿಲ, ಮೊಸಳೆಗಳೇ. ಎಲ್ಲರೂ ನಮ್ಮನ್ನು 'ಈತನಿಂದ ನಮಗೆಷ್ಟು ಅನುಕೂಲವಾದೀತು' ಎಂದು ಲೆಕ್ಕಾಚಾರ ಹಾಕುವವರೇ ವಿನಾ, ಈತನಿಗೆ ನಮ್ಮಿಂದ ಏನು ಸಹಾಯವಾದೀತು ಎಂದು ಚಿಂತಿಸುವವರು ಬಹು ಅಪೂರ್ವ. ನೀನು ಕಾಗದ ಬರೆದಿರುವುದನ್ನು ನೋಡಿದರೆ, ನಿನ್ನ ಡಾಕ್ಟರು, ಅವರ ಮನೆಯಾಕೆ ಯಾವುದೋ ಕನಸಿನ ಲೋಕದ ವ್ಯಕ್ತಿಗಳಂತೆ ಕಾಣುತ್ತಿದ್ದಾರೆ-ಈ ದೂರದಲ್ಲಿ ನನ್ನ ಕಣ್ಣಿಗೆ.

ಆದರೆ ಒಂದು ಮಾತು ಹೇಳಲೇ? ನಿನ್ನದು ತುಂಬಾ ಭಾವುಕ ರೀತಿಯ ಹೃದಯ. ಯಾವುದನ್ನು ನೋಡುವಾಗಲೂ, ಕೂಡಲೇ ಅದಕ್ಕೆ ನಿನ್ನ ಕಲ್ಪನೆಯ ಬಣ್ಣ ಬಳಿದು ನೋಡುತ್ತೀಯ. ಇದು ತಪ್ಪು. ಒಮ್ಮೊಮ್ಮೆ ಕೆಲವರ ವಿಷಯದಲ್ಲಿ ಇಡೀ ಜೀವಮಾನದ ಪರಿಚಯವೇ ಕೊನೆಯಲ್ಲಿ ಸುಳ್ಳಾಗಿ ಹೋಗಬಹುದು. ಭ್ರಮಾತ್ಮಕವಾದ ಜೀವನವನ್ನು ನಡೆಸುವವರಿಗೆ, ಹಾಗೆ ಬರುವ ನಿರಾಶೆಯ ಹಾಲಾಹಲವನ್ನು ನುಂಗಿಕೊಳ್ಳುವ ಚೇತನವಿರುವುದಿಲ್ಲ. ಎಂತಲೇ ನಿರಸನದ ಬಿರುಗಾಳಿ ಬಡಿದಾಗ, ಅವರ ಬಾಳ ದೋಣಿ ಪುಡಿಪುಡಿಯಾಗಿ ಹೋಗುತ್ತದೆ. ನಿನ್ನ ಬಾಳು ಹಾಗಾಗದಿರಲಿ ಎಂದೇ ನನ್ನ ಅಪೇಕ್ಷೆ. ಆದ್ದರಿಂದ ಯಾವ ಬಗ್ಗೆಯೂ ನಿನ್ನ ಅನುಭವ ಬಲಿಯುವವರೆಗೆ ಯಾವ ಬಗೆಯ ಚಿತ್ರವನ್ನೂ ಕಟ್ಟಿಕೊಳ್ಳಬೇಡ.

ನೀನು ಬರೆದ ಸಂತೋಷದ ಕಾಗದಕ್ಕೆ ಉತ್ತರವಾಗಿ ನಾನು ಈ ಮಾತು ಬರೆಯುತ್ತಿರುವುದನ್ನು ಓದಿ, ನಿನಗೆ ಶಿವಪೂಜೆಯಲ್ಲಿ ಕರಡಿ ಬಿಟ್ಟ ಹಾಗೇ ಅನಿಸಬಹುದು. 'ಶುಭ ನುಡಿಯೋ ಹಾರುವಯ್ಯ ಅಂದರೆ ಮದುವಣಗಿತ್ತಿ ಮುಂಡೇನ ಹಸೆಗೆ ಕರಿ ಎಂದ' ಎಂಬ ಗಾದೆಯೂ ನೆನಪಾಗಬಹುದು. ಅಲ್ಲವೇ ?

ಹಿಂದೊಮ್ಮೆ ನನ್ನನ್ನು ನಿರಾಶಾವಾದಿ, ಸಿನಿಕ್ ಎಂದು ಕರೆದುದೂ ನನಗೆ ನೆನಪಿದೆ. ನನ್ನ ಮಟ್ಟಿಗೆ ನಾನೇನೊ ಅದು ಹಾಗಲ್ಲ ಎಂದುಕೊಂಡಿದೇನೆ. ಒಂದು ವೇಳೆ ನನ್ನ ಭಾವನೆಯೇ ತಪ್ಪಿದ್ದು, ನಿನ್ನ ಭಾವನೆಯೇ ನಿಜವಿದ್ದರೂ ಇರಬಹುದು. ನಾನು ಜಗತ್ತನ್ನು ಕಪ್ಪು ಕನ್ನಡಕದ ಮುಖಾಂತರ ನೋಡುತ್ತಿರುವೆನೊ ಏನೋ ನಾನರಿಯೆ.

ಆದರೆ ನಾನು ಬಾಳುತ್ತಿರುವ ಈ ಪ್ರಪಂಚದಲ್ಲಿ ಬೇರೆಯ ರೀತಿ ಭಾವಿಸಲು ಅವಕಾಶವೇ ಇದ್ದಂತಿಲ್ಲ. ಸುತ್ತಲ ಜಗತ್ತು ಹೇಗೆ ಓಡುತ್ತಿದೆ, ಎತ್ತ ಕಡೆ ಧಾವಿಸುತ್ತಿದೆ ಎಂಬುದು ನಿನಗೆ ಅರಿವಾಗಿದೆಯೋ ಇಲ್ಲವೋ ನಾನರಿಯೆ. ಆದರೆ ನನಗೆ ಈ ಜಗತ್ತು ಯಾತನೆಯ ಹೊಗೆ ಹಬ್ಬಿದ ಶೋಕಗೃಹವಾಗಿ ಕಾಣುತ್ತಿದೆ. ನಾನು, ನೀನು ಹಾಯಾಗಿ ಉಂಡುಟ್ಟು, ಸುಖ ಸಲ್ಲಾಪದ ಕಾಗದ ಬರೆಯುತ್ತಿರುವಾಗ ಯೂರೋಪಿನಲ್ಲಿ, ಚೀನಾದಲ್ಲಿ ಆಫ್ರಿಕಾದಲ್ಲಿ ಯುದ್ಧದ ದಾವಾಗ್ನಿ ಹಬ್ಬಿ, ನನ್ನ ನಿನ್ನಂಥವರೇ ಲಕ್ಷಾಂತರ ಜನರ ಬಾಳುಗಳಿಗೆ ಗಳಿಗೆಗೂ ಭಗ್ನವಾಗುತ್ತಿದೆ. ಹೂವರಳಿದ ಹಸಿರುನೆಲ ಬಾಂಬಿನ ಬೆಂಕಿಯಲ್ಲಿ ಸುಟ್ಟು ಕರಿಕಾಗುತ್ತಿದೆ, ಕಂಬನಿಯ ಹೊಳೆಯಲ್ಲಿ ನಗೆಯ ಹೂವು ಕೊಚ್ಚಿ ಹೋಗುತ್ತಿದೆ, ಸಮರದ ಭೈರವ ವಿಕಾಟಾಟ್ಟಹಾಸದಲ್ಲಿ ಮೆಲು ನುಡಿಯ ಮಂಜುಳ ನಿನಾದ ಮಂಜಿನಂತೆ ಮಾಯವಾಗುತ್ತಿದೆ, ದಿನ ದಿನ ಕಳೆದಂತೆ ಸಾವಿನ ಸಂಕ್ರಾಂತಿಯನ್ನಾಚರಿಸುವ ಸಿದ್ಧತೆಯ ಸಡಗರ ಬಲಿಯುತ್ತಿದೆ. ಮಾನವನು ಮಾನವ ಜೀವದ ಬೇಟೆಯ ಆತುರದಲ್ಲಿ ಉನ್ಮತ್ತನಾದಂತಿದೆ, ಪತ್ರಿಕಾಲಯಕ್ಕೆ ಗಂಟೆಗಂಟೆಗೂ ಬರುವ ಟೆಲಿಗ್ರಾಂವಾರ್ತೆ ಈ ಕತ್ತಲೆಯ ಸುದ್ದಿಯನ್ನೇ ತರುತ್ತದೆ. ಹುಚ್ಚು ಕೊಲೆಯ ಜಲಪಾತ ನಾಗರೀಕತೆಯ ಬುಡಕ್ಕೆ ಕೊಡಲಿಪೆಟ್ಟು ಹಾಕಿದೆ – ಈ ಬೃಹದ್ ಭೈರವತೆಯ ಇದಿರು ನಮ್ಮ ವೈಯಕ್ತಿಕ ಕನಸು, ಆದರ್ಶ, ಬಯಕೆಗಳಿಗೆ ಏನು ಬೆಲೆ ? ಬೆಲೆ ಇದೆಯೇ ? ಬಯಕೆ, ಕನಸುಗಳು ಇರಲಿ – ಉಸಿರಾಡಲು ಕೂಡಾ ಎಡೆ ಇಲ್ಲವೇನೋ ಎನಿಸುತ್ತದೆ-ನನಗೆ

ನಿಜ – ಎಲ್ಲೆಲ್ಲೂ ಹಬ್ಬಿದ ಯುದ್ಧದ ಕಾಳ್ಗಿಚ್ಚಿನ ಹೊಗೆ, ಇಲ್ಲೂ, ಬೆಂಗಳೂರಿನಲ್ಲೂ ನಮ್ಮ ಉಸಿರು ಕಟ್ಟಿಸುತ್ತಿದೆ, ರಾಜಶೇಖರ್. ದಿನದಿನಕ್ಕೆ ಬದುಕು ಭಾರವಾಗುತ್ತಿದೆ ; ಬದುಕುವುದು ಸೀಸದ ಗುಂಡು ಕಾಲಿಗೆ ಕಟ್ಟಿಕೊಂಡು ಈಸಲು ಬಿದ್ದ ಹಾಗಾಗಿದೆ. ಬದುಕಬೇಕೆಂಬ ನಮ್ಮ ಬಯಕೆ ಜರ್ಮನಿಯ ಸಿಡಿಲಿನಿದಿರು ಛೇಂಬರ್ಲಿನ್ ಕೊಡೆ ಬಿಚ್ಚಿದ ಹಾಗೆ ವಿಫಲವೇನೋ ಎನಿಸುತ್ತದೆ.

ಈ ಹೊತ್ತಿನಲ್ಲಿ ನೀನು ಕನಸು, ಅದರ ಸಾರ್ಥಕತೆಯ ಮಾತು ಬರೆಯುತ್ತೀಯ. ಅದನ್ನು ಓದಿ ನನಗೆ ನಗೆ ಬಂತು ; ಕಹಿ ನಗೆ ಜಗತ್ತನ್ನು ದಹಿಸುತ್ತಿರುವ ಸಮರದ ದಾವಾಗ್ನಿಯಲ್ಲಿ ನಿನ್ನ ಬಯಕೆಯ ಹುಲ್ಲಿನ ಹಸಿರೆಸಳು ಉಳಿಯಬಹುದೇ ?

ಏನೋ – ಯಾರು ಬಲ್ಲರು ? ಜಗತ್ತು ಸುಟ್ಟಾಗ, ಆ ಹುಲ್ಲೆಸಳೇ ಭವಿಷ್ಯ ಜೀವನದ ಹೊಂಗಿರಣವಾಗಿ ಉಳಿಯಬಹುದೋ ಏನೋ, ಏನೋ, ಏನೋ ನನ್ನ ಸುತ್ತಲೂ ನಿರಾಶೆ, ಸಂದೇಹ, ವಿಫಲತೆಗಳೇ ಪಾಳಯ ಬಿಟ್ಟಿವೆ. ನನ್ನ ನಂಬಿಕೆಗಳೆಲ್ಲಾ ಬುಡ ನಡಿಲಿ ಹೋಗಿವೆ.

ಆದರೂ ನಿನ್ನ ಕನಸಾದರೂ ಬದುಕಲಿ ಎಂದು ಬಯಸುತ್ತೇನೆ. ನಿನ್ನ ಬಾಳಿನಲ್ಲಿ ಈ ಬೆಂಕಿ ಗಾಳಿ ಸುಳಿಯದಿರಲಿ. ನೀನು ಆಶಾವಾದಿಯಾಗೇ ಬದುಕ ಬೇಕೆಂದಿರುವೆಯಾ – ಹಾಗಿದ್ದರೆ ದಿನಪತ್ರಿಕೆಯ ಬಿರುಗಾಳಿಯನ್ನು ನಿನ್ನ ಬಾಳಿನಲ್ಲಿ ಬರಗೊಡಬೇಡ. ಪತ್ರಿಕೆಯನ್ನು ಓದಬೇಡ, ಸುದ್ದಿಯನ್ನು ಕೇಳಬೇಡ ಹಾಗಿದ್ದರೆ ಮಾತ್ರ ನೀನು ನಿನ್ನ ಕನಸಿನ ಹೊರೆ ಹೊತ್ತು ಬದುಕಬಲ್ಲೆ.

ಈ ಹೊತ್ತಿನಲ್ಲಿ ನೀನು ಬದುಕಬೇಕೆಂದರೆ, ಯಾರ ಹಂದರಕ್ಕೂ ನಿನ್ನ ಬಯಕೆಯಬಳ್ಳಿಯನ್ನು ಹಬ್ಬಿಸ ಹೋಗಬೇಡ ನಿನ್ನ ಬಯಕೆ, ನೆಲವನ್ನು ಹಿಡಿದು, ಮುಗಿಲನ್ನು ಮುಟ್ಟಿದ ಹೆಮ್ಮರದಂತೆ ಬೆಳೆಯಲಿ.

ಇನ್ನೊಂದು ಮಾತು ಬರೆಯಲೇ ? ಬಹಳ ಕಹಿಯಾದ ಮಾತು. ಇನ್ನುಮೇಲೆ ಸಾಧ್ಯವಾದಷ್ಟು ಮಟ್ಟಿಗೆ ನನಗೆ ಕಾಗದ ಬರೆಯಬೇಡ. ಬರೆದರೂ ಉತ್ತರ ನಿರೀಕ್ಷಿಸಬೇಡ–ಏಕೋ ನನಗೆ ನಮ್ಮ ವೈಯಕ್ತಿಕ ಜೀವನ, ಕಾಗದ ಪತ್ರ ವ್ಯವಹಾರ ಎಲ್ಲ ಅರ್ಥಹೀನವಾದ್ದು ಎನಿಸಿದೆ.

ದಯವಿಟ್ಟು, ದಯವಿಟ್ಟು, ನನ್ನ ಮಾತನ್ನು ತಪ್ಪು ತಿಳಿದು ಕೊಳ್ಳಬೇಡ – ಕಾಗದ ಬೇಡ ಎಂದುದಕ್ಕೆ ಅವನ ಸ್ನೇಹವೇಕೆ ಎಂಬ ನಿರ್ಧಾರಕ್ಕೆ ಬರಬೇಡ. ದೂರದಲ್ಲಾದರೂ ಒಂದು ಗೆಳೆ ಜೀವವಿದೆ ಎಂಬ ಕ್ಷೀಣ ನಂಬಿಕೆಯನ್ನಾದರೂ ನನ್ನ ಪಾಲಿಗೆ ಉಳಿಸಿರು. ಮುಂದೆ ಎಂದಾದರೊಂದು ದಿನ ಅದು ನನಗೆ ಬೇಕಾಗಬಹುದು.

ನಿಮ್ಮ ಡಾಕ್ಟರಿಗೆ, ಅವರ ಮನೆಯವರಿಗೆ ಈ ಅಪರಿಚಿತನ ನಮಸ್ಕಾರ ಹೇಳು.

ನಾನಿನ್ನು ಬರಲೇ ? ಸದ್ಯಕ್ಕೆ ನಮಸ್ಕಾರ.

ನಿನ್ನ ನಿತ್ಯ ಸ್ನೇಹಾಕಾಂಕ್ಷಿ
ಶ್ರೀಧರ

# ದಿನಚರಿಯ ಕೆಲವು ಪುಟ

## ೧೯೪೧ ಡಿಸೆಂಬರ್

'ತಾನು ಕೆಡುವ ಕೋತಿ ವನವನ್ನೆಲ್ಲಾ ಕೆಡಿಸಿತು'

ಈ ಗಾದೆಯ ಮಾತು ಕೋತಿಗೆ, ಆ ಜಾತಿಗೆ ಸೇರಿದ ಮನುಷ್ಯನಿಗೆ ಮಾತ್ರವೇ ಅನ್ವಯಿಸುವುದೆಂದಿದ್ದೆ. ವರ್ಷವೂ ಕೂಡಾ ಅದೇ ಜಾಡು ಹಿಡಿಯುವುದು ಎಂದುಕೊಂಡಿರಲಿಲ್ಲ. ಹೋಗಲಿರುವ ವರ್ಷ ತನ್ನೊಂದಿಗೆ ನನಗಿದ್ದ ಒಬ್ಬನೇ ಒಬ್ಬ ಸ್ನೇಹಿತನನ್ನು ಕರೆದುಕೊಂಡು ಹೋಗುವುದೇ ?

ಶ್ರೀಧರ ಹೀಗೆ ಮಾಡಬಹುದು, ಈ ರೀತಿ ಕಾಗದ ಬರೆಯ ಬಹುದು ಎಂದು ಅಂದುಕೊಂಡಿರಲಿಲ್ಲ. ಎಂತಲೇ ಅವನ ಕಾಗದ ಓದಿ ಸಿಡಿಲು ಹೊಡೆದ ಹಾಗಾಯಿತು – ಲೋಕಕ್ಕೆ ಬೆಂಕಿ ಬಿದ್ದು ಉರಿದರೆ, ಉರಿದು ಹೋಗಲಿ. ಆದರೆ ಅದು ನಮ್ಮ ಸ್ನೇಹಕ್ಕೇಕೆ ಅಡ್ಡಿ ಬರಬೇಕು. ಅದಕ್ಕೂ ನಮ್ಮ ಸ್ನೇಹಕ್ಕೂ ಏನು ಸಂಬಂಧ ? ನಿಜವಾಗಿಯೂ ಶ್ರೀಧರನ ನಡತೆ ನನಗೆ ಅರ್ಥವಾಗುವುದಿಲ್ಲ. ಎಂಥ ವಿಚಿತ್ರ ವ್ಯಕ್ತಿ ಅವನು.

ಹೋಗಲಿ – ಅವನಿಗೇ ಬೇಡವಾದರೆ ನನಗೇನು ? ಊರಿನ ದುಃಖ ಕಟ್ಟಿಕೊಂಡು ಅವನು ನಮ್ಮ ಸ್ನೇಹದಿಂದ ದೂರವಾಗ ಬಯಸಿದರೆ, ಅವನ ದಾರಿಯಲ್ಲಿ ಅವನು ಹೋಗಲಿ – ಅದರಿಂದ ನನಗೇನು ನಷ್ಟ ?

ಆದರೆ ಏಕೋ ಏಕೋ ಏಕೋ ಮಿಡುಕಾಡುವ ಈ ಮಾತನ್ನು ಮನಸ್ಸು ಒಪ್ಪಿಕೊಳ್ಳುತ್ತಿಲ್ಲ. ಏಕೋ ಒಮ್ಮೆ ಸುಂದರ ಉದ್ಯಾನವಿದ್ದೆಡೆ ಈಗ ಇದ್ದಕ್ಕಿದ್ದ ಹಾಗೇ ಭಯಂಕರ ಕೊರಕಲು ಬಿದ್ದ ಹಾಗಾಗಿದೆ. ಕಾಲಡಿಯಲ್ಲಿದ್ದ ನೆಲವೇ ಕಳ್ಳು ಕುಡಿದು ಹೊಯ್ದಾಡುತ್ತಿರುವಂತಿದೆ

ಇಷ್ಟು ದಿನ ಏನಾದರೂ ಶ್ರೀಧರನೊಬ್ಬನಲ್ಲಾದರೂ ಹೇಳಿಕೊಳ್ಳಬಹುದು ಎಂದಿದ್ದೆ – ಈಗ ಅವನೂ ದೂರವಾದ. ನನಗವನು ಈ ರೀತಿ ಮಾಡಲು ನಾನು ಅವನಿಗೆ ಮಾಡಿದ ಅಪರಾಧವೇನು ? ಯುದ್ಧ ನಡೆಯುತ್ತಿದೆ– ನಿಜ, ಸಾವಿರಾರು ಜನ ಸಾಯುತ್ತಿದಾರೆ – ನಿಜ. ಆದರೆ ಅದು ನನ್ನ ತಪ್ಪೆ ? ಲೋಕದಲ್ಲಿ ಎಲ್ಲೂ ಯುದ್ಧವಾಗದಿದ್ದರೆ ಮಾತ್ರ ನಮ್ಮ ಸ್ನೇಹ ಮುಂದುವರಿಯಬೇಕು ಎಂದೇನಾದರೂ ಒಪ್ಪಂದ ಮಾಡಿ ಕೊಂಡಿದ್ದೇವೆ ನಾವು? ಎಲ್ಲೇನಾದರೂ ನಮ್ಮ ಸ್ನೇಹ ಹಿಂದಿನಂತೆಯೇ ನಡೆದುಕೊಂಡು ಹೋಗಲು ಅಡ್ಡಿಏನಿತ್ತು ?

ಅವನಿಗೆ ಈ ಮಾತನ್ನೆಲ್ಲಾ ಹೇಳುವವರು ಯಾರು ?

ಹೋಗಲಿ – ಅವನು ನನ್ನ ಸ್ನೇಹವಿಲ್ಲದೆ ಇರಬಹುದು ಎಂದುಕೊಂಡರೆ ನಾನು ಇರಲಾರೆನೋ ? ನಾನೇಕೆ ಇಷ್ಟು ಯೋಚಿಸಬೇಕು, ಇಷ್ಟೇಕೆ ಪರಿತಾಪ ಪಡಬೇಕು, ಲೋಕವೇ ಮುಳುಗಿ ಹೋದವರ ಹಾಗೇ ನೆತ್ತಿಯ ಮೇಲೆ ಕೈ ಹೊತ್ತು ಕುಳಿತುಕೊಳ್ಳಬೇಕೇ ? ಅವನಂದ ಹಾಗೇ ಆಗಲಿ – ನಮಸ್ಕಾರ ಶ್ರೀಧರ್. ನಿನ್ನ ದಾರಿ ನಿನಗೆ, ನನ್ನ ದಾರಿ ನನಗೆ. ನಿನ್ನ ನಿರಾಶೆ ನಿನ್ನದು, ನನ್ನ ಕನಸು ನನ್ನದು.

ಆದರೆ ಈ ಕನಸು ನನ್ನದೇ ?

ಊಹೂ, ಅಲ್ಲ, ಇದು ಶ್ರೀಧರನ ಕನಸು, ನನ್ನ ಪಾಲಿಗೆ ಎರವಲು ಕನಸು – ನಿನ್ನ ಸ್ನೇಹಕ್ಕಾಗಿ, ನೀನು ಹೊರಲಾಗದ ಕನಸನ್ನು ನಾನು ಹೊತ್ತುಕೊಂಡೆ. ಅದಕ್ಕೆ ನೀನು ಕೊಡುತ್ತಿರುವ ಪ್ರತಿಫಲ ಇದು.

ನಿಜ. ನೀನು ಇದನ್ನು ನಾನು ಹೊರಬೇಕು ಎಂದು ಹೇಳಲಿಲ್ಲ.

ನಿಜ. ಇನ್ನೊಬ್ಬರ ಕನಸನ್ನು ನೀನು ಹೊರುವುದು ತಪ್ಪು ಎಂದೂ ಹೇಳಿದೆ –

ನಿಜ. ಇನ್ನೊಬ್ಬರ ಕನಸನ್ನು ಹೊರುವುದು ತುಂಬಾ ಕಷ್ಟ ಎಂದೂ ಹೇಳಿದೆ –

ನಿಜ. ಇನ್ನೊಬ್ಬರ ಹಂದರದ ಮೇಲೆ ನಿನ್ನ ಬಯಕೆಯ ಬಳ್ಳಿಯನ್ನು ಹಬ್ಬಿಸಬೇಡವೆಂದೂ ಹೇಳಿದೆ.

ನಿಜ. ನಿಜ. ನಿಜ. ನೀನು ಏನು ಹೇಳಲಿಲ್ಲ ? ಎಲ್ಲವನ್ನೂ ಹೇಳಿದೆ. ನೀನು ಸರ್ವಜ್ಞ, ನಾನು ಮೂರ್ಖ, ಅಲ್ಲವೇ ?

ಆಗಲಿ – ಬಹುಶಃ ಇನ್ನೊಬ್ಬರ ನೆರವಿಲ್ಲದೆ ನಾನಿದನ್ನು ಹೂರಲಾರೆ ಎಂದೇ ನೀನು ತಿಳಿದುಕೊಂಡಿದೀಯೇನೋ – ಅಲ್ಲವೇ ? ಆಗಲಿ ಶ್ರೀಧರ್. ನನ್ನಿಂದ ನೀನು ಎಷ್ಟು ದೂರ ಹೋಗುತ್ತೀಯೋ ಹೋಗು, ಯಾವ ಕಗ್ಗತ್ತಲ ಗವಿಯಲ್ಲಿ ಹುದುಗಿಕೊಂಡು ಕುಳಿತುಕೊಳ್ಳುತ್ತಿಯೋ ಕುಳಿತುಕೋ.

ಆದರೆ ಇಂದಲ್ಲ ನಾಳೆ ನೀನೇ ಅರಿಯುತ್ತೀಯ–ರಾಜಶೇಖರ ಕನಸನ್ನು ನನಸಾಗಿ ಮಾಡಬಲ್ಲ ಸಮರ್ಥ ಎಂದು. ಖಂಡಿತ, ಖಂಡಿತ, ನೂರು ನೂರು ಬಾರಿಯೂ ಮಾತಾಡಿ ಏನು ಉಪಯೋಗ ? ನೀನೇ ನೋಡುವಿಯಂತೆ.

ಆದರೆ—ಕಾಗದ ಬರೆಯಬೇಡ ಎಂದಿದ್ದಾನೆ ; ಬರೆದರೆ ಏನು ಮಾಡುತ್ತಾನೆ, ದಿನಕ್ಕೊಂದೊಂದು ಕಾಗದ ಬರೆದರೆ ಆಗ ಏನು ಮಾಡುತ್ತಾನೆ ?

ಅವನು ಸ್ನೇಹ ಬೇಡ ಎಂದಿಲ್ಲ, ಕಾಗದ ಬೇಡ ಎಂದಿದಾನೆ.

ಉತ್ತರ ಪ್ರತ್ಯುತ್ತರಗಳ ಸಂಪರ್ಕ ಸೇತುವೆ ಕಡಿದ ಮಾತ್ರಕ್ಕೇ ಸ್ನೇಹವೇ ಮುಳುಗಿಹೋಯಿತೆಂದು ಚಿಂತಿಸಬೇಕೇ ನಾನು ? ಅಷ್ಟಕ್ಕೆ ಇಷ್ಟು ಉದ್ವಿಗ್ನನಾಗಬೇಕೇ ? ಆ ಕಾಗದ ಬರೆವಾಗ, ಶ್ರೀಧರ ನಾನಂದುಕೊಂಡಂತೆ ನಿಜವಾಗಿಯೂ ನನ್ನ ಸ್ನೇಹಿತನಾಗಿದ್ದರೆ, ಅವನ ಮನಸ್ಸು ಈಗ ಇಷ್ಟೇಹೊಯ್ದಾಡುತ್ತಿರುತ್ತದೆ. ಏನೋ ಒಂದು ಗಳಿಗೆಯ ಆಕ್ರೋಶದಲ್ಲಿ ಈ ಬಗೆಯ ಕಾಗದ ಬರೆದಿರಬೇಕು. ಇಷ್ಟರಲ್ಲೇ ಮತ್ತೆ ಪಶ್ಚಾತ್ತಾಪಪಟ್ಟು ಕಾಗದ ಬರೆಯಬಹುದು.

ಬರೆಯಬಹುದು, ಬರೆಯದೆಯೂ ಇರಬಹುದು ; ವಿಚಿತ್ರ ಮನುಷ್ಯ ಶ್ರೀಧರ. ನನ್ನ ಯಾವ ಲೆಕ್ಕಾಚಾರಕ್ಕೂ ಸಿಕ್ಕುವುದಿಲ್ಲ ಅವನು.

ಹೋಗಲಿ. ಯಾವುದು ಹೇಗಾಗಬೇಕೊ ಹಾಗಾಗಲಿ. ನನ್ನ ಗುರಿಯ ದಾರಿ ನನಗೆ.

ಅವನ ಕಾಗದ ಬಂದಾಗ ಒಂದು ಗಳಿಗೆ ನನಗೆ, ನಾನು ಕತ್ತಲ ಕಡಲಿನಲ್ಲಿ ಸಿಲುಕಿದ ದಿಕ್ಕರಿಯದ ನಾವಿಕ ಎಂದುಕೊಂಡಿದ್ದೆ. ಅಲ್ಲ. ಈಗ ಶ್ರೀಧರ ಇಲ್ಲ, ಡಾಕ್ಟರ್ ನಂಬಿಯಾರ್ ಇದ್ದಾರೆ, ಹೊತ್ತು ಬಂದಾಗ ದಾರಿ ತೋರಿಸಲು.

ನಿಜ. ಅವರು ದಾರಿ ತೋರಿಸಲು ಸಮರ್ಥರು. ನನ್ನ ಉದ್ದೇಶ ಸಾಧನೆಗೆ ತಕ್ಕ ಗುರು ಅವರು. ಅವರು ತೋರಿದ ದಾರಿಯಲ್ಲಿ ನಡೆಯುತ್ತೇನೆ.

ಈಗ ಅವರು ಹೇಳಿದ ಒಂದು ಮಾತುನನಗೆ ನೆನಪಿಗೆ ಬರುತ್ತಿದೆ. ವೈದ್ಯಾಭ್ಯಾಸವನ್ನು ಕೈಕೊಂಡವನಿಗೆ ಬೇರಾವ ಚಿಂತೆಗೂ ಅವಕಾಶ ಇಲ್ಲ.

ನಿಜ ಅವರ ಮಾತು. ಓದದೇ ಕುಳಿತು, ಈ ದಿನಚರಿ ಬರೆಯುವುದರಲ್ಲಿ ಹೊತ್ತು ಕಳೆಯುತ್ತಿದ್ದೇನಲ್ಲಾ—ನಾನೆಂಥ ಮೂರ್ಖ.

ಹೋಗುವುದೆಲ್ಲಾ ಹೋಗಲಿ, ಬರುವುದು ಬರಲಿ. ನನ್ನ ಗುರಿ ನನಗಿರಲಿ.

೧೯೪೨

ಈ ವರ್ಷದಿಂದ ನಾನು ನಿಜವಾಗಿಯೂ ಮೆಡಿಕಲ್ ವಿದ್ಯಾರ್ಥಿ. ಇಷ್ಟು ದಿನ ಬರೀ ಪ್ರೀ–ಮೆಡಿಕಲ್. ಈ ವರ್ಷದಿಂದ ನಿಜವಾದ ಅಭ್ಯಾಸ ಆರಂಭ. ಮೆಡಿಕಲ್ ಕಾಲೇಜಿನ ಜೀವನದ ನಿಜವಾದ ಅನುಭವ ನನಗೀಗ ಆಗುತ್ತಿದೆ.

ಇಲ್ಲ–ಪೂಸಿರಾಡಿಸುವುದಕ್ಕೂ ಬಿಡುವುದಿಲ್ಲ.

ಬೆಳಗ್ಗೆ ೮ ರಿಂದ ೧೦–೩೦ರ ವರೆಗೆ ಡಿಸೆಕ್ಷನ್. ಆಮೇಲೆ ಅನಾಟಮಿ ಫಿಜಿಯಾಲಜಿ, ಬೈಯೊಕೆಮಿಸ್ಟ್ರಿ, ಹಿಸ್ಟಾಲಜಿ.

ಹಿಸ್ಟಾಲಜಿ, ಬೈಯೊಕೆಮಿಸ್ಟ್ರಿ, ಫಿಜಿಯಾಲಜಿ, ಅನಾಟಮಿ_ಡಿಸೆಕ್ಷನ್.

ಇಲ್ಲ. ಇದು ವಿನಾ ಬೇರಾವುದಕ್ಕೂ ಬಿಡುವಿಲ್ಲ

ಬಿಡುವಿಲ್ಲ, ಬಿಡುವಿಲ್ಲ ಎಂದುಕೊಂಡವರಿಗೆ ಬಿಡುವಿಲ್ಲ; ಓದಬೇಕೆಂದವರಿಗೆ ಬಿಡುವಿಲ್ಲ.

ಆದರೆ ಸೂಟುಬೂಟು ಧರಿಸಿ ಮೆರೆದಾಡಬೇಕು ಎಂದು ಬಂದವರಿಗೆ, ಹುಡುಗಿಯರೊಂದಿಗೆ ಸರಸವಾಡಲು ಸದವಕಾಶ ಎಂದು ಬಂದವರಿಗೆ?—

ಹೆಣದ ನರನರವನ್ನು ಬಿಡಿಸಿ ನೋಡುವಾಗಲೂ ಗಾಳಿಯಲ್ಲಿ ಸುಳಿವ ಆ ಪರಿಮಳ ಯಾರದೆಂದು ಮೂಗರಳಿಸಿ ನೋಡುವವರಿಗೆ?—

ಎಳೆಎಳೆಯಾಗಿ ಬಿಡಿಸಿದ ಅಂಗಾಂಗವನ್ನು ಕಂಡು, ಬೇರಾವುದೋ ನೆನಪು ಮರುಕಳಿಸಿ ವಿಚಿತ್ರ ನಗೆ ತುಳುಕಿಸುವವರಿಗೆ—

ಅವರ ದಾರಿ ಅವರಿಗೆ, ನನ್ನ ದಾರಿ ನನಗೆ.

* * *

ಡಿಸೆಕ್ಷ್ಞ – ಫೋರ್‌ಸೆಪ್ಸ್, ಸ್ಕ್ಯಾಲ್ಪೆಲ್, ಡಿಸೆಕ್ಷ್ಞ ಮ್ಯಾನ್ಯುಯಲ್.

ಡಿಸೆಕ್ಷ್ಞ – ಬಣ್ಣಗೆಟ್ಟು, ವಿಕಾರವಾಗಿ, ಕಪ್ಪಾಗಿ, ಫಾರ್ಮಲ್ ಆಸಿಡ್‌ನ ವಾಸನೆ ಬಿರುತ್ತಾ ಮೇಜಿನ ಮೇಲೆ ಮಲಗಿದ ಆ ಎಲುಬಿನ ಮೂಟೆ. ಹೆಣ್ಣು-ಗಂಡು-ಮಗು? ಅಲ್ಲ, ಅದು ನಮ್ಮ ಡಿಸೆಕ್ಷ್ಞಗೆಂದು ಕಾದಿರಿಸಿದ ಹೆಣ.

ತಲೆ ಒಂದು ಗುಂಪಿಗೆ, ಕೈ ಒಂದು ಗುಂಪಿಗೆ, ಕಾಲೊಂದು ಗುಂಪಿಗೆ—

'ತುಂಬಾ ಗದ್ದಲ, ದಯವಿಟ್ಟು ಡಿಸೆಕ್ಷ್ಞ ಮ್ಯಾನ್ಯುಯಲ್ ಕೊಂಚ ಗಟ್ಟಿಯಾಗಿ ಓದಿ, ಈ ನರ ಎಲ್ಲಿ ಕತ್ತರಿಸಬೇಕು? ಡೆಮಾನ್ ಸ್ಟ್ರೇಟರನ್ನು ಕೇಳಿ – ಇದು ಸರಿಯೇ? ಈ ರಕ್ತನಾಳ ಎಲ್ಲಿ ಕವಲು ಒಡೆದಿದೆಯೋ ಗುರುತಿಸಿ. ಈ ಎಲುಬಿನ ರಚನೆ ಕೊಂಚ ವಿಚಿತ್ರವಾಗಿದೆ ಯಲ್ಲವೇ? .......ಈ ನರ ಸಿಕ್ಕುತ್ತಿಲ್ಲ – ಸ್ವಲ್ಪ ಆಳವಾಗಿ ಕತ್ತರಿಸು, ನಾಜೂಕಾಗಿ ಕತ್ತರಿಸು....ಕಟುಕ ಮಾಂಸವನ್ನು ಕತ್ತರಿಸಿದ ಹಾಗಲ್ಲ...ನಯವಾಗಿ, ನಾಜೂಕಾಗಿ ಪರೆಪರೆಯಾಗಿ, ನರನರವಾಗಿ....'

ಹೆಣ್ಣು? .... ಗಂಡು? .... ಊಹೂ – ಡಿಸೆಕ್ಷ್ಞಗೆ ದ್ರಾವಕದಲ್ಲಿಟ್ಟು ಕಾದಿರಿಸಿದ ಹೆಣ.

ನರನರವನ್ನು ನೆನಪಿನಲ್ಲಿಡು;

ಡೆಮಾನ್‌ಸ್ಟ್ರೇಟರು ಕೇಳಿದಾಗ ತೋರಿಸಬೇಕು—

ಇಲ್ಲವಾದರೆ, ಸುತ್ತ ನೆರೆದವರು ನಗುತ್ತಾರೆ – ಹುಡುಗರು, ಹುಡುಗಿಯರು........

ಹುಡುಗರು, ಹುಡುಗಿಯರು–ಒಂದೊಂದು ಹೆಣದ ಸುತ್ತಲೂ.

ಒಂದೊಂದು ಮೇಜಿನಮೇಲೆ ಒಂದೊಂದು ಹೆಣ ; ಹೆಣದ ಒಂದೊಂದು ಭಾಗದ ಸುತ್ತ ಒಂದೊಂದು ಗುಂಪು—ಕೈ, ಕಾಲು, ಎದೆ, ಮಿದುಳು—

ಕತ್ತರಿಸು, ಮತ್ತೆ ಕತ್ತರಿಸಿದ ಹಾಗೆ ಜೋಡಿಸು–ಮನೆಗೆ ಹೋಗು.

ಹೋಗು – ಮತ್ತೆ ಕಾಲೇಜಿಗೆ ಬಾ.

ಬಾ – ಅನಾಟಮಿ, ಫಿಜಿಯಾಲಜಿ, ಬೈಯೊಕೆಮಿಸ್ಟ್ರಿ, ಹಿಸ್ಟಾಲಜಿ.

* * *

ಮೊದಲ ದಿನ ಹೆಣವನ್ನು ಕತ್ತರಿಸುವಾಗ, ಕತ್ತರಿಸುವುದನ್ನು ನೋಡುವಾಗ ನನ್ನ ಮೆದುಳಿನಲ್ಲಿ ಹುದುಗಿದ್ದ ಯಾವುದೋ ಭಾವನೆ ಆಸ್ಫೋಟನವಾಗಿ ಒಂದು ಗಳಿಗೆ ಕೈಕಾಲು ನಡುಗಿ, ಹೊಟ್ಟೆಯೊಳಗಿದ್ದುದು ಹೊರಬರಲು ಯತ್ನಿಸಿತು.

ಮೇಜಿನ ಮೇಲೆ ಮಲಗಿದ್ದ ಹೆಣ್ಣು ಹೆಣ ಯಾರಿರಬಹುದು ?

ಎದೆಯಮೇಲೆ ಬತ್ತಿ ಜೋಲುಬಿದ್ದ ಆ ಮೊಲೆಯಿಂದ ಯಾರು ಹಾಲು ಕುಡಿದು ಬೆಳೆದಿರಬಹುದು ? ಈ ಹೆಣದ ಗರ್ಭದಿಂದ ಎಷ್ಟು ಜೀವ ಬೆಳೆದು ನಗುತ್ತಿರಬಹುದು ; ಎಷ್ಟು ಆನಂದ ನೀಡಿರಬಹುದು ; ಯಾರ ಕಾಮ ಕೇಳಿಯ ರಥವಾಗಿದ್ದಿರಬಹುದು ? ಯಾವ ರೋಗ ಬಂದು ಇದನ್ನು ಈ ಲೋಕದಿಂದಾಚೆಗೆ ದಾಟಿಸಿರಬಹುದು ?

ಊಹೂ – ರೋಗವಲ್ಲ, ಹಸಿವು.

ಹೊಟ್ಟೆಯನ್ನು ಸೀಳಿ, ಬತ್ತಿದ ಕರುಳನ್ನು ಚಾಕುವಿನ ತುದಿಯಲ್ಲಿ ಎತ್ತಿ ಹಿಡಿದವನು ಹೇಳುತ್ತಿದಾನೆ.

ಇದು ಹಸಿವಿನಿಂದ ಸತ್ತವಳ ಹೆಣ.

ಎಲ್ಲಿ ? ನಡುಬೀದಿಯಲ್ಲಿ, ಮೋರಿಯ ಮಗ್ಗುಲಲ್ಲಿ, 'ನೀರು' ನೀರು' ಎಂದು ಚೀರುತ್ತಾ ? 'ತಾಯಿ, ಒಂದು ತುತ್ತು ಕವಳಾ ತಾಯಿ, ಎಂದು ಬೇಡುತ್ತಾ, ಬೇಡಿದುದು ಸಿಗದೆ ಹೊಯ್ದಾಡುತ್ತಾ, ಉಸಿರು ಕಸವಿಸಿಯಾಗಿ ನರಳುತ್ತಾ.

ಯಾರಾದರೇನು ? ಹೇಗಾದರೇನು – ಕತ್ತರಿಸು.

' ಹುಷಾರ್. ಕೈ ದೃಢವಾಗಿರಲಿ. ಏನು ರೋಗವೊ ! ದ್ರಾವಕದಲ್ಲಿಟ್ಟದರೂ ಈ ದೇಹವನ್ನು ಕೊಂದ ರೋಗಾಣು ಇನ್ನೂ ಬದುಕಿದ್ದರೂ ಇರಬಹುದು. ಎಲ್ಲಿಯಾದರೂ ಕೈ ಕತ್ತರಿಸಿಕೊಂಡೀಯೆ ? ನಂಜಾದೀತು ? ಆ ರೋಗ ನಿನ್ನನ್ನೇ ತಿಂದೀತು. ಭಯ – ಮರುಕ.

ಊಹೂ. ಯಾವುದಕ್ಕೂ ಎಡೆಯಿಲ್ಲ. ಕತ್ತರಿಸು.

ಹೃದಯ ಚಲನೆಯ ರೀತಿ ಪರೀಕ್ಷಿಸಲು ಕಪ್ಪೆಯ ಮಿದುಳಿನಲ್ಲಿ ಸೂಜಿ ಯಾಡಿಸಿ ನರಮಂಡಲವನ್ನು ಕಲಕಿದಾಗ, ಬುದ್ಧಿ ಸತ್ತು ರಕ್ತ ಚಲಿಸುತ್ತಾ ಪುಟಿಯುತ್ತಿದ್ದ ಕಪ್ಪೆಯ ಎದೆಯ ಚರ್ಮವನ್ನು ಬಿಡಿಸಿ ಹೃದಯವನ್ನು ಹಗುರಾಗಿ ಸೀಳಿ ನೋಡಲಿಲ್ಲವೇ ?

ಅದು ಕಪ್ಪೆ – ಇದು ಮನುಷ್ಯ

ಯಾರಾದರೇನು – ಕತ್ತರಿಸು.

ಇದು ಅನಾಟಮಿಯ ತಳಹದಿ. ' ಒಳ್ಳೆಯ ಅನಾಟಮಿಸ್ಟ್ ಆಗದ ವನು ಒಳ್ಳೆಯ ಸರ್ಜನ್ ಆಗಲಾರ. '

ಸಿಡಿಯುವ ಮಿದುಳು, ಕಲಕುವ ಹೊಟ್ಟೆಯನ್ನು ಹೊಳಬಿಟ್ಟು ಕತ್ತ ರಿಸು. ಇದರ ನೋಟ್ಸ್ ಮಾಡಿಕೊ. ಡೆಮಾನ್‌ಸ್ಟ್ರೇಟರು ಕೇಳಿದಾಗ ಹೇಳ ಬೇಕು. ಕತ್ತರಿಸುವಾಗ ಡಿಸೆಕ್ಷನ್ ಮ್ಯಾನ್ಯುಯಲ್‌ನಲ್ಲಿ ಹೇಳಿದ ಕ್ರಮ ಅನುಸರಿಸು.

ಕತ್ತರಿಸಿದೆ - ದಿನದಿನವೂ, ವಾರಗಟ್ಟಲೆ, ತಿಂಗಳುಗಟ್ಟಲೆ.

ಕತ್ತರಿಸು, ಓದು ; ಕತ್ತರಿಸಿದುದನ್ನು ನೋಟ್ಸ್‌ಮಾಡು, ಓದಿದುದನ್ನು ನೆನಪಿಡು.

* * *

ಸುತ್ತ ಬೀಸುವ ಗಾಳಿಯಲ್ಲೇನೋ ಕಾವು

' ದಿನ ಪತ್ರಿಕೆಯನ್ನು ನಿನ್ನ ಬಾಳಿನಲ್ಲಿ ಬರಗೊಡಬೇಡ.' ಅದು ನನ್ನ ಕನಸಿನ ವೈರಿ. ಆದರೆ ಸುತ್ತಲ ಗಾಳಿಯಲ್ಲಿ ಅದರ ಪಿಸುದನಿ ಪಡಿನುಡಿಯು ತ್ತಿದೆ.

ಇಲ್ಲ – ಹಾಸ್ಟಲಿನಲ್ಲಿ, ಬೀದಿಯಲ್ಲಿ, ಕಾಲೇಜಿನಲ್ಲಿ ಡಿಸೆಕ್ಷನ್ ಥಿಯೇಟ ರಿನಲ್ಲಿ, ಕತ್ತರಿಸಿದ ಹೆಣದ ನರನರದ ತುದಿಯಿಂದ ಕೇಳಿ ಬರುತ್ತಿದೆ, ಪಿಸು ದನಿಯ ಪಡಿನುಡಿ—

' ದೇಶವಿಂದು ಕ್ರಾಂತಿಗೆ ಸಿದ್ಧವಾಗುತ್ತಿದೆ.'

' ಕ್ರಾಂತಿಕಾಳಿ ಕರೆಯುತ್ತಿದ್ದಾಳೆ – ಶಾಲೆ ಕಾಲೇಜುಗಳಿಂದ, ಗಿರಣಿ ಕಾರ್ಖಾನೆಗಳಿಂದ, ಮನೆಯಿಂದ, ಗುಡಿಯಿಂದ, ತೊಟ್ಟಿಲ ಬಳಿಯಿಂದ, ಮೋಜಿನ ಮಹಾ ಸಮಾಧಿಯಿಂದ ಎದ್ದು ಬನ್ನಿ.'

' ಗಾಂಧೀಜೀಯನ್ನು ಸೆರೆಗೊಯ್ದರು. ದೇಶನಾಯಕರನ್ನು ಕದ್ದು ಸೆರೆಮನೆಗೆ ಸಾಗಿಸಿದರು.'

' ಕೂಗುವ ಬೀದಿ, ಡಿಸೆಕ್ಷನ್ ಥಿಯೇಟರಿಗೇ ನುಗ್ಗಿ ಕರೆಯುತ್ತಿದೆ—

‘ ಬಾ, ಹೊರಗೆ ಬಾ ; ಮೂಡು ಇಲ್ಲವೇ ಮಡಿ.’

ಇವಿನಿಂಗ್ – ಇಕ್ – ಪ್ಯಾರಿಸ್ ಹಾಕಿ ತಿದ್ದಿ ಬಾಚಿದ ತಲೆಯ ಮೇಲೆ ಗಾಂಧಿಯ ಟೋಪಿ ; ಬಾಯಿ ಬಿಟ್ಟರೆ ಟಾರ್ಚ್‌ಹಾಲು ಮೈದಾನವೇ ಬಾಯಿ ತೆರೆಯುತ್ತದೆ.

‘ ಪ್ರೀತಮ್ ಆನ್ ಮಿಲೋ ’ ಹೇಳುತ್ತಿದ್ದ ಬಾಯಿ ‘ ಚರಖಾ ಚಲಾ ಚಲಾಕೆ ಲೇಂಗೇ ಸ್ವರಾಜ್ಯ ಲೇಂಗೆ ’ ಗುಡಿಗುಡಿಸುತ್ತಿದೆ—

‘ ಬನ್ನಿ, ಕಾಲೇಜು ಬಿಟ್ಟು ಹೊರಬನ್ನಿ.’

ಕೂಸು ಕುನ್ನಿಯ ಮುಂದೆ ಕಂಡಕಂಡಲ್ಲಿ ಚೀರುತ್ತದೆ.

ಬೇಡ ಬೇಡವೆಂದು ಕಣ್ಣು ಮುಚ್ಚಿದರೂ ಕಿವಿಯಲ್ಲೇ ನುಸುಳುತ್ತದೆ ದಿನಪತ್ರಿಕೆ.

ದಿನದಿನಕ್ಕೆ ಡಿಸೆಕ್ಷನ್ ಹಾಲು ಬರಿದಾಗುತ್ತಿದೆ ; ಕತ್ತರಿಸಲೆಂದು ತಂದಿಟ್ಟ ಹೆಣಗಳು ಫಾರ್ಮಲ್ ಆಸಿಡ್‌ನ ವಾಸನೆ ಬೀರುತ್ತಾ ಪಾರ್ಕಿನಲ್ಲಿ ಮರದ ನೆರಳಿಗೆ ಮಲಗಿದ ನಿರುದ್ಯೋಗಿಗಳಂತೆ ಬಿದ್ದಿವೆ.

ಲೆಕ್ಚರ್ ಹಾಲಿನಲ್ಲೂ ಬರಿದಾದ ಬೆಂಚುಗಳು, ಹಲ್ಲುದುರಿ ಬಚ್ಚಬಿದ್ದ ಬಾಯಿನಂತೆ.

‘ ಏನು ಮಾಡಲಿ, ನಾನೇನು ಮಾಡಲಿ ? ’ ಒಳಗೋ – ಹೊರಗೋ ?

* * * *

ಈ ಚಿಂತೆಯಲ್ಲೇ, ಏನು ಮಾಡಬೇಕೆಂದರಿಯದೆ ಹೋಗಿ ಡಾಕ್ಟರ್ ನಂಬಿಯಾರನ್ನು ನೋಡಿದೆ.

ಸಿಗರೇಟಿನ ಹೊಗೆಯನ್ನು ನಿಧಾನವಾಗಿ ತೇಲಿಸುತ್ತಾ ಕೊಂಚ ಹೊತ್ತು ಈಸಿಛೇರಿನ ಮೇಲೆ ಒರಗಿದ್ದು ಬಳಿಕ, ನನ್ನ ಪ್ರಶ್ನೆಗೆ ಉತ್ತರವಾಗಿ ನಂಬಿಯಾರ್ ಕೇಳಿದರು—

“ ನೀವು ಭಾರತೀಯರಲ್ಲವೇ ರಾಜಶೇಖರ್ ?

“ ಹೌದು ಸಾರ್ ? ”

“ ನಮ್ಮ ದೇಶದ ದಾಸ್ಯ ಉಳಿದವರಂತೆ ನಿಮ್ಮ ನೆತ್ತರನ್ನು ಕೆರಳಿಸುವುದಿಲ್ಲವೇ ? ”

“ ಕೆರಳಿಸದೇ ? ಬೀದಿಯಲ್ಲಿ ದುಮುದುಮಿಸುವ ಜಯಘೋಷವನ್ನು ಕೇಳಿದಾಗ ನನ್ನ ನೆತ್ತರೂ ಕುದಿದು ಕಾವೇರುತ್ತದೆ.”

“ ಹಾಗಾದರೆ ಹೋಗಿ ಚಳುವಳಿಗೆ ಸೇರಿಕೊಳ್ಳುವುದಿಲ್ಲವೇಕೆ ? ”

“ ಸೇರಿಕೊಂಡರೆ ಇದರಿಂದ ನನ್ನ ಧ್ಯೇಯ ಸಾಧನೆಯ ದಾರಿಗೆ ಅಡ್ಡ

7

ವಾದೀತೇನೋ ಎನಿಸುತ್ತದೆ. ಅಲ್ಲದೆ ಓದಿಗೆ ವಿಘ್ನ ಬಂದರೇನು ಎಂದು ಭಯವೂ ಆಗುತ್ತದೆ "

" ಭಯವೇಕೆ ? ನೂರಾರು ಜನಕ್ಕೆ ಆದದ್ದು ನಿನಗೂ ಆಗುತ್ತದೆ. ಅಲ್ಲದೆ, ಈ ಭಯಕ್ಕಾಗಿ ನೀನು ಬಿಡುಗಡೆಯ ಹೋರಾಟದಲ್ಲಿ ಸೇರದಿರುವುದು ಉಚಿತವಲ್ಲ. ಇದು ಯಾರೊಬ್ಬರ ಬಿಡುಗಡೆಯ ಹೋರಾಟವು ಅಲ್ಲ. ಎಲ್ಲರದೂ – ನನ್ನದೂ, ನಿನ್ನದೂ ಅಹುದು. ಅಲ್ಲವೇ ? ಸ್ವಾತಂತ್ರ್ಯ ಬಂದರೆ ದೇಶಕ್ಕೇ ಬರುತ್ತದೆ. ಎಂತಲೇ ಇದು ಎಲ್ಲರ ಕೆಲಸ."

" ನೀವು ಹೇಳುವುದು ಸರಿ ಸಾರ್. ಆದರೆ ?........"

" ಏನು ಆದರೆ ...."

" ನೀವು ನನ್ನ ಮಾತು ಕೇಳಿ ಏನು ಹೇಳುತ್ತೀರೋ ನಾನರಿಯೆ. ಆದರೆ ಈ ಚಳುವಳಿಯಲ್ಲಿ ಸೇರಬೇಕು ಎಂದು ನನಗೆ ಅನಿಸುವುದಿಲ್ಲ. ನನ್ನ ಹೃದಯ ಬಿಡುಗಡೆಯ ಹೋರಾಟದಲ್ಲಿದೆ. ಆದರೆ ಹಾಗೆಂದು ಚಳುವಳಿಯಲ್ಲಿ ಸೇರಿಕೊಂಡು, ನನ್ನ ಓದು ಕೆಡಿಸಿಕೊಳ್ಳುವುದರಿಂದ ನನ್ನ ಶಿಕ್ಷಣಕ್ಕಾಗಲಿ, ದೇಶಕ್ಕಾಗಲಿ ಉದ್ಧಾರವಾಗುತ್ತದೆ ಎಂದು ನನಗನಿಸುವುದಿಲ್ಲ."

" ಏಕೆ ? "

" ಏಕೆಂದು ಹೇಳಲಾರೆ. ಇದೊಂದು ಬಗೆಯ ಮೂಕ ಅನಿಸುವಿಕೆ. ಈ ಗುಂಪು, ಗದ್ದಲ ನನಗೆ ಸೇರುವುದಿಲ್ಲ."

" ಈ ಚಳುವಳಿಯಲ್ಲಿ ನೀವು ಸೇರಿ, ಬಿಡಿ. ಆದರೆ ನೀವು ಜಗತ್ತಿನಲ್ಲಿ ಬಾಳುವೆ ಮಾಡಬೇಕೆಂದರೆ, ಗುಂಪು ಹೋದತ್ತ ಹೋಗುವುದು ಬಹು ಕ್ಷೇಮದ ದಾರಿ ಇಲ್ಲವಾದರೆ, ಬಹು ಅಪಾಯವನ್ನು ಮನೋವ್ಯಥೆಯನ್ನು ಅನುಭವಿಸಬೇಕಾಗಿ ಬರುತ್ತದೆ ಈ ಲೋಕ ನಿಮ್ಮ ದಾರಿಯಲ್ಲಿ ನೀವು ಹೋಗುವುದನ್ನು, ತನ್ನ ದಾರಿಗೆ ಬರದವರನ್ನು ಸಹಿಸುವುದಿಲ್ಲ ರಾಜಶೇಖರ್."

" ಹಾಗೆಂದರೆ ವ್ಯಕ್ತಿಯ ಅಭಿಪ್ರಾಯ, ವ್ಯಕ್ತಿಯ ನಿರ್ಧಾರಕ್ಕೆ ಬೆಲೆಯೇ ಇಲ್ಲವೇ ? "

" ನೀವು ರಾಜಕಾರಣವನ್ನೇನಾದರೂ ಅಭ್ಯಾಸ ಮಾಡಿದೀರಾ ? "

" ಇಲ್ಲ ಸಾರ್."

" ಅದರ ಬಗ್ಗೆ ಕೆಲವು ಪುಸ್ತಕಗಳನ್ನಾದರೂ ಓದಿದ್ದೀರಾ ? "

" ಇಲ್ಲ."

" ಅಷ್ಟೋ ಇಷ್ಟೋ ಓದಿಕೊಳ್ಳುವುದು ಮೇಲು."

" ಇಲ್ಲಿ ನಮ್ಮ ಓದು ವಿನಾ ಬೇರಾವುದನ್ನೂ ಓದುವುದಕ್ಕೆ ಬಿಡುವೇ

ಸಿಗುವುದಿಲ್ಲ ಸಾರ್. ಎಷ್ಟು ಓದಿದರೂ, ಎಷ್ಟು ಅಭ್ಯಾಸ ಮಾಡಬೇಕಾಗಿತ್ತೋ ಅಷ್ಟಾಯಿತು ಎಂದು ಸಮಾಧಾನವೇ ಇರುವುದಿಲ್ಲ."

"ಅದು ನಿಜ. ಆದರೂ ನಿಮ್ಮ ಓದು, ನಿಮ್ಮ ಜಗತ್ತಿನಲ್ಲೇ ಮೈ ಮರೆತು ಕೂಡುವುದು ತಪ್ಪು. ತಕ್ಕಷ್ಟು ಮಟ್ಟಿಗಾದರೂ ಇತರ ವಿಷಯ ಗಳನ್ನು ತಿಳಿದುಕೊಳ್ಳಬೇಕು. ಹೋಗಲಿ. ನೋಡಿ – ಈಗ ನೀವು ವ್ಯಕ್ತಿ ಸ್ವಾತಂತ್ರ್ಯ ವ್ಯಕ್ತಿನಿರ್ಧಾರ ಎನ್ನುವ ಮಾತನ್ನು ಹೇಳಿದಿರಿ. ಆದ್ದರಿಂದ ಹೇಳುತ್ತೇನೆ. ಇಂದು ನಾವು ಪ್ರಜಾಪ್ರಭುತ್ವ ಎನ್ನುತ್ತೇವೆಲ್ಲಾ ಇದೊಂದು ದೊಡ್ಡ ವಿರೋಧಾಭಾಸ."

"ಏಕೆ ?"

"ನೋಡಿ ಪ್ರಜಾಪ್ರಭುತ್ವದ ಪರಮಗುರಿ, ಅಡಿಪಾಯ ಎರಡೂ ವ್ಯಕ್ತಿ. ರೂಸ್ವೆಲ್ಟ್ ಸಾರಿದ ಸ್ವಾತಂತ್ರ್ಯ ಚತುಷ್ಟಯದ ವಿಚಾರ ಕೇಳಿ ದೀರೊ ಇಲ್ಲವೋ? ಈ ಮಹಾ ಸಮರ ನಡೆದಿರುವುದು ಪ್ರತಿಯೊಬ್ಬ ವ್ಯಕ್ತಿಗೂ ವಿಚಾರ ಸ್ವಾತಂತ್ರ್ಯ, ರಾಜಕೀಯ ಸ್ವಾತಂತ್ರ್ಯ, ಜೀವನ ವಿಧಾನ ಸ್ವಾತಂತ್ರ್ಯ ಧಾರ್ಮಿಕ ಸ್ವಾತಂತ್ರ್ಯಗಳನ್ನು ಗಳಿಸಿ ಕೊಡಲು, ಅಲ್ಲವೇ ? ಇದು ಗುರಿ. ಅಲ್ಲದೆ ಎಲ್ಲ ಸಮಾಜದ ಕನಿಷ್ಟ ಮಿತಿ ವ್ಯಕ್ತಿ ಆದರೆ ಇಂದು ಪ್ರಜಾಪ್ರಭು ತ್ವದ ಹೆಸರಿನಲ್ಲಾಗುವುದೇನು ? ಮೊಟ್ಟ ಮೊದಲನೆಯದು ವ್ಯಕ್ತಿಸ್ವಾತಂ ತ್ರ್ಯದ ಬಲಿದಾನ ವ್ಯಕ್ತಿಯ ಬಾಳು ಗುಂಪಿನ ಇಷ್ಟ ಅನಿಷ್ಟಗಳಂತೆ ನಡೆ ಯಬೇಕು. ಇಲ್ಲವೇ ಅದರ ತುಳಿತಕ್ಕೆ ಸಿಕ್ಕಬೇಕು. ಇದು ಇಂದಿಗೆ ಹೊಸ ದೇನೂ ಅಲ್ಲ, ಗ್ರೀಸಿನ ಗುಂಪು ಸಾಕ್ರಟೀಸನಿಗೆ ವಿಷ ಕೊಟ್ಟ ದಿನದಿಂದಲೂ ಇದೇ ಹಾಡು. ಆದುದರಿಂದ ಜಗತ್ತಿನಲ್ಲಿ ಬದುಕ ಬೇಕೆನ್ನುವ ಮನುಷ್ಯ, ಈ ಕಠೋರ, ಹೃದಯ ವಿದ್ರಾವಕ ಸತ್ಯವನ್ನರಿತು ಅದಕ್ಕೆ ಅನುಗುಣವಾಗಿ ತನ್ನ ಬಾಳನ್ನು ರೂಪಿಸಿಕೊಳ್ಳಬೇಕು. ಇಲ್ಲವೇ ಸಾಕ್ರಟೀಸನಂತೆ ವಿಷಕುಡಿ ಯಲು, ಏಸುವಿನಂತೆ ಶಿಲುಬೆಗೇರಲು, ಗುಂಪಿನ ಕುಹಕ, ಅಣಕ, ಕಟು ನುಡಿ, ಪೀಡನೆ, ಛೇಡನೆಗಳಿಗೆ ಸಿದ್ಧವಾಗಬೇಕು."

"ಆದರೂ, ಆದರೂ ಅದೇ ಜಗತ್ತು ಇಂದು ಸಾಕ್ರಟೀಸ್, ಏಸು ವನ್ನೇ ಪೂಜಿಸುವುದಿಲ್ಲವೇ ?"

"ನಿಜ ಅದೂ ಗುಂಪಿನ ದಾರಿ. ಗ್ಯಾಲಿಲಿಯೋವನ್ನು ಅಂದು ನೋಡಿ ನಕ್ಕರು. ಪಾಶ್ಚರನ ವಿರುದ್ಧ ಕಲ್ಲು ಬೀರಿದರು. ಡಾರ್ವಿನ್ನಿಗೆ ಬಹಿಷ್ಕಾರ ಹಾಕಿದರು, ಗಾಂಧೀಜಿಯನ್ನು ಧರ್ಮವಿರೋಧಿ ಎಂದು ಅವರ ಹೆಸರು ಹೇಳಿ ಕಲ್ಲು ಕಟೆದರು, ಕಾರ್ಲ್ ಮಾರ್ಕ್ಸನ್ನು ಉಪವಾಸ ದೇಶ ದೇಶ ಅಲೆಸಿದರು–

ಇತಿಹಾಸದ ಉದ್ದಕ್ಕೂ ಇದೇ ಕಥೆಯೇ. ಆದರೆ ಗುಂಪು ಇಂದು ಯಾವನನ್ನು ಕೊಲ್ಲುತ್ತದೆಯೋ, ನಾಳೆ ಅವನನ್ನೇ ಪೂಜಿಸುತ್ತದೆ. ಅದು ಶತ ಶತಮಾನಗಳ ನಾಗರೀಕತೆಯ ಇತಿಹಾಸ ಎತ್ತಿ ಹಿಡಿದಿರುವ ಸತ್ಯ."

"ಹಾಗಾದರೆ ಈ ಗುಂಪಿನ ಕೂಗಿಗೆ ಹೆದರಬೇಕೇಕೆ?"

"ಹೆದರದೆ? ಚಿತ್ರಹಿಂಸೆ ನಡೆಯುವುದು ನೀನು ಬದುಕಿರುವಾಗ; ಮನ್ನಣೆ ಬರುವುದು ಸತ್ತಮೇಲೆ, ಮನುಷ್ಯ ಸುಖವಾಗಿರಬಯಸುವುದು ಬದುಕಿರುವಾಗಲೇ ವಿನಾ ಸತ್ತ ಮೇಲಲ್ಲ. ಆದ್ದರಿಂದ ಹೆದರಬೇಕಾಗಿ ಬರುತ್ತದೆ. ನೀನು ಜೀವ ವಿಜ್ಞಾನವನ್ನು ಓದಿದ್ದೀಯಲ್ಲ. ಅದರ ಮೂಲ ಭೂತ ಸತ್ಯ, ತತ್ವ ಏನೆಂದು ಅರಿವಾಗಿದೆಯೇ?"

"ಏನು ಸಾರ್?"

"ಜೀವ–ಅದು ಪಶುವಿನದಾಗಬಹುದು, ಸಸ್ಯದ್ದಾಗಬಹುದು, ಮಾನವನದಾಗಬಹುದು—ಅದು ಬದುಕುವುದು ಪರಿಸರಕ್ಕೆ ಹೊಂದಿಕೊಳ್ಳುವುದರಿಂದ. ಲೇಖಕ ಮಿದುಳು ಬೆಳೆಸಿಕೊಳ್ಳುತ್ತಾನೆ, ಮೀನು ಜಾಲಪಾದವನ್ನು ಬೆಳೆಸಿಕೊಳ್ಳುತ್ತದೆ. ಇಲ್ಲವಾದರೆ ಬಾಳಿನ ಹೋರಾಟದಲ್ಲಿ ಬದುಕುವುದು ಸಾಧ್ಯವಿಲ್ಲ. ಹಾಗೇ ಈ ಗುಂಪಿನ ನಡುವೆ ಬದುಕುವ ಮನುಷ್ಯ, ಗುಂಪಿನ ಕೂಗಿನೊಂದಿಗೆ ತಿರುಗುವ ಬುದ್ಧಿಯನ್ನು ಬೆಳೆಸಿಕೊಳ್ಳಬೇಕು. There is safety in crowd (ಗುಂಪಿನಲ್ಲಿ ಸುರಕ್ಷತೆ ಇದೆ) ಎಂಬ ಮಾತನ್ನು ಕೇಳಿದೀಯೋ ಇಲ್ಲವೋ."

"ಕ್ಷಮಿಸಬೇಕು ಸಾರ್. ತಮ್ಮನ್ನೊಂದು ಮಾತು ಕೇಳುತ್ತೇನೆ. ತಾವು ಏನೂ ತಿಳಿದುಕೊಳ್ಳಬಾರದು."

"ತಪ್ಪು ತಿಳಿದುಕೊಳ್ಳುವುದಿಲ್ಲ. ಏನು ಬೇಕೋ ಕೇಳು"

"ನಾನಷ್ಟು ಬುದ್ಧಿವಂತನಲ್ಲ, ವ್ಯವಹಾರ ಜ್ಞಾನ ನನಗಷ್ಟು ತಿಳಿಯದು. ಆದುದರಿಂದ ಕೇಳುತ್ತಿದ್ದೇನೆ. ಒಂದು ವೇಳೆ, ತಾವೇ ನನ್ನ ಪರಿಸ್ಥಿತಿಯಲ್ಲಿದ್ದಿದ್ದರೆ ಏನು ಮಾಡುತ್ತಿದ್ದಿರಿ?"

ನನ್ನ ಮಾತು ಕೇಳಿ ಡಾಕ್ಟರು ಗಟ್ಟಿಯಾಗಿ ನಕ್ಕುಬಿಟ್ಟರು. ಅವರ ನಗುವಿನ ಕಾರಣ ತಿಳಿಯದೆ, ನನ್ನ ಮೂರ್ಖ ಪ್ರಶ್ನೆಯೇ ಅವರ ನಗುವಿಗೆ ಕಾರಣವಾಯಿತೇನೋ ಎಂದು ತಿಳಿದು ಪೆಚ್ಚಾಯಿತು. ಅವರ ನಗುವಿನ ಇದಿರು ಏನು ಮಾತಾಡಲೂ ತೋಚದೆ ಸುಮ್ಮನೆ ಕುಳಿತುಬಿಟ್ಟೆ. ಒಂದೆರಡು ನಿಮಿಷಗಳ ಬಳಿಕ ತಮ್ಮ ನಗುವನ್ನು ಹತೋಟಿಗೆ ತಂದುಕೊಂಡು ಹೇಳಿದರು ಡಾಕ್ಟರ್—

"ಕ್ಷಮಿಸು ರಾಜಶೇಖರ್."

" ನಿಜ ಸಾರ್. ನನ್ನ ಪ್ರಶ್ನೆ ಯಾರಾದರೂ ಕೇಳಿ ನಗುವ ಹಾಗೇ ಇತ್ತು "

" ಊಹೂ. ನಿಮ್ಮ ಪ್ರಶ್ನೆ ಕೇಳಿ ನಗು ಬರಲ್ಲಿಲ್ಲ. ಇವೊತ್ತು ಬೆಳಗ್ಗೆ ಆಸ್ಪತ್ರೆಗೆ ಹೋದಾಗ ಒಂದು ಘಟನೆ ನಡೆಯಿತು. ನಿಮ್ಮ ಪ್ರಶ್ನೆಯಿಂದ ಅದು ನೆನಪಾಗಿ ನಗು ಬಂತು."

" ಏನಾಯಿತು ಸಾರ್ ? "

" ಈ ದಿನ ಬೆಳಗ್ಗೆ ನಾನು ಆಸ್ಪತ್ರೆಗೆ ಹೋಗಿದ್ದಾಗ, ಮೆರವಣಿಗೆ ಹುಡುಗರ ಗುಂಪೊಂದು ಆಸ್ಪತ್ರೆಯ ಬಳಿ ಬಂದು ಕೂಗಲಾರಂಭಿಸಿತು. ನನ್ನ ಕೋಣೆಯಲ್ಲಿ ರೋಗಿಗಳ ಪರೀಕ್ಷೆ ಮಾಡುತ್ತಿದ್ದ ನಾನು ಆ ಗದ್ದಲ ಕೇಳಿ ಹೊರಗೆ ಬಂದು ' ಏನಾಗಬೇಕು ? ' ಎಂದು ಕೇಳಿದೆ. ಆ ಗುಂಪಿನ ಮುಖಂಡ ಒಬ್ಬ ೧೭–೧೮ ವರ್ಷದ ಹುಡುಗ. ಆ ಹುಡುಗ ಧೈರ್ಯವಾಗಿ ಮುಂದೆ ಬಂದು ' ನೀವು ನಿಮ್ಮ ಕೆಲಸಕ್ಕೆ ರಾಜೀನಾಮೆ ಕೊಡಬೇಕು ' ಎಂದ. ' ಏಕೆ ? ' ಎಂದು ಕೇಳಿದೆ. ' ಈ ಸಾಮ್ರಾಜ್ಯ ಶಾಹೀ ಸರ್ಕಾರದ ಗುಲಾಮ ಗಿರಿಯ ಬೇಡಿಯನ್ನು ಮುರಿಯಲು, ಗಾಂಧೀಜಿಯ ಬಂಧನದ ವಿರುದ್ಧ ನಿಮ್ಮ ಪ್ರತಿಭಟನೆ ಸೂಚಿಸಲು ಹೆಂಡತಿ ಮಕ್ಕಳ ಹೊಟ್ಟೆಯ ಚಿಂತೆ ಮಾಡಿ ಹೇಡಿ ಗಳಾಗಬೇಡಿ ' ಎಂದ. ಅವನ ಭಾಷಣವನ್ನು ಕೇಳಿ ಗುಂಪು ಚಪ್ಪಾಳೆ ತಟ್ಟಿ ಜಯಘೋಷ ಮಾಡಿತು. ಅದನ್ನು ಕೇಳಿ ಆ ಹುಡುಗನ ಎದೆ ಅರಿಂಚು ಅರಳಿತು. ಅವನ ಮಾತು ಕೇಳಿದ ಆರ್ಡರ್ಲಿಗಳು ಅವನನ್ನು ಹೊಡೆಯುವುದ ರಲ್ಲಿದ್ದರು. ಗುಂಪಿನ ಜೊತೆಗೆ ಬಂದ ಪೋಲೀಸ್‌ನವನೊಬ್ಬನು ಅವನನ್ನು ಬೆದರಿಸಲು ಸಿದ್ಧವಾಗಿ ನನ್ನ ಬಳಿ ಬಂದು ನಿಂತ. ಪೋಲೀಸಿನವನನ್ನು ಕಂಡ ಗುಂಪು ಮತ್ತಷ್ಟು ಚೀರತೊಡಗಿತು. ಆದರಿಂದ ಹೆದರಿದ ಪೋಲೀಸ್ ಹತ್ತಿರ ದಲ್ಲೇ ದೇವರಾಜ ಪೋಲೀಸ್ ಸ್ಟೇಷನ್ನಿನ ಬಳಿ ನಿಂತಿದ್ದ ಪೋಲೀಸ್ ವ್ಯಾನನ್ನು ಕರೆಯುತ್ತೇನೆ ಎಂದ. ನಾನೇ ಬೇಡವೆಂದೆ."

ಅವರು ಹೇಳಿದುದನ್ನು ಕೇಳಿ ಏಕೋ ನನ್ನ ನೆತ್ತರು ಕುದಿಯುತ್ತಿತ್ತು.

" ಕರೆಸಲು ಬಿಡಬೇಕಾಗಿತ್ತು " – ಎಂದೆ.

" ಛೇ. ವಿನಾಕಾರಣ ಅನಾಹುತವಾಗುತ್ತಿತ್ತು."

" ಹಾಗಾದರೇನು ಮಾಡಿದಿರಿ ? "

" ಏನೂ ಮಾಡಲಿಲ್ಲ. ಆ ಗುಂಪಿನ ಚೀರಾಟ ಕೊಂಚ ಶಾಂತವಾದ ಮೇಲೆ ನನ್ನೊಂದಿಗೆ ಮಾತನಾಡಿದ ಹುಡುಗನನ್ನು ನೀನೇ ಈ ಗುಂಪಿನ ಲೀಡರೋ ? ಎಂದೆ ' ಹೌದು ' ಎಂದು ಹೆಮ್ಮೆಯಿಂದ ತಲೆಯಲ್ಲಾಡಿಸಿದ. ' ಹಾಗಾದರೆ ನೋಡು, ನಿನ್ನ ಸಂಗಡಿಗರಿಗೆ ಹೇಳು. –ಇದು ಆಸ್ಪತ್ರೆ. ಇಲ್ಲಿ

ಗದ್ದಲ ಮಾಡಿದರೆ, ನನಗಲ್ಲ, ಇಲ್ಲಿರುವ ರೋಗಿಗಳಿಗೆ ತುಂಬಾ ತೊಂದರೆಯಾಗುತ್ತದೆ. ಗದ್ದಲ ಮಾಡಬೇಡಿ' ಎಂದೆ. 'ಹಾಗಾದರೆ ನೀವು ರಾಜೀನಾಮೆ ಕೊಟ್ಟು ಬನ್ನಿ. ನಾವು ಗದ್ದಲಮಾಡುವುದಿಲ್ಲ ಎಂದ 'ನಾನು ರಾಜಿನಾಮೆ ಕೊಡವುದೇ ನಿಮಗೆ ಬೇಕು ತಾನೇ. ಆದರೆ ಇಲ್ಲಿ ಬಾ. ನಾನು ತೋರಿಸುವುದನ್ನು ನೋಡು. ಬಳಿಕ ನೀನು ರಾಜೀನಾಮೆ ಕೊಡು ಎಂದರೆ ಕೊಟ್ಟುಬಿಡುತ್ತೇನೆ.' ಎಂದೆ. 'ನಿಜವೋ ?' ಎಂದು ಕೇಳಿದ ಆ ಹುಡುಗ. 'ನಿಜವಾಗಿಯೂ ಗಾಂಧೀಜಿಯ ಆಣೆಯಾಗಿಯೂ. ನಂಬಿಕೆಯಾಯಿತೇ ?' ಎಂದೆ. 'ಆಗಲಿ, ಅದೇನು ತೋರಿಸುತ್ತೀರೋ ಬನ್ನಿ' ಎಂದು ಆ ಹುಡುಗ ನನ್ನೊಂದಿಗೆ ಬರಲು ಸಿದ್ಧವಾದ. ಆದರೆ ಇನ್ನೊಬ್ಬ—'ಒಳಗೆ ಹೋಗಬೇಡ. ಒಳ್ಳೇ ಮಾತಾಡಿ ಒಳಗೆ ಕರೆದುಕೊಂಡು ಹೋಗಿ ಪೋಲೀಸರಿಗೆ ಹಿಡಿದು ಕೊಡುತ್ತಾರೆ. ಈ ಹೇಡಿಗಳನ್ನು ನಾನು ಬಲ್ಲೆ. ಇವರು ಬ್ರಿಟೀಷರ ಫಿಫ್ತ್ ಕಾಲಂ' ಎಂದ. ಅವನಾಡಿದುದನ್ನು ಕೇಳಿ ನನ್ನ ಬಳಿ ಇದ್ದ ಪೋಲೀಸಿನವನಿಗೆ, ಗದ್ದಲವೇನೆಂದು ನೋಡಲುಬಂದು ನನ್ನ ಹಿಂದೆ ನಿಂತಿದ್ದ ಕೆಲವರು ನರ್ಸುಗಳಿಗೆ ರೇಗಿತು. ಪೋಲೀಸಿನವನು 'ಈ ಪೋಕರಿಗಳ ಹತ್ತಿರ ಮಾತೇನು ಸಾರ್. ನಾಲ್ಕು ಲತ್ತ ಬಿದ್ದರೆ ಸರಿಹೋಗುತ್ತಾರೆ' ಎಂದ. ಮೇಟ್ರನ್ 'ಸ್ಟೇಷನ್‌ಗೆ ಫೋನ್ ಮಾಡಲೆ ?' ಎಂದಳು 'ಸುಮ್ಮನಿರಿ' ಎಂದು ಅವರಿಗೆ ಹೇಳಿ, ತನ್ನ ಜೊತೆಗಾರನ ಮಾತು ಕೇಳಿ, ನನ್ನೊಂದಿಗೆ ಬರಲು ಸಂದೇಹಿಸುತ್ತಿದ್ದ ಹುಡುಗನಿಗೆ 'ಏನು ಮಗೂ, ನೀನು ಸಾಹಸಿಯೋ ಹೇಡಿಯೋ ?' ಎಂದೆ. ಆ ಪ್ರಶ್ನೆ ಅವನನ್ನು ಕೆರಳಿಸಿತು. 'ನಡೆಯಿರಿ ಬರುತ್ತೇನೆ' ಎಂದ.

'ಹಾಗಾದರೆ ನೀನು ಬರುವವರೆಗೂ ಗದ್ದಲ ಮಾಡದಂತೆ ಈ ಗುಂಪಿನವರಿಗೆ ಹೇಳಿ ಬಾ' ಎಂದೆ. ಅವನು ಅದರಂತೆಯೇ ಅವರಿಗೆ ಅಪ್ಪಣೆ ಮಾಡಿ ಬಂದ. ನನ್ನ ಹಿಂದಿದ್ದವರಿಗೂ 'ಹುಚ್ಚಾಪಟ್ಟೆ ಮಾತಾಡಿ ಗುಂಪನ್ನು ಕೆರಳಿಸಬೇಡಿ' ಎಂದು ಹೇಳಿ ಆ ಹುಡುಗನನ್ನು ಕರೆದುಕೊಂಡು ಕಾಂತರಾಜಾ ವಾರ್ಡಿಗೆ ಬಂದ. ಅಲ್ಲಿ ಸಾಲುಸಾಲಾಗಿ ಮಲಗಿದ್ದ ರೋಗಿಗಳನ್ನು ತೋರಿಸಿ 'ನೋಡು ಮಗೂ, ನಾನು ಸಂಬಳ ತಿನ್ನುತ್ತಿರುವುದು ದೇಶಕ್ಕೆ ದ್ರೋಹ ಬಗೆಯಲಲ್ಲ ; ಸಾವಿನ ಹೊಸ್ತಿಲ ಮೇಲಿರುವ ಇವರನ್ನು ಸಾಧ್ಯವಾದರೆ ಬದುಕಿಸಲು , ಅದಕ್ಕಾಗಿ ಹಗಲಿರುಳೂ ದುಡಿಯಲು. ನಾನು ಚಳುವಳಿಗೆ ಸೇರಿದರೆ ಇವರನ್ನೇನು ಮಾಡಲಿ ಹೇಳು. ನಿನ್ನ ಅಕ್ಕನೋ, ತಂಗಿಯೋ, ತಂದೆಯೋ, ತಾಯಿಯೊ ಆಸ್ಪತ್ರೆಯಲ್ಲಿದ್ದರೆ ಬಿಟ್ಟು ಬಾ ಎನ್ನುತ್ತಿದ್ದೆಯಾ?

ಯೋಚನೆ ಮಾಡು ' ಎಂದೆ.

ಒಂದು ಗಳಿಗೆ ಅವನಿಗೆ ಏನು ಹೇಳಲೂ ತೋಚಲಿಲ್ಲ. ಸುಮ್ಮನೆ ಆ ರೋಗಿಗಳನ್ನೆಲ್ಲಾ ನೋಡಿದ. ತನ್ನ ಪ್ರಶ್ನೆಯ ಮೂರ್ಖತನ ಅವನಿಗೆ ಅರಿವಾಯಿತು. ' ನೋಡು ಇದರಲ್ಲಿ ಬ್ರಿಟಿಷ್‌ನವರು ಎಷ್ಟು ಮಂದಿ ಇದ್ದಾರೋ, ನಾನು ದುಡಿಯುತ್ತಿರುವುದು ಬ್ರಿಟಿಷರಿಗಾಗಿಯೋ ನಿಮಗಾಗಿಯೊ ?' ಎಂದೆ. ಆ ಹುಡುಗ ಪೆಚ್ಚಾಗಿ ' ನನ್ನದು ತಪ್ಪಾಯಿತು, ಕ್ಷಮಿಸಿ ಸಾರ್ ' ಎಂದ. ' ಆದ್ದರಿಂದ ನೋಡಿ, ಇವರಿಗೆ ತೊಂದರೆ ಮಾಡಬೇಡಿ. ಗದ್ದಲ ಮಾಡಬೇಡಿ. ಹೋಗಿ ನೀನು ಸ್ವಾತಂತ್ರ್ಯ ಗಳಿಸು, ನಾನು ಜೀವ ಉಳಿಸುತ್ತೇನೆ. ಆಗಬಹುದೆ ? ' ಎಂದೆ. ' ಆಗಲಿ ಸಾರ್. ಆದರೆ ಒಂದು ಮಾತು, ಎಂದ ' ಏನು ಹೇಳು ?' ಎಂದೆ. ' ನೋಡಿ ಸಾರ್. ನೀವೂ ಭಾರತೀಯರು, ನಿಮ್ಮ ಸಹಾನುಭೂತಿ ನಮ್ಮ ಚಳುವಳಿಗಿಲ್ಲವೆ ?' 'ಇದೆ.' ಹಾಗಾದರೆ ಅದಕ್ಕೆ ಗುರುತಾಗಿ ಈ ಗಾಂಧೀ ಟೋಪಿ ಇಟ್ಟುಕೊಳ್ಳಿ ' ಎಂದು ಹೇಳಿ ತನ್ನ ತಲೆಯ ಮೇಲಿದ್ದ ಗಾಂಧೀ ಟೋಪಿ ನನ್ನ ತಲೆಯ ಮೇಲಿಟ್ಟು, ತನ್ನ ಎದೆಗೆ ಸಿಕ್ಕಿಸಿಕೊಂಡಿದ್ದ ಬಾವುಟವನ್ನು ನನ್ನ ಎದೆಗೆ ಸಿಕ್ಕಿಸಿದ. ' ಥ್ಯಾಂಕ್ಯೂ. ಸಾಯುವವರೆಗೂ ಇದನ್ನು ನೆನಪಾಗಿ ಇಟ್ಟುಕೊಳ್ಳುತ್ತೇನೆ' ಎಂದೆ ಅಲ್ಲಿಂದ ಹೊರಬಂದು ಅವನ ಗುಂಪಿಗೆ ಅವನನ್ನು ಒಪ್ಪಿಸಿದೆ.

ಗುಂಪಿಗೆ ತಮ್ಮ ನಾಯಕ ಸುರಕ್ಷಿತವಾಗಿ ಬಂದುದನ್ನು ಕಂಡು, ನನ್ನ ತಲೆಯ ಮೇಲೆ ಗಾಂಧೀ ಟೋಪಿ, ಎದೆಯ ಮೇಲೆ ಕಾಂಗ್ರೆಸ್ಸು ಬಾವುಟ ಇದ್ದುದನ್ನು ನೋಡಿ ಮನಸ್ಸಿಗೆ ಕೊಂಚ ಸಮಾಧಾನವಾಯಿತು ಗೆಲುವಿನಿಂದ ' ಗಾಂಧೀಕೀ ಜೈ ' ಎಂದು ಕೂಗಿದರು. ಆ ಹುಡುಗನೇ ಗುಂಪಿನಲ್ಲಿದ್ದ ಕೆಲವರಿಗೆ ಬುದ್ಧಿಹೇಳಿ, ಗದ್ದಲಮಾಡದಂತೆ ಮಾಡಿ, ಅವರನ್ನು ಅಲ್ಲಿಂದ ಕರೆದುಕೊಂಡು ಹೋದ. ನಾನೂ ನನ್ನ ಕೆಲಸಕ್ಕೆ ಮನಸ್ಸು ಕೊಟ್ಟೆ.

ನಿಮ್ಮ ಪ್ರಶ್ನೆಗೆ ಈಗ ಉತ್ತರ ಸಿಕ್ಕಿತೇ ರಾಜಶೇಖರ್ ? "

—ಎಂದರು ಡಾಕ್ಟರ್ ನಂಬಿಯಾರ್.

" ಸಿಕ್ಕಿತು ಸಾರ್ "–ಎಂದೆ.

" ನನ್ನ ನಂಬಿಕೆ ಇಷ್ಟು. ದೇಶಸೇವೆ ಮಾಡಬೇಕು. ಅದು ಭಾರತೀಯರಾಗಿ ಜನಿಸಿದವರೆಲ್ಲರ ಕರ್ತವ್ಯ. ಆದರೆ ದೇಶಸೇವೆ ಮಾಡಲು ಎಲ್ಲರೂ ಚಳುವಳಿಗಾರರೇ ಆಗಬೇಕಾಗಿಲ್ಲ ಸೆರೆಮನೆಗೆ ಹೋದ ಮಾತ್ರಕ್ಕೇ ದೇಶೋದ್ಧಾರ ಮಾಡಿದಂತಾಗಲಿಲ್ಲ."

" ಹಾಗೆ ಮಾಡುವುದು ತಪ್ಪೇ ? "

" ಛೇ, ಎಲ್ಲಾದರೂ ಹಾಗೆಂದವರುಂಟೇ ? ಕೆಲವರು ಚಳುವಳಿ ಮಾಡುವವರು, ಕೆಲವರು ಸೆರೆಮನೆಗೆ ಹೋಗುವವರು, ಕೆಲವರು ಬರಿ ಭಾಷಣ ಮಾಡುವವರು. ಕೆಲವರು ಸದ್ದಿಲ್ಲದೆ ದುಡಿಯುವವರು, ಕೆಲವರು ತಮ್ಮ ತಮ್ಮ ವೃತ್ತಿರಂಗದಲ್ಲೇ ಇದ್ದು ಸೇವೆ ಮಾಡುವವರು. ಇಟ್ ಟೇಕ್ಸ್ ಆಲ್ ಸಾರ್ಟ್ಸ್ ಟು ಮೇಕ್ ಎ ಮೂವ್‌ಮೆಂಟ್. ಯಾರಿಲ್ಲದಿದ್ದರೂ ಚಳುವಳಿ ಸಂಪೂರ್ಣವಾಗುವುದಿಲ್ಲ. ಆದರೂ ಅವರವರ ದಾರಿ ಅವರವರಿಗೆ."

" ಅದು ಸರಿ ಸಾರ್. ಈಗ ನಾನೇನು ಮಾಡಲಿ ? ಮುಷ್ಕರಗಾರರೊಂದಿಗೆ ಸೇರುವುದೇ, ಅಥವಾ ನನ್ನ ಪಾಡಿಗೆ ನಾನು ಕಾಲೇಜಿಗೆ ಹೋಗುವುದೇ?"

" ಅದು ನೀವು ಮಾಡಬೇಕಾದ ನಿರ್ಧಾರ. ಅಲ್ಲವೇ ? "

" ಆದರೆ ನನಗೇನೂ ತೋಚುತ್ತಿಲ್ಲ. ಅದಕ್ಕೇ ನಿಮ್ಮ ಬಳಿಬಂದೆ."

" ಅದಕ್ಕೆ ನಾನೇನು ಹೇಳಬಲ್ಲೆ ರಾಜಶೇಖರ್. ನಿಮ್ಮ ನಿರ್ಧಾರ ಹೇಗಿದೆಯೋ ಹಾಗೆ ನಡೆಯಿರಿ. ನೀವೇನು ಮಾಡುತ್ತಿದ್ದಿರಿ ಎಂದು ಕೇಳಿದಿರಿ. ನಾನೇನು ಮಾಡಿದೆ ಎಂದು ಹೇಳಿದೆ ಜೀವನದಲ್ಲಿ ಒಬ್ಬೊಬ್ಬರೂ ತಮ್ಮ ತಮ್ಮ ನಿರ್ಧಾರದಂತೆ ನಡೆಯುವುದೇ ಮೇಲು. ಒಬ್ಬರ ನಿರ್ಧಾರ ಇನ್ನೊಬ್ಬರಿಗೆ ಸರಿಯಾಗದಿರಬಹುದು. ಡಿಸೆಕ್ಷನ್‌ನಲ್ಲಿ ನೀವು ನೋಡಿಲ್ಲವೇ ? ನಮ್ಮ ಮನಸ್ಸುಗಳಿರಲಿ – ನಮ್ಮ ಮೈಗಳೇ ತೋರಿಕೆಗೆ ಒಂದೇ ರೀತಿಯಾದರೂ, ಆಂತರಿಕ ರಚನೆ ಒಬ್ಬೊಬ್ಬರದು ಒಂದೊಂದು ಬಗೆ ಎಂಬುದನ್ನು ಈ ವೈವಿಧ್ಯತೆಯಿಂದಲೇ ಮಾನವ ಜೀವನ ಕಲಾಕೃತಿಯಾಗಿರುವುದು ರಾಜಶೇಖರ್. ನಿಮ್ಮ ಮನಸ್ಸಿನ ಮೇಲೆ ನನ್ನ ನಂಬಿಕೆಯನ್ನು ಹೇರಲು ನಾನು ಸಿದ್ಧವಾಗಿಲ್ಲ."

ಅವರ ಮಾತನ್ನು ಕೇಳಿ ನನಗೆ ಶ್ರೀಧರ ಹೇಳುತ್ತಿದ್ದ ಮಾತು ನೆನಪಾಯಿತು. ಎಲ್ಲಿ ಹೋದರೂ ಇದೇ ಸಲಹೆ – ನಿನಗೇನು ಬೇಕೋ ನೀನು ಮಾಡು, ಹೇಗೆ ಬೇಕೋ ಹಾಗಿರು.

ಎಲ್ಲರ ಮಾತೂ ಅದೇ, ಎಲ್ಲರ ಸಲಹೆಯೂ ಅದೇ.

ಆದರೆ ನಾನೇನು ಮಾಡಲಿ ?

ಡಾಕ್ಟರು ಹೇಳಿದುದನ್ನು ಕೇಳಿ ಒಂದು ಗಳಿಗೆ ಸುಮ್ಮನೆ ಚಿಂತಿಸಿದೆ. ಯಾವ ರೀತಿಯೂ ಕಾಣಲಿಲ್ಲ. ನನ್ನ ಬುದ್ಧಿ ಏಕೋ ಕತ್ತಲಕೂಪದಲ್ಲಿ ಮುಳುಗಿದಂತಿತ್ತು.

" ಏಕೆ ರಾಜಶೇಖರ್ ಸುಮ್ಮನೆ ಕುಳಿತುಬಿಟ್ಟಿರಿ ? "

—ನಾನು ಅವರ ಮಾತಿಗೆ ಉತ್ತರ ಕೊಡದೆ ಸುಮ್ಮನೆ ಕುಳಿತುದನ್ನು ಕಂಡು ಡಾಕ್ಟರೇ ಕೇಳಿದರು.

" ಏನೋ ಸಾರ್. ನನಗೊಂದೂ ತೋಚುತ್ತಿಲ್ಲ."

" ಹಾಗಾದರೆ ಏನು ಮಾಡುತ್ತೀರಿ ? "

" ಏನೋ – ನೀವು ದಯವಿಟ್ಟು ಹೀಗೆ ಮಾಡು ಎಂದು ಹೇಳಿದರೆ ನೀವು ತೋರಿದ ದಾರಿ ತುಳಿಯುತ್ತೇನೆ."

" ನೀವು ಜೀವನದಲ್ಲಿ ಬಹಳ ಭಯಂಕರವಾದ ದಾರಿ ತುಳಿಯುತ್ತಿದೀರಿ ರಾಜಶೇಖರ್. ಜೀವನದಲ್ಲಿ ನೀವು ಆದಷ್ಟು ಬೇಗ, ಯಾರೊಬ್ಬರ ಸಲಹೆಯೂ ಇಲ್ಲದೆ, ನಿಮ್ಮ ನಿರ್ಧಾರಕ್ಕೆ ನೀವೇ ಬರುವ ಬುದ್ಧಿಬಲವನ್ನು ಬೆಳೆಸಿಕೊಳ್ಳ ಬೇಕು. ಇಲ್ಲವಾದರೆ ಬಹಳ ಕಷ್ಟ ಮನೋಯಾತನೆ ಅನುಭವಿಸಬೇಕಾಗುತ್ತದೆ."

" ನಿಮ್ಮ ಮಾತು ಸರಿ ಸಾರ್. ಆ ಬುದ್ಧಿ ಬೆಳೆಸಿಕೊಳ್ಳುವುದು ಹೇಗೆ?"

" ಆ ಬಗೆಯ ಬುದ್ಧಿ ಬೆಳಸಿಕೊಳ್ಳಬೇಕು ಎಂಬ ಬುದ್ಧಿ ಬಂದಾಗ. ನಾಳೆ ನೀವು ಡಾಕ್ಟರಾದಾಗ ರೋಗಿ ಬಂದರೆ ಏನು ಔಷಧಿ ಕೊಡಬೇಕೆಂದು ಕೇಳಲು ನನ್ನ ಬಳಿ ಓಡಿಬರುತ್ತೀರಾ ? ನೀವೇ ಲಕ್ಷಣವನ್ನರಿತು, ಡೈಯಾಗ್ನೈಸು ಮಾಡಿ ಔಷಧ ಕೊಡುವುದಿಲ್ಲವೇ ? ಹಾಗೇ."

" ಅದೇನೋ ಸರಿ ಸಾರ್ ಆದರೆ ನಾನು ಡಾಕ್ಟರಾಗುವ ವೇಳೆಗೆ ನಿಮ್ಮಂಥವರಿಂದ ಸಾಕಷ್ಟು ಶಿಕ್ಷಣ ಪಡೆದಿರುತ್ತೇನಲ್ಲಾ. ಅಲ್ಲಿ ಹೇಗೋ ಇಲ್ಲೂ ಹಾಗೇ ಬುದ್ಧಿ ಹೇಳಿಕೊಡಿ ಎಂದೇ ನಿಮ್ಮ ಬಳಿ ಬಂದೆ."

" ಅಂತೂ ನಾನೇ ದಾರಿ ತೋರಿಸಬೇಕು ಎನ್ನಿ "

" ಹೌದು ಸಾರ್."

" ನಾನು ಹೀಗೆ ಮಾಡಿ ಎಂದು ಹೇಳಿದರೆ ಹಾಗೆ ಮಾಡಿ, ಬಳಿಕ ಬಂದಿದ್ದನ್ನು ಅನುಭವಿಸಲು ಸಿದ್ಧವಾಗಿದೀರಾ ? "

" ಸಿದ್ಧವಾಗಿದೀನಿ ಸಾರ್."

" ಹಾಗಾದರೆ ಸರಿ. ಚಳುವಳಿಯ ಪಾಡಿಗೆ ಚಳುವಳಿ ನಡೆಯಲಿ, ನಿಮ್ಮ ಪಾಡಿಗೆ ನೀವು ಕಾಲೇಜಿಗೆ ಹೋಗಿ."

" ಬಹಳ ಒಳ್ಳೆಯ ಉಪದೇಶ ಮಾಡುತ್ತಿದೀರಿ. ನಿಮ್ಮ ಮಾತು ಕೇಳಿ ಇವರು ಕಾಲೇಜಿಗೆ ಹೋಗಿ, ಹುಡುಗರಿಂದ ಕಲ್ಲೇಟು ತಿನ್ನಬೇಕೆ ? "

—ಆಗತಾನೆ ನಮಗೆ ಕೊಡಲೆಂದು ಕಾಫಿ ತೆಗೆದುಕೊಂಡು ಬಂದ ಡಾಕ್ಟರ ಹೆಂಡತಿ ಹೇಳಿದರು.

" ಇವರದಕ್ಕೆ ಸಿದ್ಧವಾಗಿದಾರೆ ಕುಸುಂ. ನನ್ನ ಮಾತು ಕೇಳಬೇಕು ಎನ್ನುವವರು ಕೇಳಿ ಕೆಡಲೂ ಸಿದ್ಧರಾಗಿರಬೇಕು. ಅಲ್ಲವೇ ರಾಜಶೇಖರ್ ? "

" ಹೌದು ಸಾರ್."

" ಅಂದರೆ – ಸುಧೀರನ ಹಾಗೆ ಇವರೂ ಏಟು ತಿಂದು ಮಲಗಿದರೆ ನಿಮಗೆ ಸಮಾಧಾನವೇ ? "

ಸುಧೀರ್ ಡಾಕ್ಟರ ಮಗ. ಅವನಿಗೆ ಏಟು ಬಿತ್ತು ಎಂದು ಕೇಳಿ ನನಗೆ ಗಾಬರಿಯಾಯಿತು.

" ನಿಮ್ಮ ಮಗನಿಗೆ ಏಟು ಬಿತ್ತೆ ಸಾರ್ ? "

" ಹೂ. ಅವರು ಕಲ್ಲು ಬೀರಿ ದೇಶ ಸೇವೆ ಮಾಡಿದರು ; ಇವನು ಏಟು ತಿಂದು ದೇಶಸೇವೆ ಮಾಡಿದ. ಎಲ್ಲಾ ದೇಶಸೇವೆ. ನಡೆಯಿಲಿ. ರಜನಿ ಎಲ್ಲಿ ಕುಸುಂ ? ಮನೆಯಲ್ಲಿದ್ದ ಹಾಗಿಲ್ಲ."

" ಅವಳು ಗೆಳತಿಯರೊಂದಿಗೆ ಚಳುವಳಿಗೆ ಹೊರಟಿದಾಳೆ. ಬೇಡ ವೆಂದರೂ ಕೇಳಲಿಲ್ಲ."

" ಹೋಗಲಿ ಬಿಡು."

" ನಿಮಗೇನು ? ಹಾಯಾಗಿ ಹೋಗಲಿ ಬಿಡು ಎನ್ನುತ್ತೀರ. ನನಗೆ ತಾನೇ ದಿಗಿಲು."

" ನಿನಗೇಕೆ ದಿಗಿಲು ಕುಸುಮಾ ? "

" ಇವನು ಹುಡುಗರಿಂದ ಏಟು ತಿಂದು ಬಂದ ; ಅವಳು ಪೋಲೀಸರಿಂದ ಏಟು ತಿಂದು ಬರಲಿ. ಯಾರಿಗೂ ಭಯವಿಲ್ಲ. ಎಲ್ಲರ ಭಯವೂ ನನ್ನೊಬ್ಬಳಿಗೇ ಬಂದಿದೆ. ಬೆಳಗ್ಗೆ ಆಸ್ಪತ್ರೆ ಹತ್ತಿರ ಗದ್ದಲವಾಯಿತು ಎಂದು ಕೇಳಿ ನನ್ನ ಜೀವವೇ ಹಾರಿಹೋಗಿತ್ತು."

—ಕಕ್ಕುಲತೆಯಿಂದ ಹೇಳಿದರು ಡಾಕ್ಟರ ಪತ್ನಿ.

ಡಾಕ್ಟರು ಆಕೆಯ ಮಾತು ಕೇಳಿ, ಉತ್ತರ ಕೊಡದೆ ಸುಮ್ಮನೆ ಆಕೆಯ ಬೆನ್ನು ನೇವರಿಸಿದರು. ಮೂಕ ಕೈನೇವರಿಕೆಯಲ್ಲಿ ಅನಂತ ಸಹಾನುಭೂತಿಯ ಮಾರ್ದವತೆಯಿದ್ದಂತಿತ್ತು.

" ನನ್ನ ಮಾತು ಕೇಳಿ. ನೀವು ಸುಮ್ಮನೆ ಎರಡು ದಿನ ಈ ಗದ್ದಲ ಅಡಗುವವರೆಗೂ ರಜಾ ತೆಗೆದುಕೊಂಡು ಬಿಡಿ. ನೀವೂ ಅಷ್ಟೇ ರಾಜಶೇಖರ್. ಈ ಚಳುವಳಿ ಬೇಡವಾದರೆ ಊರಿಗೆ ಹೊರಟುಹೋಗಿ."

ಡಾಕ್ಟರ ಪತ್ನಿಯವರು ಆಡಿದ ಆ ಮಾತಿನಲ್ಲಿ ಮರಿ ಹಕ್ಕಿಗೆ ಎಲ್ಲಿ ನೋವಾದೀತೋ ಎಂದು ಬೆದರುವ ತಾಯಿ ಹಕ್ಕಿಯ ಎದೆ ಬೇಗೆಯ ಆರ್ತತೆ ಯಿತ್ತು. ಅವರ ಮಾತನ್ನು ಕೇಳಿ ಡಾಕ್ಟರು ಮೃದುವಾಗಿ ನಕ್ಕು ಹೇಳಿದರು—

" ನಾನು ಚಳುವಳಿಗೆ ಹೆದರಿದೆ ಅಂತ ರೋಗವೂ, ಸಾವೂ ಹೆದರಿ ರಜಾ ತೆಗೆದುಕೊಳ್ಳುವುದಿಲ್ಲ ಕುಸುಂ. ಅವು ಎಲ್ಲಿಯವರೆಗೆ ಡ್ಯೂಟಿಯಮೇಲಿರು

ತ್ರವೋ, ಅಲ್ಲಿಯವರೆಗೂ ನಾನೂ ಡ್ಯೂಟಿಯ ಮೇಲಿರಬೇಕು."

" ಎಂದೂ ನೀವು ನನ್ನ ಮಾತು ಕೇಳಿಲ್ಲ. ಹೇಗೆ ಬೇಕೊ ಹಾಗೆ ಮಾಡಿ. ಏನಾಗುವುದೋ ಎಂದು ಹೆದರಿ ಸಾಯುವುದು ನನ್ನ ಹಣೆಯಲ್ಲಿ ಬರೆದಿದೆ "

—ಎಂದು ಆಕೆ ಒಳಗೆ ಹೋದರು. ಡಾಕ್ಟರು ಮಾತನಾಡದೆ ಕಾಫಿ ಕುಡಿದು ಸಿಗರೇಟು ಹೊತ್ತಿಸಿದರು. ನಾನೂ ಸದ್ದುಮಾಡದೆ ಕಾಫಿ ಕುಡಿದೆ. ಡಾಕ್ಟರು ತಮ್ಮ ಹೆಂಡತಿಗೆ ಹೇಳಿದ ಮಾತನ್ನು ಕೇಳಿ, ನನ್ನ ದಾರಿ ಏನೆಂಬುದು ನಿರ್ಧರವಾಗಿತ್ತು. ಕಾಫಿ ಕುಡಿದು ಮುಗಿಸಿ—

" ಬರುತ್ತೇನೆ ಸಾರ್ "

—ಎಂದೆ.

" ಹೋಗುತ್ತೀರಾ ? ಏನು ನಿಶ್ಚಯ ಮಾಡಿದಿರಿ ? "

" ಕಾಲೇಜಿಗೆ ಹೋಗುತ್ತೇನೆ."

" ಸರಿ. ಅಪಾಯದ ದಾರಿಯನ್ನೇ ಆರಿಸಿಕೊಂಡಿರಿ. ವಿಷ್ ಯು ಸಕ್ಸೆಸ್."

" ಥ್ಯಾಂಕ್ಯೂ ಸಾರ್."

—ಎಂದು ಹೇಳಿ ಡಾಕ್ಟರ ಮನೆಯಿಂದ ಹೊರಬಿದ್ದೆ

* * *

ನನ್ನ ಬಾಳದಾರಿ ನನ್ನ ಕಣ್ಣೆದುರು ನಿಚ್ಚಳವಾಗಿ ತೆರೆದಿತ್ತು.

" ಅಪಾಯದ ದಾರಿಯನ್ನೇ ಆರಿಸಿಕೊಂಡಿರಿ."

—ಡಾಕ್ಟರ ಮನೆಯಿಂದ ಬರುವಾಗ ಕಡೆಯ ಮಾತಾಗಿ ಅವರು ನನಗೆ ಇದನ್ನು ಹೇಳಿದ್ದರು. ಆದರೆ ಅದು ಬರೀ ಅಪಾಯದ್ದಷ್ಟೇ ಅಲ್ಲ. ಅವ ಮಾನದ್ದೂ ಎಂದು ಮಾರನೆಯ ದಿನವೇ ಮನವರಿಕೆಯಾಯಿತು.

ಬೆಳಗ್ಗೆ ಎದ್ದು ನಾನು ಡಿಸೆಕ್ಷನ್ ಕ್ಲಾಸಿಗಾಗಿ ಕಾಲೇಜಿನತ್ತ ಬಂದಾಗ ಕಾಲೇಜಿನ ಹೊರ ಬಾಗಿಲಿನಲ್ಲೇ ಮುಷ್ಕರಕಾರ ವಿದ್ಯಾರ್ಥಿಗಳ ಗುಂಪಿತ್ತು. ನಾನು ಬಾಗಿಲ ಬಳಿ ಬರುತ್ತಿದ್ದ ಹಾಗೆಯೇ, ಯುವತಿಯೊಬ್ಬಳು ಮುಂದೆ ಬಂದು—

" ನೀವು ಕಾಲೇಜಿಗೆ ಹೋಗಕೂಡದು. ನಮ್ಮೊಂದಿಗೆ ಸಹಕರಿಸಬೇಕು "

—ಎಂದಳು.

ಬಾಗಿಲ ಬಳಿ ನಿಂತ ಹುಡುಗರತ್ತ ತಲೆಯೆತ್ತಿ ನೋಡಲಾರದೆ ತಲೆ ತಗ್ಗಿಸಿಕೊಂಡು ಒಳಗೆ ಹೋಗುವುದರಲ್ಲಿದ್ದ ನಾನು ಆ ಮಾತನ್ನು ಕೇಳಿ ತಲೆಯೆತ್ತಿ ನೋಡಿದೆ.

ನಮ್ಮ ಕಾಲೇಜಿನ ಹುಡುಗಿಯೇ. ಆದರೆ ಮೊದಲ ವರ್ಷದ ನಮ್ಮ ಗುಂಪಿಗೆ ಸೇರಿದಾಕೆಯಲ್ಲ. ಎರಡನೆಯ ವರ್ಷದಲ್ಲೋ ಮೂರನೇ ವರ್ಷ ದಲ್ಲೋ ಓದುತ್ತಿರಬೇಕು. ಡಿಸೆರ್ಕ್ಷ ಥಿಯೇಟರಿನಲ್ಲಿ ನೋಡಿದ ನೆನಪು.

ಆಕೆಯ ಮಾತನ್ನು ಕೇಳಿ ನಾನು—

" ಕ್ಷಮಿಸಿ. ನಿಮ್ಮೊಂದಿಗೆ ನನ್ನ ಸಹಾನುಭೂತಿ ಇದೆ. ಆದರೆ ನನ್ನನ್ನು ತಡೆಯಬೇಡಿ " — ಎಂದೆ.

" ನಿಮ್ಮ ಸಹಾನುಭೂತಿ ಇದ್ದರೆ ಸಾಲದು. ನೀವೂ ನಮ್ಮೊಂದಿಗೆ ಇರಬೇಕು. ನಿಮ್ಮಂಥಹ ಒಂದೆರಡು ಕರಿಕುರಿಗಳಿಂದ ಚಳುವಳಿ ಭಂಗವಾಗ ಬಾರದು."

ಕರಿಕುರಿ ! ಎಷ್ಟು ಬೇಗ ಆ ಬಿರುದು ಬಂತು ನನಗೆ. ಆ ಹೆಸರು– ಅದೂ ಹೆಣ್ಣಿನ ಬಾಯಲ್ಲಿ. ಅದನ್ನು ಕೇಳಿ ನನ್ನ ಮೈ ನೆತ್ತರು ಕೊಂಚ ಬಿಸಿ ಯಾಯಿತು. ಕೊಂಚ ಖಾರವಾಗಿಯೇ ಉತ್ತರಕೊಟ್ಟೆ—

" ನಿಜ ನಿಮ್ಮಂತೆ ನಾನು ಬಿಳಿಕುರಿಯಲ್ಲ."

ನಾನಾಡಿದ ಮಾತನ್ನು ಕೇಳಿ, ಬಿಳಿಯ ಖಾದಿಯ ಸೀರೆಯನ್ನುಟ್ಟ ಆಕೆಯ ಮೋರೆ ಕೆಂಪಗಾಯಿತು. ನಮ್ಮಿಬ್ಬರ ನಡುವೆ ನಡೆಯುತ್ತಿದ್ದ ವಾಗ್ವಾದ ವನ್ನು ಕೇಳಿ, ಇನ್ನೂ ನಾಲ್ಕಾರು ಜನ ವಿದ್ಯಾರ್ಥಿಗಳು ನಮ್ಮ ಸುತ್ತ ನೆರೆದರು. ಒಬ್ಬ ಪೋಲೀಸಿನವನೂ ಬಂದು–

" ಶಾಲೆಗೆ ಹೋಗುತ್ತಿರುವವರನ್ನು ತಡೆಯುವುದು ಅಪರಾಧವಾಗುತ್ತದೆ"

—ಎಂದ ಬೆದರಿಸುವ ಧ್ವನಿಯಲ್ಲಿ ಅದನ್ನು ಕೇಳಿ, ಕೆಂಡ ಸುರಿಯುವ ಕಣ್ಣುಗಳಿಂದ ನನ್ನನ್ನೂ ಪೋಲೀಸಿನವನನ್ನೂ ನೋಡಿದಳು. ಆದರೆ ಏನೂ ಮಾತನಾಡಲಿಲ್ಲ. ಆಕೆ ಸುಮ್ಮನಿದ್ದುದನ್ನು ಕಂಡು, ಅದುವರೆಗೂ ಸುಮ್ಮನಿದ್ದ ಆಕೆಯ ಗೆಳತಿಯೊಬ್ಬಳು ಮುಂದೆ ಬಂದು—

" ರಾಜೇಶ್ವರೀ, ಅವರೊಂದಿಗೆ ಚರ್ಚೆಮಾಡಿ ಏನು ಉಪಯೋಗ ? ಬುದ್ಧಿ ಇದ್ದವರಲ್ಲಾದರೆ ಚರ್ಚೆ. ರೀ, ನೀವು ಕಾಲೇಜಿಗೆ ಹೋಗಲೇ ಬೇಕೆ ?"

—ಎಂದು ನಗುತ್ತ ತಿರುಗಿ ಕೇಳಿದಳು.

" ಅಹುದು."

—ನಾನು ಉತ್ತರ ಕೊಟ್ಟೆ.

" ಅಗತ್ಯವಾಗಿ ಹೋಗಿ. ನೀವು ಹೋಗದಿದ್ದರೆ ಕಾಲೇಜು ಕಟ್ಟಡ ಕುಸಿದು ಬಿದ್ದೀತು. ಹಾಗೇ ಇದು ನಿಮ್ಮ ಒಳ್ಳೇ ವಿದ್ಯಾರ್ಥಿ ತನಕ್ಕೆ ಬಹುಮಾನ. ತೆಗೆದುಕೊಳ್ಳಿ "

—ಎಂದು ಹೇಳಿ, ನನ್ನ ಕೈಗೆ ದಪ್ಪವಾದ ಕಾಗದದ ಪೊಟ್ಟಣವೊಂದನ್ನು ಕೊಟ್ಟು, ಬೇರೆ ಬಾಗಿಲ ಕಡೆಯಿಂದ ಒಳಗೆ ಬರುತ್ತಿದ್ದ ವಿದ್ಯಾರ್ಥಿಯೊಬ್ಬರನ್ನು ತಡೆಯಲು ಹೋದಳು.

ನಾನು ಯಾಂತ್ರಿಕವಾಗಿ ಆಕೆ ಕೊಟ್ಟ ಪೊಟ್ಟಣವನ್ನು ತೆಗೆದುಕೊಂಡು ಜೇಬಿನಲ್ಲಿಟ್ಟುಕೊಂಡೆ. ಸುತ್ತ ನೆರದಿದ್ದವರೆಲ್ಲರೂ ಅದನ್ನು ನೋಡಿ ಗೊಳ್ಳೆಂದು ನಕ್ಕರು.

ಹತ್ತಾರು ಬಾಣಗಳಂತೆ ಆ ನಗೆ ನನ್ನ ಎದೆಯನ್ನು ಇರಿಯಿತು. ಆ ಗುಂಪಿನತ್ತ ನೋಡಲೂ ಆಗದೆ, ವೇಗವಾಗಿ ನಡೆದು ಡಿಸೆಕ್ಷನ್ ಥಿಯೇಟರ್ ಸೇರಿದೆ. ಇನ್ನೂ ಬಿಸಿಲು ಬಲಿಯದ ಹಗಲು ಹೊತ್ತಾದರೂ ನನ್ನ ಮುಖದಿಂದ ಬೆವರು ಬಸಿಯುತ್ತಿತ್ತು.

ಡಿಸೆಕ್ಷನ್ ಥಿಯೇಟರ್ ಬೆಕೋ ಎನ್ನುತ್ತಿತ್ತು. ಎಲ್ಲೋ ಮೂರು ನಾಲ್ಕು ಜನ ಮಾತ್ರ ವಿದ್ಯಾರ್ಥಿಗಳಿದ್ದರು, ಡೆಮಾನ್‌ಸ್ಟ್ರೇಟರು, ಅತ್ತಿಂದಿತ್ತ, ಇತ್ತಿಂದತ್ತ ಮೇಜುಗಳ ನಡುವೆ, ಮೇಜಿನ ಮೇಲೆ ಆಳು ಜೋಡಿಸಿದ ಹೆಣಗಳ ನಡುವೆ ಸುತ್ತುತ್ತಿದ್ದರು. ಏಕೋ ಅಲ್ಲಿ ಜೀವ ಸಂಚಾರವೇ ಇದ್ದಂತಿರಲಿಲ್ಲ. ಒಬ್ಬರಿಗೊಬ್ಬರು ಮಾತನಾಡುವುದೂ ಬೇಕಿರಲಿಲ್ಲ. ಹೊರಗಡೆ ಯಾರೋ ನಾಲ್ಕು ಜನ ಹುಡುಗರು ಕೂಗುತ್ತಿದ್ದರು—

"ಟ್ರೈಟರ್ಸ್ ಕಂ ಔಟ್ – ಬ್ಲಾಕ್ ಷೀಪ್ ಗೆಟ್ ಔಟ್"

ಈ ಕೂಗು – ಇದು ನಿಂತಾಗೊಮ್ಮೆ—

"ಬೋಲೋ ಗಾಂಧೀ ಮಹಾತ್ಮಾಕೀ – ಜೈ? ಬೋಲೋ ಜವಹರಲಾಲ್‌ಜೀಕಿ – ಜೈ"

ಹೊರಗೆ ಜೀವ ದುಮುದುಮಿಸುತ್ತಿತ್ತು – ಇಲ್ಲಿ ಒಳಗೆ ನಿಶ್ಶಬ್ದತೆ; ಕಟ್ಟೆರುಳಿನ ನಿರ್ಜೀವ ನಿಶ್ಶಬ್ದತೆ.

ಆ ಕೂಗು ಕೇಳಿದಾಗ ಹುಡುಗಿ ಕೊಟ್ಟ ಪೊಟ್ಟಣದ ನೆನಪಾಗಿ, ಕುತೂಹಲವನ್ನು ಅಣಗಿಸಲಾರದೆ, ಅವಸರದಲ್ಲಿ ಜೇಬಿನಲ್ಲಿ ತುರುಕಿ ಕೊಂಡಿದ್ದ ಪೊಟ್ಟಣವನ್ನು ತೆಗೆದು, ಏನಿರಬಹುದು ಎಂದು ಅದನ್ನು ಒತ್ತಿನೋಡಿದೆ. ಏನೆಂಬುದು ತಿಳಿಯಲಿಲ್ಲ. ಪೊಟ್ಟಣವನ್ನೇ ಬಿಚ್ಚಿ ನೋಡಿದೆ.

ಬಿಚ್ಚಿನೋಡಿದೆ – ನನ್ನ ಮೈನೆತ್ತರು ಒಮ್ಮೆ ಧಿಗ್ಗನೆ ಉರಿದು ಮರುಗಳಿಗೆಯೇ ಮುಂಜಾಗಿ ಹೋಯಿತು. ಒಂದು ಗಳಿಗೆ ತಲೆ ಎಲ್ಲೆಲ್ಲಿಯೂ ಸುತ್ತಿ ಬಂದು, ಕಣ್ಣು ಮಂಜಾಯಿತು.

ಗರಬಡಿದವನಂತೆ ಕೈಯಲ್ಲಿ ಹಿಡಿದಿದ್ದುದನ್ನು ನೋಡಿದೆ.

ಒಂದು ಗಳಿಗೆ ನನ್ನ ಕಣ್ಣನ್ನೇ ನನಗೆ ನಂಬಲಾಗಲಿಲ್ಲ.

ಆದರೆ ಕೈಯಲ್ಲಿದ್ದುದನ್ನು, ಕಣ್ಣಿಗೆ ಕಾಣುತ್ತಿದ್ದುದನ್ನು ನಂಬದೆ ಬೇರೆ ದಾರಿಯೇ ಇರಲಿಲ್ಲ.

ನನ್ನ ಕಣ್ಣನ್ನು, ಮಿದುಳನ್ನು, ಮತಿಯನ್ನು ತಿವಿಯುತ್ತಿತ್ತು, ಕಾಗದದಲ್ಲಿದ್ದ—

ಅರಿಶಿನ; ಕುಂಕುಮ, ಸಣ್ಣ ಕರಿಯ ಬಣ್ಣದ ಬಳೆ!

ನನ್ನ ಬಳಿಯಲ್ಲಾರೋ ನಕ್ಕರು, ನಿಂತಿದ್ದವನು ಹಾಗೇ ನೆಲಕ್ಕೆ ಕುಸಿದೆ.

* * *

ಅರಿಶಿನ, ಕುಂಕುಮ, ಬಳೆ!

ನನ್ನ ನಿರ್ಧಾರಕ್ಕೆ ಜಗತ್ತು ಕೊಟ್ಟ ಬಹುಮಾನ.

ಕೊಟ್ಟದ್ದು ನನಗೆ – ಕೊಟ್ಟವರು ಹೆಂಗಸು.

ನೆನಪು ಮರಕಳಿಸಿದಾಗೊಮ್ಮೆ ನನ್ನನ್ನು ಅಪಮಾನದ ಬೆಂಕಿಯ ಹೊಳೆಯಲ್ಲಿ ಅದ್ದಿ ಅದ್ದಿ ತೆಗೆದಂತಾಗುತ್ತಿತ್ತು. ಮರುದಿನ ಕಾಲೇಜಿಗೆ ಹೋಗುವುದೇ ಬೇಡವೇ ಎಂದು ಯೋಚಿಸಿದೆ.

ಒಮ್ಮೆ ಕೈಸುಟ್ಟುಕೊಂಡ ಮನಸ್ಸು 'ಬೇಡ' ಎಂದಿತು, 'ಮೊದಲ ಆಘಾತಕ್ಕೇ ಹೆದರಿಬಿಟ್ಟೆಯಾ ಹೇಡಿ' ಎಂದಿತು, ಮತ್ತೊಂದು ಮನಸ್ಸು.

ಕೆಟ್ಟ ಧೈರ್ಯಮಾಡಿ ಕಾಲೇಜ್ ಬಳಿ ಹೋದೆ.

ಕಾಲೇಜಿನ ಬಳಿ ಬರುವ ವೇಳೆಗೆ ಅಲ್ಲಿ ನೆರೆದಿದ್ದ ಜನ ಚೆಲ್ಲಾಪಿಲ್ಲಿಯಾಗಿ ಓಡುತ್ತಿರುವುದು ಕಂಡು, ಕಾಲೇಜಿನ ಎದುರು ಬದಿಗೆ ನಿಂತ ಪೋಲೀಸ್ ವ್ಯಾನಿನಿಂದ ಲಾಠಿ ಧರಿಸಿದ ಪೋಲೀಸರು ಇಳಿಯುತ್ತಿರುವುದು ಕಾಣಿಸಿತು.

ಗರಬಡಿದಂತಾಗಿ ನಿಂತಲ್ಲಿಯೇ ನಿಂತೆ.

ಯಾರೋ ನಾಲ್ಕಾರು ಜನ ಹುಡುಗ ಹುಡುಗಿಯರನ್ನು ಹಿಡಿದು ವ್ಯಾನಿಗೆ ತುಂಬಿದರು ಪೋಲೀಸಿನವರು. ಅಷ್ಟು ದೂರ ನಿಂತ ಗುಂಪು ಜಯಘೋಷ ಮಾಡುತ್ತಿತ್ತು.

ನನ್ನ ಎದುರಿಗೇ ಹೋಯಿತು ವ್ಯಾನು. ವ್ಯಾನಿನಲ್ಲಿದ್ದವರೂ ಜಯಘೋಷ ಮಾಡುತ್ತಿದ್ದರು ; ಅಲ್ಲಲ್ಲಿ ನಿಂತ ಜನವೂ ನಾನೂ ಜಯಘೋಷ ಮಾಡಿದೆ.

* * *

ಊರಿನಿಂದ ಕಾಗದ ಬಂದಿದೆ – ತಂದೆಯದು.

ನಿಮ್ಮ ಕಾಲೇಜಿನ ಬಳಿ ಲಾರಿ ಛಾರ್ಜಾಯಿತೆಂದು ಪತ್ರಿಕೆಯಲ್ಲಿ ಓದಿದೆ. ಆಗ ನೀನೆಲ್ಲಿದ್ದೆ ? ನಿನ್ನಿಂದ ಕಾಗದ ಬರುವವರೆಗೂ ನಿನ್ನ ತಾಯಿಯ ಜೀವಕ್ಕೆ ಸಮಾಧಾನವಿಲ್ಲ. ಊಟ ಬಿಟ್ಟು ಅಳುತ್ತಾ ಕುಳಿತಿದಾಳೆ. ಕೂಡಲೇ ನಿನ್ನ ಯೋಗಕ್ಷೇಮಕ್ಕೆ ಟೆಲಿಗ್ರಾಂ ಕಳುಹಿಸು. ಏನೇ ಆದರೂ ನೀನು ಗದ್ದಲಗಳಿಗೆ ಸೇರಬೇಡ. ಸಾಧ್ಯವಾದರೆ ಈ ಗದ್ದಲಗಳು ಮುಗಿಯುವವರೆಗೂ ಇಲ್ಲಿಯೇ ಬಂದಿರು.

ನಿನ್ನ ಹುಚ್ಚು ಉತ್ಸಾಹದಲ್ಲಿ ನೀನೂ ಎಲ್ಲಿಯಾದರೂ ಆ ಗದ್ದಲದಲ್ಲಿ ಸೇರಿಕೊಂಡು ಜೈಲಿಗೆ ಹೋದೀಯೆ. ಹಾಗಾದರೆ ನಿನ್ನ ಓದು ಕೆಟ್ಟು, ನಿನ್ನ ಭವಿಷ್ಯ ಹಾಳಾಗಿಹೋಗುತ್ತದೆ. ಎಚ್ಚರವಾಗಿರು. ಕಾಲೇಜಿಗೆ ಹೋಗುವುದನ್ನು ಬಿಡಬೇಡ.

ಊರಿನಿಂದ ಕಾಗದ – ತಂದೆಯದು.

' ಎಚ್ಚರವಾಗಿರು.'

ಕಾಲೇಜಿನತ್ತ ಹೋಗಲಾಗಲಿಲ್ಲ. ಹಾಸ್ಟಲ್ಲಿಗೆ ಬಂದೆ.

ಅರಿಶಿನ, ಕುಂಕುಮ, ಬಳೆ ; ಕಪ್ಪು ನೀಲಿಯ ಬಣ್ಣದ ವ್ಯಾನು, ಲಾಠಿ ಎತ್ತಿದ ಖಾಕಿಯುಡುಪು, ಜಯಘೋಷ – ನನ್ನ ಮಿದುಳಿನಲ್ಲಿ ಚಕ್ರಾಕಾರವಾಗಿ ಸುತ್ತುತಿತ್ತು.

ಈ ದಿನ ನನಗೆ ಊಟ ಸೇರಲಿಲ್ಲ.

' ಕಾಲೇಜಿಗೆ ಹೋಗುವುದನ್ನು ತಪ್ಪಿಸಬೇಡ.'

' ಹೋಗಿ–ನೀವು ಹೋಗದಿದ್ದರೆ ಕಾಲೇಜು ಕಟ್ಟಡ ಕುಸಿದುಬಿದ್ದೀತು.'

—ಕಿಲಕಿಲ ನಕ್ಕು ಹೇಳಿತು ಅರಿಶಿನ, ಕುಂಕುಮ, ಬಳೆಯ ಪೊಟ್ಟಣ.

ಮೈಮೇಲೆ ಜರಿ ಹರಿದಂತಾಯಿತು ; ಇದ್ದಕ್ಕಿದ್ದಂತೆಯೇ ಬೆನ್ನಮೇಲೆ ಮಂಜು ನೀರು ಸುರಿದಂತಾಯಿತು. ಕಪ್ಪು ನೀಲಿ ಬಣ್ಣದ ವ್ಯಾನು ಮೈ ಮೇಲೆಯೇ ನುಗ್ಗಿಬಂದಿತು.

ಕಾಲೇಜಿಗೆ ಹೋಗಲಿಲ್ಲ ; ಮಲಗಿಬಿಟ್ಟೆ, ನಾನೆಂತಹ ಹೇಡಿ !

* * *

ಕಾಲೇಜು–ಹೋಗಲಿಲ್ಲ. ರಜಾ ಚೀಟಿ ಕಳಿಸಿದೆ, ಅಂಚೆಯ ಮೂಲಕ. ಓದಲೂ ಮನವಿಲ್ಲ.

ಮೂರು ಹೊತ್ತು ಹಾಸ್ಟಲಿನ ಕೋಣೆಯಲ್ಲಿ. ಹೊರಗೆ ತಿರುಗಾಡಲು ಮುಖವಿಲ್ಲ.

ಮುಖ ?

ನಿಜ ನನ್ನ ಮಿದುಳಿನಲ್ಲಿ ಯಾವುವೋ ಮುಖ ತುಂಬಿ ಅತ್ತಿತ್ತ ಚಲಿಸು ವುದಿಲ್ಲವೆಂದು ಹಟಹಿಡಿದು ನಿಂತಿದೆ. ಮುಖ !

ಭಯಂಕರ ತಿರಸ್ಕಾರದಿಂದ ಥಳಥಳಿಸುತ್ತಿರುವ ಅಗಲವಾದ ಕಣ್ಣು ಗಳ ಮುಖ.

ಒಂದು ಗಳಿಗೆ, ಒಂದೇ ಒಂದು ಗಳಿಗೆ ನಾನು ಆ ಮುಖವನ್ನು ನೋಡಿದ್ದು. ಆದರೆ ಮರೆಯಲಾರೆ.

ಹಾಗೇ – ಆ ಕೈಯನ್ನು.

ಅರಿಶಿನ, ಕುಂಕುಮ, ಬಳೆಯ ಪೊಟ್ಟಣವನ್ನು ಕೊಟ್ಟ, ಬಳೆ ತೊಡದೆ, ಸಣ್ಣ ಗಡಿಯಾರ ಕಟ್ಟಿದ, ಗುಲಾಬಿ ಬಣ್ಣದ್ದ ತುಂಬುಗೈ.

ಆ ಕೈಯ ಮಾಲೀಕಳ ಮುಖವನ್ನು ನಾನು ಸರಿಯಾಗಿ ನೋಡಲಾಗಿರ ಲಿಲ್ಲ. ನೋಡಬೇಕೆನ್ನುವಾಗಲೇ ಬೆನ್ನು ತಿರುಗಿಸಿ ನಡೆದಿದ್ದಳು – ವೇಗವಾಗಿ. ಕಂಡುದಿಷ್ಟೆ ಹಳದಿಯ ಜಾರ್ಜೆಟ್ ಸೆರಗು ಜೋತುಬಿದ್ದ ಬೆನ್ನನ್ನು ಕವಿದಿದ್ದ ಬಿಳಿಯ ಚುಕ್ಕೆಗಳ ಕೆಂಪು ರವಿಕೆ, ಎಷ್ಟು ಬೇಗ ಅದು ಕಣ್ಣು ಮರೆಯಾಗಿ ಗುಂಪಿನಲ್ಲಿ ಕರಗಿಹೋಯಿತು.

“ ಎಷ್ಟು ಬೇಗ, ಇಳಿದು ಬರುವ ಮಬ್ಬುಗತ್ತಲಲ್ಲಿ ಮರೆಯಾಗುವ ಸಂಜೆಯ ಹೊಂಬಣ್ಣದ ಮೋಡದಂತೆ.

ಮರೆಯಾಯಿತು–ಮೋಡ.

ಅಲ್ಲ–ಅರಿಶಿನ, ಕುಂಕುಮ, ಬಳೆ.

ನೆನಪಿದೆ. ಅದನ್ನು ನೀಡಿದ ಕೈ ; ಭಯಂಕರ ತಿರಸ್ಕಾರ ತುಂಬಿ ತುಳುಕುವ ಅಗಲವಾದ ಕಣ್ಣುಗಳು.

ಗುಂಪಿನಲ್ಲದು ಮರೆಯಾಗಿ ಹೋಯಿತು.

ಆದರೆ ಅದನ್ನು ಕಾಣಲು ಕಾತರಿಸುತ್ತಿದೆ. ಹಾಸ್ಟಲಿನ ಕೋಣೆಯ ಸೆರೆಯೊಳಗೆ ಬಂಧಿತವಾದ ನನ್ನ ಕಣ್ಣುಗಳು.

ಏಕೆ ? ಹೀಗೇಕೆ ?

ಆ ಅಪಮಾನದಿಂದಾದ ಸಿಟ್ಟು ಈಗಲೂ ನನ್ನಲ್ಲಿ ಕುದಿಯುತ್ತಿದೆ.

ಆದರಿದು ಸಿಟ್ಟೇ ?

ನಿಜ. ಸಿಟ್ಟು, ಸಿಟ್ಟು ಎಂದೆಂದಿಗೂ ನಾನು ಅವಮಾನವನ್ನು ಮರೆಯುವುದಿಲ್ಲ

* * * *

ಉಗ್ರವಾಗಿ ಕಲಕಿದ ಕಡಲು ಮತ್ತೆ ನಿಧಾನವಾಗಿ ಶಾಂತವಾಗುತ್ತಿದೆ.

ಬಲವಾದ ಸುಂಟರು ಗಾಳಿ ಬೀಸಿದಾಗ, ಮುಗಿಲಿಗೆ ಹಾರಿದ ನೆಲದ ಮೇಲಿದ್ದ ಎಲೆಗಳು ನಿಧಾನವಾಗಿ, ಒಂದೊಂದಾಗಿ ಮತ್ತೆ ನೆಲಕ್ಕೆ ಇಳಿಯುತ್ತಿವೆ; ಬಿರುಗಾಳಿ ಕಲಕಿದ ಅಲೆಗಳ ಮೇಲೆ ತೇಲುತ್ತಾ ಹೊಯ್ದಾಡುತ್ತಾ ಇದ್ದವು, ಮತ್ತೆ ನಿಧಾನವಾಗಿ ದಿನಚರಿಯ ಆಳಕ್ಕೆ ಕುಸಿಯುತ್ತಿವೆ.

ಎಂದೋ ಸಿಡಿದ ಸಿಡಿಮದ್ದಿನ ಘಾಟಾದ ವಾಸನೆ ಗಾಳಿಯಲ್ಲಿ ಕ್ಷೀಣವಾಗಿ ತೂಗುತ್ತಿದೆ.

ಸೆರೆಯಲ್ಲಿದ್ದವರು, ಸೆರೆಯಲ್ಲಿಯೇ ಇದ್ದಾರೆ; ಕಾಲೇಜಿಗೆ ಮರಳುವವರು ಒಬ್ಬೊಬ್ಬರಾಗಿ ಮರಳುತ್ತಿದ್ದಾರೆ. ದಿನದಿನಕ್ಕೆ ಕಾಲೇಜು ಬೆಂಚುಗಳು ತುಂಬುತ್ತಿವೆ.

ಮರಳಿ ಬಂದವರ ಮೊಗದಲ್ಲಿ—

ಸಮರದಿಂದ ಗೆದ್ದು ಬಂದವರ ಗೆಲುವಿನ ಕಳೆಯಿಲ್ಲ; ಏನೋ ವಿಫಲತೆಯ ಮಂಕು ಛಾಯೆ.

ವಿಫಲತೆ, ನಿರಾಶೆ, ಬೇಸರ, ಜಿಗುಪ್ಸೆ—

ಎಲ್ಲವೂ ಮತ್ತೆ ತಮ್ಮ ಹಳೆಯ ಬಣ್ಣಕ್ಕೆ ತಿರುಗುತ್ತಿವೆ. ಸರ್ಜ್ ಸೂಟಿನ ಮೇಲಿದ್ದ ಗಾಂಧೀ ಟೋಪಿ—ಎಲ್ಲಿ ?

ಜಯಘೋಷ ಕೂಗುತ್ತಿದ್ದ ಬಾಯಿಂದ ಪ್ಲೇಯರ್ಸ್ ಸಿಗರೇಟಿನ ಹೊಗೆ ಹಾರುತ್ತಿದೆ. ಮತ್ತೆ ಅದೇ—'ಪ್ರೀತಮ ಆನ್ ಮಿಲೊ.'

ಬಿರುಗಾಳಿಯಲ್ಲಿ ಮೇಲೆದ್ದು ಗಿರಗಿರನೆ ಸುತ್ತಿದವು ಮತ್ತೆ ಮರಳಿ ನೆಲಕ್ಕೆ ಇಳಿಯುತ್ತಿವೆ.

ನನ್ನ ಕಣ್ಣು ಅರಸುತ್ತಿವೆ—

ಅನಾಟಮಿ, ಪ್ಯಾಥಾಲಜಿ, ಬಯೋ ಕೆಮಿಸ್ಟ್ರಿಗಳ ಗದ್ದಲದಲ್ಲಿ—

ಹೆಣ ಕೊಯ್ಯಲು ನೆರೆದವರ ನಡುವೆ—

ನರನರದ ಪೊರೆಪೊರೆಯ ನಡುವೆ—

ನನ್ನ ಕಣ್ಣು ಅರಸುತ್ತಿವೆ—

ಅರಿಶಿನ, ಕುಂಕುಮ, ಬಳೆಗಳ ದಾನ ಮಾಡಿದ ಗುಲಾಬಿಬಣ್ಣದ ನೀಳವಾದ ಬೆರಳುಗಳ ಕೈಯನ್ನು;

ಭಯಂಕರ ತಿರಸ್ಕಾರ ತುಂಬಿ ಥಳಥಳಿಸುವ ಅಗಲವಾದ ಕಪ್ಪ ಕಣ್ಣುಗಳನ್ನು;

ಗುಂಪಿನೊಳಗೆ ಮರೆಯಾದ ಹಳದಿ ಜಾರ್ಜೆಟಿನ ಸೆರಗು ಹೊತ್ತ ಕೆಂಪು ರವಿಕೆಯ ಮೋಡವನ್ನು.

ಏಕೋ ಒಮ್ಮೊಮ್ಮೆ ವೇಗವಾಗಿ ಓಡುವ ಕಾರು ಗುಂಡಿಗೆ ಬಿದ್ದು ಕುಪ್ಪಳಿಸಿ ಓಡಿದಂತಾಗುತ್ತದೆ ನನ್ನ ಎದೆ.

* * * *

ಈಗ ಬೇರೆ ಯಾವುದಕ್ಕೂ ಅವಕಾಶವಿಲ್ಲ. ಪರೀಕ್ಷೆ ಹತ್ತಿರವಾಗುತ್ತಿದೆ. ಆರ್ಗ್ಯಾನಿಕ್ ಕೆಮಿಸ್ಟ್ರಿಯಲ್ಲಿ ಈ ಬಾರಿ ಪಬ್ಲಿಕ್ ಎಕ್ಸಾಮಿನೇರ್ಸ್.

ಎಷ್ಟು ಓದಿದರೂ ಸಾಲದು ! ಈಗ ನ್ಯೈಯೆಲ್ಲಾ ಕಣ್ಣು

ಊಹೂ – ಬೇರಾವ ಭಾವನೆಗೂ ಅವಕಾಶವಿಲ್ಲ. ಹಗಲಿರುಳು 'ಗ್ರೇ' ಯ ಅನಾಟಮಿಯ ಧ್ಯಾನ. ಆದರೂ ಆ ಓದುವ ವೇಗದ ನಡುವೆ ಬೇರಾವುದೋ ಅನಾಟಮಿ ನುಸುಳಿ ಬಂದು ನನ್ನೆದರು ನಿಲ್ಲುತ್ತದೆ.

ದೇವರೇ, ನನ್ನ ಬುದ್ಧಿ ಪಾಠದಿಂದ ಚಲಿಸದಂತೆ ಮಾಡು ; ಬೇರಾವ ನೆನವುಗಳೂ ನುಗ್ಗದಂತೆ ಮಾಡು.

* * *

ಇಂದು ಅವಳನ್ನು ನೋಡಿದೆ !

ಇಂದು ಬೇರೇನು ಮಾಡಿದೆನೋ, ಏನು ಓದಿದೆನೋ ನನಗೆ ನೆನಪಿಲ್ಲ.

* * *

ಇಲ್ಲ, ಇಲ್ಲ, ಇಲ್ಲ—

ಈ ಬಿರುಗಾಳಿ ನನ್ನೆದೆಯನ್ನು ಕೊಚ್ಚಲು ಬಿಡುವುದಿಲ್ಲ. ನಾನು ಓದಬೇಕು. ಈದಿನ ಬಯೋ ಕೆಮಿಸ್ಟ್ರಿಯ ಲೆಕ್ಚರರು ಕೇಳಿದರು—

" ಪರೀಕ್ಷೆ ಹತ್ತಿರವಾಯಿತೆಂದು ಓದುವುದನ್ನು ಕಡಿಮೆ ಮಾಡಿದೀರಾ?"

ಇಲ್ಲ – ಅವರು ಕೇಳಿದ ಪ್ರಶ್ನೆಗೆ ಉತ್ತರ ನನಗೆ ಗೊತ್ತಿತ್ತು. ಹಿಂದಿನ ರಾತ್ರಿಯೇ ಅದನ್ನು ಓದಿಕೊಂಡು ಹೋಗಿದ್ದೆ. ಆದರೇನು ಮಾಡಲಿ ?

ಅವರು ಆ ಪ್ರಶ್ನೆ ಕೇಳಿದಾಗಲೇ ಕಿ ಟಿ ಕಿ ಯ ಬಳಿ ಆ ಪರಿಮಳ ಸುಳಿದು ಹೋಗಬೇಕೆ ? ಆ ಕೂಡಲೇ ನನ್ನ ಬುದ್ಧಿಗೇನೊ ಮಂಕು ಕವಿಯಿತು. ಕಣ್ಣೆತ್ತಲೋ ಚಲಿಸಿತು.

" ನಿಮ್ಮ ತಂದೆ ತಾಯಿಗಳ ಬಳಿ ಹಾಳು ಮಾಡಲು ಹಣ ಹೆಚ್ಚಾಗಿರಬೇಕು "

ಚಾಟಿ ಏಟಿನಂತೆ ಲೆಕ್ಚರರ ಮಾತು ಕಿವಿಯ ಮೇಲೆ ಬಿದ್ದಿತು.

ಆದರೆ ಅವರ ಪ್ರಶ್ನೆಗೆ ಉತ್ತರ ನನಗೆ ಗೊತ್ತಿತ್ತು, ಗೊತ್ತಿತ್ತು–ಆದರೆ ಹೇಳಲಾಗಲಿಲ್ಲ. ಏಕೆ ಹೇಳಲಾಗಲಿಲ್ಲ ಎಂದು ಅವರಿಗೆ ಹೇಗೆ ಹೇಳಲಿ ?

ನಾನು ಮೂರ್ಖ, ಶತಮೂರ್ಖ, ಮಹಾಮೂರ್ಖ—

ಈ ಪರಿಮಳದ ಮೋಡ ಮತ್ತೆ ನನ್ನ ಮೆದುಳನ್ನು ಕವಿಯಲು ಬಿಡ ಬಾರದು. ಪರೀಕ್ಷೆ ಬಹಳ ಹತ್ತಿರವಾಗುತ್ತಿದೆ. ಪರೀಕ್ಷೆಯಲ್ಲೇ ಹೀಗಾದರೇನು ಗತಿ ?

ಇಲ್ಲ, ಇಲ್ಲ, ಇಲ್ಲ – ಹೀಗಾಗಲು ಬಿಡುವುದಿಲ್ಲ.

* * *

ಈದಿನ ಅವಳ ಹೆಸರು ತಿಳಿಯಿತು—

" ಕಾತ್ಯಾಯಿನಿ "

ಓ—ಎಂಥ ಸುಂದರವಾದ ಹೆಸರು ರೂಪದಷ್ಟೇ ಸುಂದರವಾದ ಹೆಸರು. ಅವಳು ಎರಡನೆ ವರ್ಷದ ವಿದ್ಯಾರ್ಥಿನಿ ನನಗಿಂತ ಒಂದು ವರ್ಷ ಮುಂದು.

ಆ ಒಂದು ವರ್ಷ ಹಿಂದು ಮುಂದಾಗಿದ್ದರೆ........

ನಾನು ಮೂರ್ಖ !

ಅವಳ ಹೆಸರೇನು ? ಅವಳುಟ್ಟ ಸೀರೆಯ ಬಣ್ಣ ಯಾವುದು, ಕೇಶಾಲಂಕಾರ ಹೇಗಿತ್ತು ಎಂದು ಪರೀಕ್ಷೆಯಲ್ಲಿ ಕೇಳುವುದಿಲ್ಲ. ಊಹೂ ಆ ಚಿಂತೆ ಮಾಡಿದರೆ ನಾನು ಉಳಿಯುವುದಿಲ್ಲ.

ಹಾಳಾಗಲಿ ಆ ಚಿಂತೆ. ನನಗೆ ಅವಮಾನ ಮಾಡಿದವಳ ಚಿಂತೆ ನನಗೇನು ?

* * *

ಅಬ್ಬಾ ! ಪರೀಕ್ಷೆ ಮುಗಿಯಿತು.

ನಾಳೆನಿಂದ ಕ್ರಿಸ್‌ಮಿಸ್ ರಜಾ, ಊರಿಗೆ ಹೋಗಬೇಕು. ಅಮ್ಮ ನಾನು ಬರುತ್ತೇನೆ ಎಂದು ಬಗೆಬಗೆಯ ತಿಂಡಿ ಮಾಡಿಟ್ಟುಕೊಂಡು ಕಾದಿರುತ್ತಾಳೆ. ಅಪ್ಪನಿಗೂ ಎಷ್ಟು ಸಂತೋಷ. 'ಡಾಕ್ಟರಾಗುವ ಮಗ ಮನೆಗೆ ಬಂದ.'

ಚಿಂತಾಮಣಿ ನನ್ನನ್ನು ಕರೆಯುತ್ತಿದೆ.

* * *

## ೧೯೪೩

೧೯೪೩.

ಮೆಡಿಕಲ್ ಕಾಲೇಜಿನಲ್ಲಿ ಎರಡನೆಯ ವರ್ಷ ಆರಂಭವಾಯಿತು. ಇದೊಂದು ವರ್ಷ ಯಶಸ್ವಿಯಾಗಿ ಕಳೆದರೆ ನನ್ನ ಶಿಕ್ಷಣದಲ್ಲಿ ಒಂದು ಘಟ್ಟ ಮುಟ್ಟಿದಂತಾಗುತ್ತದೆ.

ಬರುವಾಗ ತಂದೆ ತಾಯಿಗೆ ನಮಸ್ಕರಿಸಿ ಬಂದೆ. ಆಶೀರ್ವಾದ ಮಾಡಿದರು. ಹೋಗಿ ಬಾ. ಆರೋಗ್ಯಕ್ಕೆ ವಾರವಾರಕ್ಕೂ ಕಾಗದ ಬರಿ ಎಂದರು. ತಂದೆ ಖರ್ಚಿಗೆ ಹಣ ಕೊಟ್ಟರು.

ಆದರೆ ಮೊದಲು ಮೈಸೂರಿಗೆ ಬಂದಾಗ ಹಣ ಕೊಟ್ಟಷ್ಟು ಉತ್ಸಾಹ ವಿರಲಿಲ್ಲ. ಏಕೋ ನುಂಗಲಾಗದ ತುತ್ತನ್ನು ನುಂಗಿದವರಂತಿತ್ತು ಅವರ ಸ್ಥಿತಿ.

ತಾಯಿಯೂ ಹಾಗೇ ಕೇಳಿದಳು—

" ಇನ್ನೂ ಎಷ್ಟು ವರ್ಷವಪ್ಪಾ ರಾಜೂ ನಿನ್ನ ಓದು ಮುಗಿಯುವುದು?"

ಈ ಒಂದು ವರ್ಷದಲ್ಲಿ ಎಷ್ಟು ವೃದ್ಧರಾದಂತೆ ಕಾಣುತ್ತಾರೆ ಅವರು. ಹಾಗೇ ಹಾಗೇ ನನಗೆ ಹೇಳಲಾಗದ ಯಾವುದೋ ಚಿಂತೆ ಅವರನ್ನು ಕೊರೆಯುತ್ತಿರುವಂತಿದೆ.

ನಿಜ – ಈ ವರ್ಷ ಅಮ್ಮ ಹೊಸ ಸೀರೆಯೊಂದನ್ನು ತೆಗೆದು ಕೊಂಡಂತಿಲ್ಲ. ಏಕೆ ?

ಏಕೆ – ಹಣದ ತೊಂದರೆಯೇ ?

ಛೇ ! ನಾನೆಂತಹ ಮೂರ್ಖ. ಇದುವರೆಗೂ ಆ ಯೋಚನೆಯನ್ನೇ ಮಾಡಲಿಲ್ಲವಲ್ಲಾ. ಊಹೂ – ನಾನವರಿಗೆ ತಕ್ಕ ಮಗನಲ್ಲ ಎಷ್ಟು ಕಷ್ಟಪಟ್ಟು ಕಳಿಸುತ್ತಿದ್ದಾರೋ ಈ ಹಣವನ್ನು. ಅವರ ಬಳಿ ನಾನು ಈ ವಿಚಾರವನ್ನೇ ಕೇಳಲಿಲ್ಲವಲ್ಲಾ. ಹಣ ಸಾಲದೆ ಬರುತ್ತದೆ ಎಂದು ಹೇಳಿದೆನೇ ವಿನಾ, ಕಳಿಸುವಷ್ಟನ್ನಾದರೂ ಹೇಗೆ ಕಳಿಸುತ್ತೀರಿ ಎಂದು ಕೇಳಲಿಲ್ಲವಲ್ಲಾ? ಎಂಥ ಮಗ ?

ಊಹೂ. ಇನ್ನು ಅವರಿಗೆ ಆದಷ್ಟು ಈ ಹೊರೆ ಕಡಿಮೆ ಮಾಡಬೇಕು.

ಈ ಬಾರಿ ಚೆನ್ನಾಗಿ ಓದಿ ರ್‍ಯಾಂಕ್ ತೆಗೆದುಕೊಂಡು ಮುಂದಿನ ವರ್ಷ ಸ್ಕಾಲರ್‌ಷಿಪ್‌ಗಾದರೂ ದಾರಿ ಮಾಡಿಕೊಳ್ಳಬೇಕು. ನಿಜ ಓದಬೇಕು, ಚೆನ್ನಾಗಿ, ಎಲ್ಲರಿಗಿಂತ ಚೆನ್ನಾಗಿ.

ಕಾತ್ಯಾಯಿನಿ, ನನ್ನ ಕನಸನ್ನು ಕಾಡಬೇಡ !

* * *

ಅನ್‌ಸೋಷಿಯಬಲ್ ಬ್ರೂಟ್ !

ಅದು ನನ್ನ ಸಹಪಾಟಿಗಳು ನನಗಿತ್ತ ಬಿರುದು.

ಅನ್‌ಸೋಷಿಯಬಲ್ – ನಿಜ – ನಾನು ಅನ್‌ಸೋಷಿಯಬಲ್.

ಅವರೊಂದಿಗೆ ಸಿಗರೇಟು ಸೇದುವುದಿಲ್ಲ, ಹೋಟಲು ಅಲೆಯುವುದಿಲ್ಲ, ಸಿನಿಮಾ ತಿರುಗುವುದಿಲ್ಲ, ಶಿಳ್ಳು ಹಾಕುತ್ತಾ ಕಣ್ಣು ಕುಣಿಸುತ್ತಾ ಅಡ್ಡಾಡುವುದಿಲ್ಲ.

ಅವರ ಪಾಲಿಗೆ ನಾನು ಅನ್‌ಸೋಷಿಯಬಲ್.

ಆಹುದು. ನನಗೆ ಅವರ ಹಾಗಿರಲು ವೇಳೆಯಿಲ್ಲ ಹಾಗೇ.... ಹಾಗೇ....ನನಗೆ ನಾನೇ ಸುಳ್ಳೇಕೆ ಹೇಳಿಕೊಳ್ಳಲಿ – ಅವರಷ್ಟು ಹಣವೂ ನನ್ನ ಬಳಿ ಇಲ್ಲ

" ಒಂಟಿತನದ ಗೋರಿಯಲ್ಲಿರಲು ನೀನು ಎಲ್ಲಾ ಬಿಟ್ಟು ಮೆಡಿಕಲ್ ಕಾಲೇಜಿಗೇಕೆ ಬಂದೆ ?" ಎಂದು ಕೇಳಿದ ನನ್ನ ರೂಮ್ ಮೇಟ್ ಸದಾಶಿವಪ್ಪ.

" ನೀನು ಬಂದದ್ದೇಕೆ " ಎಂದು ಕೇಳಿದೆ.

" ಇಲ್ಲಿರುವಷ್ಟು ಫ್ರೀಯಾಗಿ ಹುಡುಗಿಯರೊಂದಿಗಿರಲು ಬೇರೆ ಎಲ್ಲಿ ಸಾಧ್ಯ ಹೇಳು ? "

—ಎಂದ ನನ್ನ ಮುಖ ನೋಡಿ ಅಣಕದ ನಗೆ ನಗುತ್ತಾ.

ಅವನಿಗೆ ಮದುವೆಯಾಗಿದೆ. ಮಾವ ಕೇಳಿದಷ್ಟು ಹಣ ಕಳಿಸುತ್ತಾನೆ. ಅದರಲ್ಲಿ ಇವನ ಚಿಂತೆಯೇ ಬೇರೆ ಇವನ ಮುಂದೆ ನಾನು ಇಲ್ಲಿಗೆ ಏಕೆ ಬಂದೆ ಎಂದು ಹೇಗೆ ಹೇಳಲಿ ? ಹೇಳಿ ನಗೆಪಾಟಲಿಗೆ ಗುರಿಯಾಗಲೇ ?

ಅನ್‌ಸೋಷಿಯಬಲ್ ಬ್ರೂಟ್—ಆದರೂ ಚಿಂತೆಯಿಲ್ಲ ನಾನವರದಾರಿ ತುಳಿಯಲಾರೆ.

ಆದರೆ ...ಆದರೆ ...ಹೆಣ್ಣಿನ ಬಯಕೆ ಅವನೊಬ್ಬನಿಗೆಯೇ ? ನನಗಿಲ್ಲವೇ ?

ಕಾತ್ಯಾಯನಿ ?

ಅವಳನ್ನು ನೋಡಿದೇನೆ. ಅವಳೊಡನೆ ಒಮ್ಮೆಯೂ ಮಾತನಾಡಿಲ್ಲ. ಆದರೂ ಅವಳ ಬಯಕೆಯಲ್ಲಿ ಬೇಯುತ್ತಿದ್ದೇನೆ

ಒಮ್ಮೆ ಅವಳನ್ನು ಮಾತನಾಡಿಸಬೇಕು. ನನ್ನ ಪ್ರಶ್ನೆಗೆ ಉತ್ತರ ಕೊಡ ಲೆಂದು ಅವಳ ಗುಲಾಬಿಯ ತುಟಿ ಮೊಗ್ಗು ಅರಳುವುದನ್ನು ನೋಡಬೇಕು.

ಅರಿಶಿನ, ಕುಂಕುಮ, ಬಳೆ

ಊಹೂ—ನಾನವಳ ಚಿಂತೆಮಾಡಲಾರೆ. ಹಾಳಾಗಿ ಹೋಗಲಿ ಈ ಬಯಕೆ. ನಾನು ಓದಬೇಕು. ಹೇಗಾದರೂ ಈ ಬಾರಿ ರ್‍ಯಾಂಕ್ ತೆಗೆದು ಕೊಳ್ಳಬೇಕು.

ತಂದೆಯ ಮುಖದ ಮೇಲೇನೋ ಚಿಂತೆಯ ಮೋಡ ; ತಾಯ ಮೊಗ ದಲ್ಲೇನೋ ಕೊರಗು. ಈ ವರ್ಷ ಆಕೆ ಹೊಸ ಸೀರೆ ಕೊಂಡಂತಿಲ್ಲ.

" ಇನ್ನು ಎಷ್ಟು ವರ್ಷಕ್ಕಪ್ಪಾ ನಿನ್ನ ಓದು ಮುಗಿಯುವುದು "

ಊಹೂ–ಹೀಗಾದರೆ ಸರಿಯಲ್ಲ. ಓದಬೇಕು. ಓದಬೇಕು. ಓದಬೇಕು. ಎಷ್ಟು ಓದಿದರೂ ಸಾಲದು.

ಎಂಥ ಸುಯೋಗ – ಓ ! ಆದರೆಂಥ ಪೆಟ್ಟು.

ಈದಿನ ಮೊಟ್ಟ ಮೊದಲ ಬಾರಿಗೆ ಕಾತ್ಯಾಯನಿಯೊಂದಿಗೆ ಮಾತನಾಡಿದೆ. ಎಷ್ಟು ತಿಂಗಳ ಮೇಲೆ ಈ ಯೋಗ ಬಂದಿತು.

ಈದಿನ—

.... ....... ....... .

[ಡಿಸೆಕ್ಷನ್ ಥಿಯೇಟರು. ಪೂರ್ವದ ಕಡೆಯ ಕಿಟಕಿಯಿಂದ ಹಾಯ್ದು ಬಂದ ಸೂರ್ಯನ ಬೆಳಕು ತನ್ನ ಪ್ರಖರತೆಯನ್ನು ಕಳೆದುಕೊಂಡು ಹಿತವಾಗಿದೆ. ವಿಶಾಲವಾದ ಹಾಲಿನಲ್ಲಿಟ್ಟ ನಾಲ್ಕಾರು ಮೇಜುಗಳ ಮೇಲೆ, ಅವುಗಳ ಬಳಿ ನಿಂತ ಹುಡುಗರ ಮೇಲೆ ಬಿದ್ದಿದೆ. ಆ ಮೇಜುಗಳ ಮಧ್ಯೆ ಡೆಮಾನ್ ಸ್ಟ್ರೇಟರು ಅತ್ತಿಂದಿತ್ತ ಆಗಾಗ ಒಬ್ಬೊಬ್ಬ ಹುಡುಗನಿಗೆ ಏನೋ ಹೇಳುತ್ತಾ, ಯಾರಿಗೋ ಏನನ್ನೋ ತೋರಿಸುತ್ತಾ ಓಡಾಡುತ್ತಿದ್ದಾರೆ. ಸುತ್ತ ನಿಂತ ಕೆಲವರಿಗೆ ಮಾತ್ರವೇ ಕೇಳುವಷ್ಟು ತಗ್ಗಾದ ಧ್ವನಿಯಲ್ಲಿ ಒಂದೊಂದು ಮೇಜಿನ ಬಳಿ ಒಬ್ಬೊಬ್ಬರು, ಡಿಸೆಕ್ಷನ್‌ಮ್ಯಾನ್ಯುಯಲ್ ಓದುತ್ತಿದ್ದಾರೆ. ಆ ಮೇಜುಗಳ ಪೈಕಿ ಒಂದರ ಬಳಿ ರಾಜಶೇಖರನಿದ್ದಾನೆ. ಅವನ ಬಳಿಯಲ್ಲಿ ಇನ್ನಿಬ್ಬರು ಹುಡುಗರು, ಒಬ್ಬ ಸುಮಾರು ೧೮ ವರ್ಷದ ಸುಂದರ ಯುವತಿ ನಿಂತಿದ್ದಾಳೆ. ಹುಡುಗರು ಸೂಟು ಧರಿಸಿದಾರೆ. ಯುವತಿ ತೆಳು ನೀಲಿಯ ಜಾರ್ಜೆಟ್ ಸೀರೆಯುಟ್ಟು, ದಟ್ಟ ಹಸುರಿನ ಕುಪ್ಪಸ ತೊಟ್ಟು, ಬಾಬ್‌ಕಟ್‌ನ ರೀತಿಯಲ್ಲಿ ಎತ್ತಿ ಕಟ್ಟಿದ ಕೂದಲಿಗೆ ಬಿಗಿದ ರಿಬ್ಬನ್ನಿನ ಒಂದು ಬದಿಗೆ ಬೊಗಸೆಯಗಲದ ಹಳದಿ ಬಣ್ಣದ ಗುಲಾಬಿಯ ಹೂವನ್ನು ಮುಡಿದಿದಾಳೆ. ರಾಜಶೇಖರ ಯಾವುದೋ ಕನಸಿನಲ್ಲಿರುವಂತೆ, ತಾನು ಮಾಡುವ ಕೆಲಸವನ್ನು ಮರೆತು ಅವಳ ಮುಖ ನೋಡುತ್ತಿದ್ದಾನೆ]

**ರಾಜಶೇಖರ.** (ತನಗೆ ತಾನೇ) ಕಾತ್ಯಾಯನಿ ಕಾತ್ಯಾಯನಿ....ಎಷ್ಟು ದಿನದ ಬಳಿಕ ಈ ಸಮೀಪದ ಭೇಟಿ.

**ಕಾತ್ಯಾಯಿನಿ.** (ತನ್ನತ್ತ ನೋಡುತ್ತಿರುವ ರಾಜಶೇಖರನನ್ನು ಕಂಡು, ದ್ರಾವಕ ಸುರಿಯುವ ಧ್ವನಿಯಲ್ಲಿ) ಇಲ್ಲಿ ನೋಡಿ, ಕೈಗಳಿಂದ ಆ ಮೇಜಿನ ಮೇಲಿರುವುದನ್ನು ಡಿಸೆಕ್ಟ್ ಮಾಡಿ. ಕಣ್ಣುಗಳಿಂದ ನನ್ನ ಮುಖವನ್ನು ಡಿಸೆಕ್ಟ್ ಮಾಡಬೇಡಿ.

[ ರಾಜಶೇಖರ ತಬ್ಬಿಬ್ಬಲಾಗುತ್ತಾನೆ. ಸುತ್ತಲಿದ್ದ ಹುಡುಗರು ಆ ಮಾತು ಕೇಳಿ ನಗುತ್ತಾರೆ ಡೆಮಾನ್‌ಸ್ಟ್ರೇಟರು ದೂರದಿಂದಲೇ 'ಏನದು ಗದ್ದಲ. ಆದಷ್ಟು ನಿಶ್ಶಬ್ದವಾಗಿ ಕೆಲಸ ಮಾಡಿ. ಪಕ್ಕದವರಿಗೆ ತೊಂದರೆ ಮಾಡಬೇಡಿ' ಎಂದು ಕೂಗುತ್ತಾರೆ. ಉಳಿದ ಮೇಜುಗಳ ಬಳಿಯಿದ್ದ ಹುಡು

ಗರು ರಾಜಶೇಖರ ಕಾತ್ಯಾಯನಿಯತ್ತ ನೋಡುತ್ತಾರೆ. ರಾಜಶೇಖರ ನಾಚಿ ತಲೆ ಬಗ್ಗಿಸುತ್ತಾನೆ. ಕಾತ್ಯಾಯನಿಯ ಮುಖದ ಮೇಲೆ ತಾತ್ಸಾರದ ನಗು ಸುಳಿದು ಮಾಯವಾಗುತ್ತದೆ. ]

............................

ಓ ಎಂಥ ನಿರೀಕ್ಷೆ, ಏನು ಪರಿಣಾಮ ?

ಗುಲಾಬಿ ಬಣ್ಣದ ಆ ತುಟಿ ಮೊಗ್ಗುಗಳು ಅರಳಿ ಮಧು ಸೂಸಬಹು ದೆಂದಿದ್ದೆ ; ಆದರಲ್ಲಿ ಕಠೋರ ಅಣಕದ ಹಾವು ಹೆಡೆಯರಳಿಸಬಹುದು ಎಂದು ನಾನು ಕನಸುಮನಸ್ಸಿನಲ್ಲಿಯೂ ಊಹಿಸಿರಲಿಲ್ಲ.

ಓ – ಮಧು ತುಟಿಗಳಿಂದ ಹಾಲಾಹಲದ ಮಾತು

ನನ್ನನ್ನು, ನಾನು ಆಕೆಯತ್ತ ಹಾಗೆ ನೋಡಿದುದನ್ನು ಆಕೆ ತಪ್ಪು ತಿಳಿದುಕೊಂಡಿರಬಹುದೇ ? ನಿಜ – ನಾನಾಕೆಯತ್ತ ಹಾಗೆ ನೋಡಬಾರದಾ ಗಿತ್ತು ನೋಡಬಾರದಾಗಿತ್ತು. ಆದರೂ ಕೈಮೀರಿ ಹೋಯಿತು. ನೋಡಿದೆ.

ಹಾಗೆ ಒಂದು ವೇಳೆ ಆಕೆ ನನ್ನ ನಡತೆಯನ್ನು ತಪ್ಪು ತಿಳಿದು ಕೊಂಡೇ ಹೋಗಬಾರದೆಂದು, ಕ್ಲಾಸು ಮುಗಿದ ಮೇಲೆ, ಕಾರಿಡಾರ್‌ನಲ್ಲಿ ಆಕೆ ಹೊರ ಬರುವುದನ್ನೇ ಕಾದಿದ್ದ.. ....

[ ಮೆಡಿಕಲ್ ಕಾಲೇಜಿನ ಮುಂದಿನ ಕಾರಿಡಾರ್‌ನ, ಅಂಗಳಕ್ಕಿಳಿಯುವ ಮೆಟ್ಟಲುಗಳ ಬಳಿ, ರಾಜಶೇಖರ ಉದ್ವಿಗ್ನನಾಗಿ ಕಾತ್ಯಾಯನಿ ಹೊರಬರುವು ದನ್ನೇ ಕಾದು ನಿಂತಿದಾನೆ ಒಂದೆರಡು ನಿಮಿಷಗಳಲ್ಲೇ ಕಾತ್ಯಾಯನಿ, ತನ್ನ ಗೆಳತಿ ರಾಜೇಶ್ವರಿಯೊಡನೆ ಹೊರಬಂದು, ಮೆಟ್ಟಲು ಪಕ್ಕದ ಕಂಭದ ಬಳಿ ನಿಂತ ರಾಜಶೇಖರನನ್ನು ನೋಡಿಯೂ ನೋಡದಂತೆ ಹೋಗುವುದರಲ್ಲಿರು ತ್ತಾಳೆ ]

**ರಾಜಶೇಖರ್ :** (ತಗ್ಗು ಧ್ವನಿಯಲ್ಲಿ) ಮಿಸ್ ಕಾತ್ಯಾಯಿನಿ....

**ಕಾತ್ಯಾಯಿನಿ :** (ಆಶ್ಚರ್ಯದಿಂದ ಆವನತ್ತ ತಿರುಗಿ) ಓ ನೀವೋ. ಏನು ಬೇಕಾಗಿತ್ತು ? ಅಲ್ಲಿ ಮುಖಪರೀಕ್ಷ, ಇಲ್ಲಿ ಧ್ವನಿ ಪರೀಕ್ಷೆಯೇ ?

**ರಾಜಶೇಖರ್ :** ನನ್ನನ್ನು ಕ್ಷಮಿಸಿ. ನನ್ನ ನಡತೆಯನ್ನು ತಾವು ತಪ್ಪು ತಿಳಿದುಕೊಳ್ಳಬಾರದು. ತಮ್ಮ ಮನನೋಯಿಸುವ 'ಉದ್ದೇಶದಿಂದ ತಮ್ಮ ಕಡೆ ಹಾಗೆ ನೋಡಲಿಲ್ಲ.

**ಕಾತ್ಯಾಯನಿ :** ಹಾಗೋ, ಈಗ ತಮ್ಮ ಉದ್ದೇಶ ಪರೀಕ್ಷೆ ಮಾಡಲು ನನಗೆ ವೇಳೆಯಿಲ್ಲ, ಅದರ ಅಗತ್ಯವೂ ಇಲ್ಲ. ನಡಿ ರಾ ಜೇ ಶ್ವ ರಿ, ಹೋಗೋಣ ಹೊತ್ತಾಯಿತು.

**ರಾಜೇಶ್ವರಿ :** ಕಾತ್ಯಾಯಿನಿ, ಅವರಿಗೆ ಈಗ ಹೇಳಿದುದನ್ನು ನೂರೊಂದು ಬಾರಿ ಇಂಪೋಸಿರ್ಷ ಬರೆದುಕೊಂಡು ಬಾ ಎಂದು ಹೇಳು. ಆಮೇಲೆ ಅವರ ಅಪಾಲಜಿ ಕನ್‌ಸಿಡರ್ ಮಾಡೋಣ.

[ ಕಾತ್ಯಾಯನಿಯು ರಾಜೇಶ್ವರಿಯ ಮಾತು ಕೇಳಿ ನಗುವಳು. ಇಬ್ಬರೂ ನಗುತ್ತಾ ಹೋಗುವರು. ರಾಜಶೇಖರ ಆ ನಗುವನ್ನು ಕೇಳಿ ಗರ ಬಡಿದಂತೆ ನಿಂತಲ್ಲಿಯೇ ನಿಲ್ಲುವನು ]

....................

ಹೊರಟು ಹೋದರು. ನನ್ನ ಮಾತನ್ನು ನನ್ನ ಮುಖಕ್ಕೇ ರಾಚಿ ಹೊರಟು ಹೋದರು.

ಊಹೂ. ನಾನೆಂದೆಂದೂ ಈ ಅಪಮಾನವನ್ನು ಮರೆಯಲಾರೆ.

ಮಾತನಾಡದಿದ್ದರೆ ಹೋಗಲಿ. ಹಾಳಾಗಲಿ. ಅವಳ ಮಾತಿನ ಮುತ್ತು ಸುರಿದು ನಾನೇನೂ ಉದ್ಧಾರವಾಗಬೇಕಿಲ್ಲ. ಅವಳ ತುಟಿಯ ಟ್ರೆಜರಿಯಲ್ಲೇ ಕಾದಿಟ್ಟುಕೊಳ್ಳಲಿ .. ....

ಆದರೂ ಆ ತುಟಿಯಲ್ಲಿ ತಿರಸ್ಕಾರದ ಹೆಡೆ ತೂಗದೆ, ನಗೆಯ ಮುಗುಳು ಬಿರಿದಿದ್ದರೆ... ರೆ....ರೆ....ರೆ... ..

ಥೂ. ಮತ್ತೇಕೆ ಆ ಹಾಳು ಯೋಚನೆ. ಹಾಳಾಗಲಿ ಆ ಕಾತ್ಯಾಯನಿ. ಅವಳು ನನ್ನ ವಿಷಯ ತಪ್ಪು ತಿಳಿದುಕೊಂಡರೆ ನನಗೇನು ? ಏನು ತಿಳಿದುಕೊಂಡರೆ ತಾನೇ ನನಗೇನು ? ಐ ಕೇರ್ ಟೂ ಹೂಟ್ಸ್.

ಕಾತ್ಯಾಯನಿ, ತೊಲಗಿ ಹೋಗು ನನ್ನ ಮನಸ್ಸಿನಿಂದ, ನನ್ನ ಕನಸಿನಿಂದ.

ನಾನು ಓದಬೇಕು.

ಓದಬೇಕು, ಓದಬೇಕು, ಓದಬೇಕು, ಓದಬೇಕು .

ಓ ಕಾತ್ಯಾಯನಿ.

ನೀನೆಂಥ ನಿಷ್ಕರುಣಿ.

ಊಹೂ ನಾನು ಓದಬೇಕು.

ಅನಾಟಮಿ, ಫಿಸಿಯಾಲಜಿ, ಹಿಸ್ಟಾಲಜಿ, ಬಯೋಕೆಮಿಸ್ಟ್ರಿ, ಕಾತ್ಯಾಯನಿ .ಥೂ . ತಪ್ಪಿತು ಬಯೋಕೆಮಿಸ್ಟ್ರಿ . ಅನಾಟಮಿ, ಫಿಸಿಯಾಲಜಿ.

* * *

ದಿನಗಳು ಉರುಳುತ್ತಿವೆ , ಬಾಳು ಸಾಗುತ್ತಿದೆ. ಆದರೆ ಏಕೋ ಉತ್ಸಾಹವಿಲ್ಲ.

ಈ ದಿನ ಸಂಜೆ ಕಾಲೇಜಿನಿಂದ ಹಾಸ್ಟಲಿಗೆ ಹಿಂದಿರುಗಿದವನು, ಮುಖ ತೊಳೆದುಬಂದು, ಮತ್ತೆ ಪುಸ್ತಕ ಹಿಡಿದು ಕುಳಿತೆ. ಹೊರಗೆ ಹೊಂಬಿಸಿಲಿನ ಸಂಜೆ ಬಾರೆಂದು ಕರೆಯುತ್ತಿತ್ತು. ಆದರೆ ಮನಸ್ಸಿಗೆ ಮಾತ್ರ ಆ ಬೆಳಕಿನಲ್ಲಿ ಹೋಗುವುದು ಬೇಕಾಗಲಿಲ್ಲ.

ನಾನು ಬರುವಾಗಲೇ ಹೊರಗೆ ಹೊರಡುವುದಕ್ಕೆ ಡ್ರೆಸ್ ಮಾಡಿಕೊಳ್ಳುತ್ತಿದ್ದ ರೂಂ ಮೇಟ್ ಸದಾಶಿವಪ್ಪ—

" ಇದೇನು ರಾಜಶೇಖರ್. ಮತ್ತೇನೋ ಪುಸ್ತಕ ಹಿಡಿದು ಕುಳಿತು ಬಿಟ್ಟಿರಲ್ಲ. ಹೊರಗೆಲ್ಲೂ ತಿರುಗಾಡಲು ಬರುವುದಿಲ್ಲವೇ ? "

—ಎಂದು ಕೇಳಿದ.

" ಇಲ್ಲ, ಸದಾಶಿವಪ್ಪ. ಎಲ್ಲೂ ಹೋಗುವುದಿಲ್ಲ."

" ಏಕೆ ? "

" ಏಕೋ—ಮೈ ಏಕೋ ಒಂದು ತರಹಾ ಇದೆ. ಲವಲವಿಕೆಯೇ ಇಲ್ಲ "

ನನ್ನ ಮಾತು ಕೇಳಿ, ಸದಾಶಿವಪ್ಪ ನಕ್ಕುಬಿಟ್ಟು ಹೇಳಿದ—

" ನಿಮ್ಮ ರೋಗ ನನಗೆ ಗೊತ್ತಿದೆ, ಬನ್ನಿ."

" ಏನು ? "

" ಹೇಳಲೇ ? "

" ಹೇಳಿ."

" ಛೇ. ಉಂಟೆ ? "

" ನಿಮಗೆ ಹಿಡಿದಿರುವ ರೋಗವೆಲ್ಲಾ ಒಂದೇ—ಕಾತ್ಯಾಯನೀಯ. ಅಲ್ಲವೇ ರಾಜಶೇಖರ್ ? "

ಕಾತ್ಯಾಯನೀಯ ? ನನಗೆ—ಕಾತ್ಯಾಯನೀಯ. ಸದಾಶಿವಪ್ಪ ನಗು ನಗುತ್ತಾ ಹೇಳಿದ ಆ ಮಾತನ್ನು ಕೇಳಿ ನನಗ ಸಿಡಿಲು ಹೊಡೆದ ಹಾಗಾಯಿತು. ಆದರೂ ಅದನ್ನು ತೋರಗೊಡಗೆ, ಆತನ ಮಾತು ನನಗೆ ಅರ್ಥವಾಗದವನಂತೆ –

" ಕಾತ್ಯಾಯನೀಯ. ಅದೇನು ? ಅದೊಂದು ರೋಗವೇ ? "

" ಹ್ಞೂ, ಹೊಚ್ಚ ಹೊಸ ರೋಗ. ಅದಕ್ಕಿನ್ನೂ ಔಷಧಿ ಕಂಡುಹಿಡಿದಿಲ್ಲ. ನಿಮಗೆ ಹಿಡಿದಿರುವ ರೋಗ ಅದೇ, ನೋಡಿ ರಾಜಶೇಖರ್, ಬೆಕ್ಕು ಕಣ್ಣು ಮುಚ್ಚಿಕೊಂಡು ಹಾಲು ಕುಡಿದರೆ ಜಗತ್ತಿಗೆ ಕಾಣುವುದಿಲ್ಲವೇ ? ನಾನೊಂದು ಮಾತು ಹೇಳುತ್ತೇನೆ ಕೇಳಿ."

" ಏನು ಹೇಳಿ ? "

" ಈ ಹುಚ್ಚು ಬಿಟ್ಟುಬಿಡಿ ರಾಜಶೇಖರ್. ಕಾತ್ಯಾಯನಿ ನನ್ನ ಕ್ಲಾಸ್

ಮೇಟ್. ನಿಮಗಿಂತ ಅವಳನ್ನು ನಾನು ಚೆನ್ನಾಗಿ ಬಲ್ಲೆ. ಆ ಹಕ್ಕಿಯ ಬೇಟೆ ಸಫಲವಾಗುವುದಿಲ್ಲ. ಬರೀ ಹೆಣ್ಣಿನ ಹುಚ್ಚಾಗಿದ್ದರೆ ಹೇಳಿ – ಅದಕ್ಕೆ ನಾನು ಔಷದಿ ಹೇಳುತ್ತೇನೆ. ಯಾವುದಕ್ಕೋ ಕೈಹಾಕಿ ನಗೆಪಾಟಲಾಗುವುದರಲ್ಲಿ ಏನೂ ಸುಖವಿಲ್ಲ. ಬರೀ ಗೇಲಿ ಮಾಡಿಸಿಕೊಳ್ಳುದೊಂದೇ ಆಗುವುದು."

ಸದಾಶಿವಪ್ಪನ ಅನಿರೀಕ್ಷಿತವಾದ ಮಾತು ಕೇಳಿ ನಾನು ತಣ್ಣಗಾಗಿ ಕುಳಿತೆ. ನಾನು ಸುಮ್ಮನೆ ಕುಳಿತುದನ್ನು ಕಂಡು ಆತನೇ ಮುಂದುವರಿಸಿ ಹೇಳಿದ—

" ನಾನು ಈ ಮೂರು ವರ್ಷದ ಈ ಕಾಲೇಜು ಜೀವನದಲ್ಲಿ ಎಷ್ಟೋ ರ ಹುಡುಗಿಯರನ್ನು ನೋಡಿದೇನೆ ರಾಜಶೇಖರ್ ಕೆಲವರಂತೂ ರೆಗ್ಯು ್ಯಾನ್ ಈಟರ್ಸ್ (ಪುರುಷಾಹಾರಿಗಳು) ಆದರೆ ಈ ಹುಡುಗಿಯ ಮಾತ್ರ ಕಂಡವರಿಲ್ಲ. ಪ್ರಯತ್ನ ಮಾಡುವುದಕ್ಕೇನೋ ಅತ್ಯುತ್ತಮ ವಸ್ತು ಅವಳು. ಆದರೆ ಗಿಟ್ಟುವುದಿಲ್ಲ. ಬಹಳ ಜನ ಟ್ರೈ ಮಾಡಿ ಸುಸ್ತಾದರು."

" ಏಕೆ ? ಅವಳ ಬಾಯಿಗೆ ಹೆದರಿಕೆಯೋ ? "

" ಮೈ ಸುಂದರವಾಗಿದ್ದಾಗ, ಬಾಯಿ ಹೇಗಿದ್ದರೇನು ? ಅದಲ್ಲ. ಆದರೂ ಒಂದು ತರಹಾ."

" ಅಂದರೆ...."

" ಅಂದರೆ ಹೀಗೆ ಅಂತ ಹೇಳುವುದೇ ಕಷ್ಟ. ದೂರದಿಂದ ಬೆಂಕಿಯುರಿ, ಹತ್ತಿರ ಹೋದರೆ ಹಿಮಗಡ್ಡೆ. ಏನೋ ಹೀಗೆಂತ ಹೇಳಲಾರೆ. ಆದರೆ ಇಷ್ಟು ಮಾತ್ರ ಹೇಳುತ್ತೇನೆ. ನೀವು ನಮ್ಮ ಹಾಗಲ್ಲ ಬಹಳ ಸೀರಿಯಸ್ ಸ್ಟೂಡೆಂಟ್. ಏನೋ ಛೇಂಜ್‌ಗೆ ಇರಲಿ ಅಂತ ಯಾರ ಕಡೆಯಾದರೂ ಕಣ್ಣು ಹೊಡೆದರೆ ಹೋಗಲಿ ಎನ್ನಬಹುದು. ಆದರೆ ಇದರ ಗಿಲಿ ಹತ್ತಿಸಿಕೊಂಡು ಗೇಲಿಗೆ ಗುರಿಯಾಗಬೇಡಿ. ಪ್ರಯತ್ನಪಟ್ಟದ್ದಕ್ಕೆ ಫಲವಾದರೂ ಗಿಟ್ಟಬೇಕು. ಬರೀ ನೋಡಿ ನೋಡಿ ಕಣ್ಣು ನೋಯಿಸಿಕೊಂಡು, ತಲೆ ಕೆಡಿಸಿಕೊಂಡರೇನು ಸಾರ್ಥಕ. ಬರುವುದಾದರೆ ಬನ್ನಿ. ಹಾಗೇ ಎಲ್ಲಾದರೂ ಅಡ್ಡಾಡಿಕೊಂಡು, ಒಂದು ಸಿನಿಮಾ ನೋಡಿ ಬರೋಣ."

" ಇಲ್ಲ ಕ್ಷಮಿಸಿ."

" ಸರಿ ಹಾಗಾದರೆ. ನಾನು ಹೇಳಿದ್ದನ್ನು ತಪ್ಪು ಅರ್ಥ ಮಾಡಿಕೊಳ್ಳಬೇಡಿ."

—ಎಂದು ಸದಾಶಿವಪ್ಪ ಕನ್ನಡಿಯಲ್ಲಿ ಟೈ ನೋಡಿಕೊಂಡು, ಸಿಗರೇಟು ಹೊತ್ತಿಸಿ ಸಿಳ್ಳು ಹಾಕುತ್ತಾ ಹೊರಟು ಹೋದ. ನಾನೂ ಕೈಯಲ್ಲಿದ್ದ ಪುಸ್ತಕ

ಮೇಜಿನ ಮೇಲೆ ಒಗೆದು ಕುಳಿತುಕೊಂಡೆ.

ಕಾತ್ಯಾಯನೀಯ ?

ನನ್ನ ಹುಚ್ಚಿಗೆ ಲೋಕ ಕೊಟ್ಟ ಹೆಸರು.

ಹಾಗಾದರೆ ಎಲ್ಲರಿಗೂ ನನ್ನ ಹುಚ್ಚು ಗೊತ್ತಾಗಿದೆಯೇ ? ನಿಜ-ಅವಳ ಹೆಜ್ಜೆ ಸಪ್ಪಳವಾದಾಗ, ಅವಳ ದನಿ ಕೇಳಿದಾಗ, ಅವಳು ಹಚ್ಚಿಕೊಂಡ ಪರಿಮಳದ ಗಾಳಿ ಸುಳಿದಾಗ, ನನ್ನ ಕಣ್ಣು ಅತ್ತಲೇ ಸುಳಿಯುವುದನ್ನು ನಾನು ಬಲ್ಲೆ.

ಒಂದೆರಡು ಬಾರಿ ನನಗರಿವಾಗದಂತೆಯೇ ನಾನು ಅವಳನ್ನು ಹಿಂಬಾಲಿಸಿದುದೂ ಉಂಟು.

ಆದರೆ . .ಆದರೆ ಎಲ್ಲರಿಗೂ ಅರಿವಾಗಿದೆಯೇ ಅದು ?

ನನ್ನ ಹುಚ್ಚಿಗೆ ಹೆಸರಿಡುವ ಮಟ್ಟಿಗೆ ಅರ್ಥವಾಗಿದೆಯೇ ?

ನನ್ನ ಎದೆಯಲ್ಲಿ ಏನೋ ಭಯ ತುಂಬಿತು. ಆಕಸ್ಮಾತ್ತಾಗಿ ಇದು ಡಾಕ್ಟರ ಕಿವಿಗೆ ಬಿದ್ದರೇನು ಗತಿ ? 'ಇದಕ್ಕೇ ಏನು ನೀನು ಇಲ್ಲಿಗೆ ಬಂದಿದ್ದು ? ಇದೇ ಏನು ನಿನ್ನ ಆದರ್ಶ ?' ಎಂದು ಕೇಳಿದರೆ ಏನು ಹೇಳಿಯೇನು ?

ಛೀ ! ಈ ಭ್ರಮೆಯನ್ನು ಬಿಡಬೇಕು ಹಾಳಾಗಿ ಹೋಗಲಿ ಕಾತ್ಯಾಯನಿ ಅವಳಿಂದ ನನಗೇನಾಗಬೇಕು. ನಾನು ಬಂದದ್ದು ಅವಳ ಬೆನ್ನ ಹಿಂದೆ ಭ್ರಮರವಾಗಿ ಸುತ್ತಲೆಂದೇ ?

ಕಾತ್ಯಾಯನೀಯ. ಮ್ಯಾನಿಯಾ ಇದ್ದ ಹಾಗೆ ಕಾತ್ಯಾಯನೀಯ ! ಆ ಹೆಸರಿಟ್ಟವನು ಯಾವನೋ ಕದೀಮನಿರಬೇಕು.

ಕಾತ್ಯಾಯನೀಯ. ಆದರೂ ಎಷ್ಟು ಚೆನ್ನಾಗಿದೆ ಹೆಸರು ?

ಹಾಳಾಗಲಿ ಹೆಸರು, ಹಾಳಾಗಲಿ ಕಾತ್ಯಾಯನಿ. ಎಲ್ಲವೂ ಬಂಕಿಬಿದ್ದು ಉರಿದು ಹೋಗಲಿ.

ಬೆಂಕಿ . ಬೆಂಕಿ ಸದಾಶಿವಪ್ಪ ಏನು ಹೇಳಿದ—

' ದೂರದಿಂದ ಬೆಂಕಿಯುರಿ, ಹತ್ತಿರದಿಂದ ಹಿಮುಗಡ್ಡೆ'— ಕಾತ್ಯಾಯನೀಯ.

ಹ್ಹ . ಹ್ಹ ಹ್ಹಾ . ಎಂಥ ಸಮಸ್ಯೆ. ಎಂಥ ಸುಂದರ ಸಮಸ್ಯೆ. ಕಾತ್ಯಾಯನಿ, ನಿನ್ನ ಕಿವಿಗೂ ಬಿದ್ದಿದೆಯೇ ಇದು ? ನನಗೆ ಕಾತ್ಯಾಯನೀಯ. ನಿನಗೆ ?

ನಿನಗೆ ?

ಬರೀ ಪ್ರಶ್ನಾರ್ಥಕ ಚಿಹ್ನೆ, ನೀನೂ ಅಷ್ಟೆ – ಎಲ್ಲರ ಪಾಲಿಗೂ ಪ್ರಶ್ನಾ

ರ್ಥಕ ಚಿಹ್ನೆ – ನನ್ನ ಪಾಲಿಗೆ – ಕಾತ್ಯಾಯನೀಯ.

ಕಾತ್ಯಾಯನೀಯ. ನನ್ನ ರೋಗಕ್ಕೆ ಎಷ್ಟು ಸುಂದರವಾದ ಹೆಸರು. ಇಷ್ಟು ಸುಂದರವಾದ ಹೆಸರಿರುವ ರೋಗಕ್ಕೆ ಗುರಿಯಾಗುವುದೂ ಒಂದು ಸಂತೋಷವೇ. ಅಲ್ಲವೇ ಕಾತ್ಯಾಯನಿ ?

ಊಹೂ – ನೀನಿದಕ್ಕೆ ಉತ್ತರ ಕೊಡಲಾರೆ, ನಾನು ಎಂದೆಂದಿಗೂ ಮತ್ತೆ ನಿನ್ನನ್ನು ಪ್ರಶ್ನಿಸಲಾರೆ.

ನಿನಗೆ ನಾನು ಏನೂ ಅಲ್ಲ. ಅಲ್ಲ ; ನನಗೆ ನೀನು ಏನೂ ಅಲ್ಲ.

ಮೇಜಿನ ಮೇಲೆ ಬಿಸುಟಿದ್ದ ಪುಸ್ತಕವನ್ನು ಮತ್ತೆ ಕೈಗೆತ್ತಿಕೊಂಡೆ.

* * *

ಮುಂದೆ ಕಾತ್ಯಾಯನಿ – ಹಿಂದೆ ನಾನು , ಕಾತ್ಯಾಯನೀಯ.

ನಾನು ಅವಳ ಹಿಂದೆ ಹೋಗುತ್ತಿರುವುದು ಅವಳಿಗೆ ಹೇಗೆ ಅರಿವಾಯಿತೋ – ಬಾಲ ತುಳಿದ ಹಾವಿನಂತೆ ತಟಕ್ಕನೆ ತಿರುಗಿ ನಿಂತಳು. ಅವಳ ಕಣ್ಣಲ್ಲಿ ಕ್ರೋಧ ಉರಿಯುತ್ತಿತ್ತು. ನಾನು ಹತ್ತಿರವಾಗುವುದನ್ನೇ ಕಾದು ನಿಂತಳು. ಅವಳು ನಿಂತದ್ದನ್ನು ಕಂಡು ನಾನು ಬೇರೆ ಬದಿಗೆ ಜಾರಲು ಯತ್ನಿಸಿದೆ. ನನ್ನ ಪ್ರಯತ್ನ ಅವಳಿಗೆ ಅರ್ಥವಾಗಿರಬೇಕು.

" ಮಿ. ರಾಜಶೇಖರ್, ಇಲ್ಲಿ ಬನ್ನಿ "

—ಎಂದು ಕರೆದಳು

' ನನ್ನ ಹೆಸರನ್ನು ಅವಳಿಗೆ ಯಾರು ಹೇಳಿದರು ? ' ಆಶ್ಚರ್ಯ ಗಾಬರಿಯಿಂದ, ಬೇರೆ ದಾರಿ ಕಾಣದೆ ಅವಳ ಬಳಿ ಸಾರಿದೆ.

" ನೋಡಿ. ನಿಮ್ಮ ಈ ನಡತೆ ಚೆನ್ನಾಗಿಲ್ಲ. ಈರೀತಿ ಬೆನ್ನು ಹತ್ತುವುದು ನನಗಾಗಲಿ, ನಿಮಗಾಗಲಿ ಒಳ್ಳೆಯ ಹೆಸರು ತರುವುದಿಲ್ಲ ನೀವು ಈ ಚಾಳಿಯನ್ನು ಬಿಟ್ಟರೆ ಒಳಿತು ಇಲ್ಲವಾದರೆ ನಾನು ಪ್ರಿನ್ಸಿಪಾಲರಿಗೆ ರಿಪೋರ್ಟ್ ಮಾಡಬೇಕಾಗುತ್ತದೆ. "

ಆ ಮಾತು ಕೇಳಿ ನನಗೆ ಭಯಕ್ಕಿಂತಲೂ ಹೆಚ್ಚಾಗಿ ನಾಚಿಕೆಯಾಯಿತು. ಬೇರೆ ಏನೂ ಹೇಳಲು ತೋಚದೆ—

" ನನ್ನನ್ನು ಕ್ಷಮಿಸಿ "—ಎಂದೆ.

" ಕ್ಷಮಿಸಿ ! ಕ್ಷಮಿಸಿ ! ಕ್ಷಮಿಸಿ ಎಂದು ಕೇಳುವುದು ನಿಮಗೊಂದು ಜಾಡ್ಯವೇ ಆಗಿಹೋಗಿದೆ. ಈ ದಿನ ಒಂದು ಮಾತು ಹೇಳುತ್ತೇನೆ – ಕೇಳಿ. ನಿಮ್ಮಂಥ ಒಬ್ಬಿಬ್ಬರಿಂದ ಈ ಕಾಲೇಜಿನ ವಿದ್ಯಾರ್ಥಿಗಳೆಲ್ಲರಿಗೂ ಅಪಖ್ಯಾತಿ. ನಾವು ಕಾಲೇಜಿಗೆ ಬರುವುದು ಓದಲಿಕ್ಕೆ. ನಿಮ್ಮ ಕಣ್ಣು ಸೆಳೆಯಲಿಕ್ಕಲ್ಲ.

ಅರ್ಥವಾಯಿತೇ ? ಅರ್ಥವಾಗದಿದ್ದರೆ ಬೇಗ ಅರ್ಥಮಾಡಿಕೊಳ್ಳಿ. ಕೈಮೀರಿದ ಮೇಲೆ ಪಶ್ಚಾತ್ತಾಪಪಡುವುದಕ್ಕೂ ಅವಕಾಶವಿರುವುದಿಲ್ಲ. ನೆನಪಿಡಿ. ನಾನೂ, ನೀವೂ ವಿದ್ಯಾರ್ಥಿಗಳು , ಲೋಫರ್ಸ್ ಅಲ್ಲ "

ಇಷ್ಟು ಹೇಳಿ ನಾನು ಪ್ರತ್ಯುತ್ತರ ಕೊಡಲೂ ಅವಕಾಶ ಕೊಡದೆ ತಲೆ ತಗ್ಗಿಸಿಕೊಂಡು ಸರಸರ ನಡೆದುಬಿಟ್ಟಳು ಕಾತ್ಯಾಯನಿ.

' ವಿದ್ಯಾರ್ಥಿಗಳು ಲೋಫರ್ಸ್ ಅಲ್ಲ.'

ಕಾತ್ಯಾಯನೀಯ—ಲೋಫರ್.

ಹೋಗುತ್ತಿದ್ದ ಅವಳತ್ತ ನೋಡಲು ಮೇಲೆದ್ದ ತಲೆ ತನ್ನಷ್ಟಕ್ಕೆ ತಾನೇ ಕೆಳಗಿಳಿಯಿತು.

ಹಾಸ್ಟಲಿಗೆ ನಾನು ಹೇಗೆ ಬಂದು ಸೇರಿದೆನೋ ನಾನರಿಯೆ. ಹೇಗೋ ಬಂದು ಮಲಗಿದೆ. ಅದುವರೆಗೂ ನನ್ನಲ್ಲಿ ಉರಿಯಾಗಿದ್ದುದು ಮರುಗಳಿಗೆಯೇ ಹಿಮಗಡ್ಡೆಯಾಗಿಹೋಯಿತು.

' ಹಿಮಗಡ್ಡೆ ? '

ನಿಜ—ತಣ್ಣಗಿತ್ತು. ನೋಡಿದೆ ಹಿಮಗಡ್ಡೆಯಲ್ಲ, ನನ್ನ ತಲೆದಿಂಬು.

* * *

ಮತ್ತೆ ಪರೀಕ್ಷೆ ಹತ್ತಿರವಾಗುತ್ತಿದೆ.

ಬರಲಿ. ಈಗ ನನಗೆ ಅದರ ಹೆದರಿಕೆಯಿಲ್ಲ. ಅದು ಬಂದಾಗ ಎದುರಿಸಲು, ಎದುರಿಸಿ ಗೆಲ್ಲಲು ಸಿದ್ಧನಿದ್ದೇನೆ.

* * *

## ೧೯೪೪

ಹೊಸ ವರ್ಷ ಆರಂಭವಾಯಿತು.

ಈ ವರ್ಷ ಏನೇನು ತರಲಿದೆಯೋ ನೋಡಬೇಕು. ಊರಿಗೆ ಹೋಗಿದ್ದಾಗ ಅಮ್ಮನ ಮಾತು ಕೇಳಿದ್ದರೆ, ಈ ವರ್ಷ ಏನಿಲ್ಲವಾದರೂ ಹೆಂಡತಿ ಎನ್ನುವವಳಾದರೂ ಮನೆಗೆ ಬರುತ್ತಿದ್ದಳು. ಸಧ್ಯ – ನಾನು ಬೇಡವೆಂದಾಗ ಸುಮ್ಮನಾದಳು. ಬದುಕಿದೆ.

ನಾನೇನೋ ಬದುಕಿದೆ. ಅವಳು ?

ಏಕೋ ಅಮ್ಮನ ಆರೋಗ್ಯ ಚೆನ್ನಾಗಿಲ್ಲ. ಆದಷ್ಟು ಎಚ್ಚರಿಕೆಯಿ· ನೋಡಿಕೊ ಎಂದು ಅಪ್ಪನಿಗೆ ಹೇಳಿ ಬಂದೆ. ಆತನಿಗೂ ನನಗೆ ಮದ ಮಾಡುವ ವಿಷಯದಲ್ಲಿ ಉತ್ಸಾಹವಿದ್ದಂತಿತ್ತು. ಅವರಿಗೇಕೆ ಅಷ್ಟು ಆತುರವೆ ನಾನರಿಯೆ.

ಸಧ್ಯ ಈ ಓದು ಮುಗಿಯುವವರೆಗೂ ಬೇಡ ಎಂದು ಜಾರಿಕೊಂಡು ಬಂದಹಾಗಾಯಿತು. ಅಮ್ಮನಿಗೇನೊ ಬಹಳ ನಿರಾಶೆಯಾದ ಹಾಗೆ ಕಂಡಿತು. ಆದರೂ ನನಗೆ ಒತ್ತಾಯ ಮಾಡಲಿಲ್ಲ.

ನನ್ನಮೇಲೆ ಅವರಿಗೆಷ್ಟು ಪ್ರೀತಿ !

ತಂದೆಗೆ ಏನೋ ಹಣಕಾಸಿನ ತೊಂದರೆ ಇರುವಂತಿದೆ. ಎಷ್ಟು ಕೇಳಿದರೂ ಬಾಯಿ ಬಿಡಲಿಲ್ಲ ಬಲವಂತ ಮಾಡಿದಾಗ—

' ನಿನಗೀಗ ಓದುವ ವಯಸ್ಸು, ಓದು. ಈ ಚಿಂತೆ ಮಾಡುವ ಕಾಲಕ್ಕೆ ಮಾಡುವೆಯಂತೆ.

—ಎಂದು ಗದರಿಕೊಂಡರು. ನಿಜ. ಆ ಗದರುವಿಕೆಯ ಹಿಂದೆ ಎಂಥ ಹೃದಯ.

ಇಷ್ಟು ಪ್ರೀತಿ ಮನುಷ್ಯನಿಗೆ ಎಲ್ಲಿಂದ ಬರುತ್ತದೆ ? ಮಾನವನ ದೇಹದ ಯಾವ ಭಾಗದಲ್ಲಿ ಹುದುಗಿರುತ್ತದೆ ? ನೂರಾರು ಮೈಗಳನ್ನು ಕತ್ತರಿಸಿ, ಯಾವ ಯಾವುದು ಎಲ್ಲಿದೆ ಎಂದು ನೋಡಿದೇನೆ. ಆದರೆ ಈ ಪ್ರೀತಿ ಎಲ್ಲಿರುತ್ತದೆ ಎಂಬುದು ಮಾತ್ರ ಕಾಣಲಿಲ್ಲ.

ಆದರೆ ನಾನು ಅವರ ಆ ಪ್ರೀತಿಗೆ ಯೋಗ್ಯನೇ ? ನನ್ನಲ್ಲಿ ಅವರಿಗೆ ಎಷ್ಟು ನಂಬಿಕೆ.

ತಾಯಿ—

' ರಾಜಣ್ಣಾ ಆದಷ್ಟೂ ಖರ್ಚು ಕಡಿಮೆ ಮಾಡು.'

ಎಂದಾಗ, ತಂದೆ—

' ಸರಿ, ರಾಜ ಅಂಥ ದುಂದುವೆಚ್ಚದ ಮಗನಲ್ಲ. ನಿನ್ನ ಮಾತು ಕೇಳಿದರೆ ಅವನು ಪಟ್ಟಣದಲ್ಲಿ ಉಪವಾಸ ಸಾಯಬೇಕಾದೀತು.

—ಎಂದು ನನ್ನ ಪರವಹಿಸಿ ಆಕೆಯನ್ನೇ ಬಾಯಿ ಮುಚ್ಚಿಸಿದ್ದರು.

ನಿಜ. ಅವರಿಗೆ ನನ್ನ ಮೇಲೆ ಅಪಾರ ಪ್ರೀತಿ. ಆದರೆ ನನಗೆ ?

ಈ ವರ್ಷ ನನಗೆ ಪರೀಕ್ಷೆಯಲ್ಲೇನೋ ಪಾಸಾಗಿತ್ತು. ಆದರೆ ನಾನು ಬಯಸಿದಂತೆ ಆಗಿರಲಿಲ್ಲ. ಸ್ಕಾಲರ್‌ಷಿಪ್ ಇರಲಿ, ಶುಲ್ಕದ ರಿಯಾಯತಿಯೂ ದೊರೆಯುವಂತಿರಲಿಲ್ಲ.

ನಾನು ಬಹಳ ತಪ್ಪು ಮಾಡಿದೆ.

ಯಾವುದೋ ಮಬ್ಬಿಗೆ ಬಿದ್ದು ಅವರ ಹೆಗಲಿಗೆ ಭಾರವಾದೆ. ಕೊಂಚ ಕಷ್ಟಪಟ್ಟಿದ್ದರೆ ಆ ಹೊರೆ ಕಡಿಮೆ ಮಾಡಬಹುದಾಗಿತ್ತು. ಮಾಡಲಿಲ್ಲ. ನಾನು ಅಪರಾಧಿ.

ಏನಾದರಾಗಲಿ, ಈ ಬಾರಿ ಮತ್ತೆ ನನ್ನಿಂದ ಆ ತಪ್ಪಾಗಲು ಬಿಡುವುದಿಲ್ಲ.

ಥ್ಯಾಂಕ್ಸ್ ಕಾತ್ಯಾಯನಿ. ನನಗೆ ಸರಿಯಾಗಿ ಬುದ್ಧಿ ಕಲಿಸಿದೆ.

* * *

ಈ ವರ್ಷ ಪ್ರೀ – ಕ್ಲಿನಿಕಲ್‌ನಿಂದ ಕ್ಲಿನಿಕಲ್. ನಾನೀಗ ಪಕ್ಕಾ ವೈದ್ಯ ವಿದ್ಯಾರ್ಥಿ. ಊಹೂ, ವೈದ್ಯನೇ. ಈಗ ನನ್ನ ಕತ್ತನ್ನು ಸ್ಟೆತೋಸ್ಕೋಪ್ ಅಲಂಕರಿಸಿದೆ. ಬೆಳಿಗ್ಗೆ ಹಾಸ್ಪಿಟಲ್ ಡ್ಯೂಟಿಗೆ ಹೋದಾಗ, ನರ್ಸ್‌ಗಳು ನನ್ನನ್ನು 'ಡಾಕ್ಟರ್' ಎಂದೇ ಕರೆಯುತ್ತಾರೆ.

ಡಾಕ್ಟರ್ ರಾಜಶೇಖರ್.

ಡಾಕ್ಟರ್

ರಾಜಶೇಖರ್

ಪ್ರಾಸಬದ್ಧವಾಗಿ, ಎಷ್ಟು ಚೆನ್ನಾಗಿ ಒಪ್ಪುತ್ತದೆ ಆ ಹೆಸರು.

ಕತ್ತಿಗೆ ಅಲಂಕಾರವಾದ ಸ್ಟೆತೋಸ್ಕೋಪ್‌ನಂತೆಯೇ, ನನ್ನ ಹೆಸರಿಗೆ ಆ ಬಿರುದು ಒಪ್ಪುತ್ತದೆ.

ಈಗ ನಲವತ್ತ ನಾಲ್ಕು – ನಲವತ್ತೈದು, ನಲವತ್ತಾರು–ನಾನು ಡಿಗ್ರಿ ಪಡೆದ ಡಾಕ್ಟರು. ಇನ್ನು ಮೂರೇ ವರ್ಷ. ಹೆಜ್ಜೆ ಜಾರದೆ, ವರ್ಷವರ್ಷವೂ ಪಾಸಾದರೆ, ನಲವತ್ತೇಳಕ್ಕೆ ನಾನು ಪಕ್ಕಾ ಡಾಕ್ಟರ್.

ಶ್ರೀಧರ್ – ನಮ್ಮ ಕನಸು ನನಸಾಗಲು ಇನ್ನು ಮೂರುವರ್ಷ ಕಳೆಯಬೇಕು.

ಶ್ರೀಧರ್ – ಎಲ್ಲಿದ್ದಾನೆ ಶ್ರೀಧರ್ ?

ಚಿಂತಾಮಣಿಯಿಂದ ಬರುವಾಗ ದಾರಿಯಲ್ಲಿ ಬೆಂಗಳೂರಿನಲ್ಲಿಳಿದು ಅವನ ಆಫೀಸಿಗೇ ಹೋದರೂ ಸಿಗಲಿಲ್ಲ. ಒಂದು ದಿನ ಅಲ್ಲೇ ಇದ್ದು ನೋಡಿ ಬಂದಿದ್ದರೆ ಚೆನ್ನಾಗಿತ್ತು. ಆಗಲಿಲ್ಲ

ಇರಲಿ – ಎಲ್ಲಿ ಹೋಗುತ್ತಾನೆ.

* * * *

ಹೊಸ ಜಗತ್ತೊಂದು ನನ್ನೆದುರು ಕಣ್ಣು ತೆರೆಯುತ್ತಿದೆ.

ಓದುವ, ಕಲಿಯಬೇಕಾದ ವಿಷಯಗಳು ಹೆಚ್ಚಿವೆ. ಓದಿನಲ್ಲಿ ಹೊಸ ಬಗೆಯ ಆಸಕ್ತಿಯೊಂದು ಕಾಣುತ್ತಿದೆ. ಎಲ್ಲಕ್ಕಿಂತ ಹೆಚ್ಚಾಗಿ ಎಂಟೂವರೆಯಿಂದ ಹನ್ನೆರಡರವರೆಗಿನ 'ಹಾಸ್ಪಿಟಲ್ ಡ್ಯೂಟಿ' ನನ್ನ ಪಾಲಿಗೆ ಹೊಸ ಜಗತ್ತು.

ವಾರ್ಡಿನಲ್ಲಿ ಸಾಲಾಗಿ ಮಲಗಿಸಿದ ಒಂದೊಂದು ಹಾಸಿಗೆಯಲ್ಲೂ ಒಂದೊಂದು ಜಗತ್ತು ಮಲಗಿದೆ.

ನಿಜ—ಒಬ್ಬೊಬ್ಬ ರೋಗಿಯೂ ಒಂದೊಂದು ಜಗತ್ತು. ಒಬ್ಬನ ಹಾಗೆ ಒಬ್ಬನಲ್ಲ. ಎಷ್ಟು ಮೈಯೋ ಅಷ್ಟು ಮನಸು ; ಒಂದೊಂದೂ ಒಂದೊಂದು ಜಗತ್ತು.

ಒಂದೊಂದನ್ನು ಅರಿಯುವುದೂ ಒಂದು ಸಾಹಸ ಯಾತ್ರೆ.

ಏಕೋ, ಏಕೋ, ಶಾಲೆಯ ಪಾಠಕ್ಕಿಂತಲೂ ನನ್ನ ಹೃದಯ ಇಲ್ಲಿ ಹೆಚ್ಚು ಆನಂದವನ್ನು, ಆಸಕ್ತಿಯನ್ನು ಅನುಭವಿಸುತ್ತದೆ.

ನನ್ನ ಪಾಲಿಗೆ ಇದು ಬರೀ ವಾರ್ಡಲ್ಲ ; ಸಾವಿನ ವಿರುದ್ಧ ಮಾನವ ನಡೆಸಿದ ಹೋರಾಟದ ಸಮರಭೂಮಿ. ಒಂದೊಂದು ಗಳಿಗೆಯೂ ನಮಗದು ಮನವರಿಕೆಯಾಗುತ್ತದೆ. ಇಲ್ಲಾಗುವ ಒಂದೊಂದು ಅನುಭವವೂ ಎಷ್ಟು ರೋಮಾಂಚಕಾರಿ.

* * *

ಕೆಲವರಿಗೆ ಹಾಸ್ಪಿಟಲ್ ಡ್ಯೂಟಿ ಬೇಸರದ ಕೆಲಸ.

ಏನಿದೆ ?

ರೋಗಿಯನ್ನು ವಿಚಾರಿಸುವುದು, ರೋಗದ ಇತಿಹಾಸ ತಿಳಿದುಕೊಳ್ಳುವುದು, ಕೇಸ್ ಷೀಟ್ ನೋಡುವುದು, ಟೆಂಪರೇಚರ್ ತೆಗೆದುಕೊಳ್ಳುವುದು, ದಿನ ದಿನಕ್ಕೆ ರೋಗದ ಏರನ್ನೋ ಇಳುವನ್ನೋ ಗುರುತಿಸುತ್ತಾ, ಡಾಕ್ಟರ ಚಿಕಿತ್ಸಾ ಕ್ರಮವನ್ನು ಅನುಸರಿಸುತ್ತಾ ಹೋಗುವುದು.

ಕೆಲವರಿಗೆ ಇದರಲ್ಲಿ ಏನೂ ಆಸಕ್ತಿ ಎನಿಸುವುದಿಲ್ಲ. ಬರೀ ಯಾಂತ್ರಿಕ ಕೆಲಸ, ಅದಕ್ಕಿಂತಲೂ ಹೆಚ್ಚಿನ ಆಸಕ್ತಿ ಸುತ್ತ ಸುಳಿಯುವ ಹೆಣ್ಣು – ಗಂಡುಗಳಲ್ಲಿ.

ಅವರಿವರನ್ನು ಅನ್ನುವ ಈ ದುಷ್ಟ ಚಟ ನನಗೇಕೆ ಅಂಟಿಕೊಂಡಿತು. ಛೀ. ಇದನ್ನು ಬಿಟ್ಟುಬಿಡಬೇಕು.

ನಾನೇನು ದೊಡ್ಡ ಮನುಷ್ಯ – ನೆನಪಿಲ್ಲವೇ – ಕಾತ್ಯಾಯನೀಯ, ಲೋಫರ್.

ಅವರಿವರು ಏನು ಮಾಡುತ್ತಾರೆ ಎಂದು ಕಟ್ಟಿಕೊಂಡು ನನಗೇನಾಗಬೇಕು. ನನ್ನ ದಾರಿ ನನಗೆ, ಅವರ ದಾರಿ ಅವರಿಗೆ.

* * * *

ಈ ರೋಗಿಗಳು ಎಂಥ ವಿಚಿತ್ರ ಜನ !

ಅವರು ರೋಗಿಗಳಾಗುವ ಮೊದಲು ಹೇಗಿರುತ್ತಾರೋ ಏನೋ. ಆದರೆ ರೋಗಿಗಳಾದ ಬಳಿಕ ಅವರ ಮನೋರಂಗವೇ ಬದಲಾಗಿ ಹೋಗುತ್ತದೆ.

ಕೆಲವರು ಹಸುಮಗುವಿನಂತೆ ಅಸಹಾಯಕರಾಗುತ್ತಾರೆ, ಕೆಲವರು ಕೊನೆಗಳಿಗೆಯನ್ನರಿತ ಕಾಡಪಶುವಿನಂತೆ ಉಗ್ರವಾಗುತ್ತಾರೆ. ಕೆಲವರಿಗೆ ಎಷ್ಟಾದರೂ ಮಾತನಾಡುವ ಚಪಲ; ಕೆಲವರಿಗೆ ಈ ಲೋಕದ ಯಾವ ಮಾತೂ ಬೇಡ.

ಆದರೆ ಒಂದು ಮಾತು ನಿಜ.

ಏನಿರಲಿ, ಏನು ಬಿಡಲಿ – ಅಬ್ಬಾ, ಒಬ್ಬೊಬ್ಬನಲ್ಲೂ ಬದುಕುವಾಸೆ ಎಷ್ಟು ಪ್ರಖರವಾಗಿದೆ. ಕಡೆಯುಸಿರೆಳೆವ ಹೊತ್ತು ಸಮೀಪಿಸಿದಂತೆ ಈ ಬದುಕುವಾಸೆ ಮತ್ತಷ್ಟು ಉಗ್ರವಾಗುತ್ತದೆ.

ದಿನಗಳೆದಂತೆ ನನಗನಿಸುತ್ತದೆ – ಎಷ್ಟು ರೋಗ! ಬಾಳಿನ ಸುತ್ತ ಸಾವು ಎಂಥ ಬಲವಾದ ಜಾಡ್ಯದ ಜಾಲವನ್ನು ನೆಯ್ದಿದೆ.

ಪ್ಯಾಥಾಲಜಿಯ ಪ್ರೊಫೆಸರು ಹೇಳಿದಂತೆ—

"ನಮಗೆ ರೋಗ ಬರುವುದಾಗಲಿ, ಸಾವು ಬರುವುದಾಗಲಿ ಆಶ್ಚರ್ಯವಲ್ಲ. ಈ ರೋಗಗಳ ಸಂತೆಯಲ್ಲೂ ನಾವು ಜೀವಂತರಾಗಿ, ಆರೋಗ್ಯರಾಗಿ ಉಳಿದಿರುವುದು ಬಹು ದೊಡ್ಡ ಪವಾಡ."

ಅವರು ಆ ಮಾತು ಹೇಳಿದಾಗ ಗಾಂಧೀಜೀಯವರು ಹೇಳಿದ ಮಾತೊಂದು ನನಗೆ ನೆನಪು ಬಂದಿತು.

"ಕತ್ತಲಲ್ಲಿ ಬೆಳಕು ಬದುಕುತ್ತದೆ; ನಿರಾಶೆಯಲ್ಲಿ ಆಶೆಹೊಳೆಯುತ್ತದೆ; ಸಾವಿನ ಮಧ್ಯೆ ಜೀವ ಅರಳುತ್ತದೆ."

ಆಶೆ – ಹೋಪ್.

ಪ್ರೊಫೇಸರರೇ ಮತ್ತೊಮ್ಮೆ ಹೇಳಿದಂತೆ—

"ಎಲ್ಲಕ್ಕಿಂತ ಬಹಳ ದೊಡ್ಡ ಔಷಧಿ 'ಹೋಪ್' (ಆಶೆ). ಅದೊಂದು ಮಿರಕಲ್ ಡ್ರಗ್. ಯಾವ ರೋಗದ ಮೇಲೆ ಯಾವ ಗಳಿಗೆಯಲ್ಲಿ ಅದು ಹೇಗೆ ಕೆಲಸ ಮಾಡಬಹುದು ಎಂದು ಯಾರಿಗೂ ತಿಳಿಯದು. ಆದರೂ ರೋಗಿ ಎಂದು ನಿಮ್ಮಲ್ಲಿ ಬಂದವರಿಗೆ ಮೊದಲು ಈ ಔಷಧವನ್ನು ಕೊಡಿ. ಅದರಿಂದ ಬೇರೇನು ಆಗದಿದ್ದರೂ, ನಿಮ್ಮ ಚಿಕಿತ್ಸೆ ನಾಟಲು ಸರಿಯಾದ ಮನೋರಂಗ ರಚಿತವಾಗುತ್ತದೆ."

ನಿಜ – ಈ ಮಾತನ್ನು ನಾನು ಮರೆಯಬಾರದು.

ಎಲ್ಲಕ್ಕಿಂತ ಮೊದಲು ರೋಗಿ ಬರುತಿದ್ದ ಹಾಗೇ ಮೊದಲು ಅವನಲ್ಲಿ ಹೋಪ್ ಇಂಜೆಕ್ಟ್ ಮಾಡಬೇಕು.

* * * *

ಹೋಪ್ !

ಆದರೆ ನಮ್ಮ ದೇಶದಲ್ಲಿ ಅದಕ್ಕೆ ಅವಕಾಶವಿದೆಯೇ ? ಈ ದಿನ ಏಕೋ ನನ್ನ ಬಾಳಿನ ಸುತ್ತಲೂ ಕತ್ತಲೇ ಬೀಡುಬಿಟ್ಟಂತಿದೆ.

ಒಬ್ಬ ಮುಸ್ಲಿಂ ರೋಗಿ ಆಸ್ಪತ್ರೆಗೆ ಬಂದಳು. ಹದಿನಾರು, ಹದಿನೇಳು ವರ್ಷವಷ್ಟೇ ವಯಸ್ಸಿರಬಹುದು ಅವಳಿಗೆ. ಎಂಥಾ ಚಲುವೆ! ಅವಳಿಗೆ ಒಂದೇ ಒಂದು ಮಗು.

ಅವಳ ಗಂಡ, ಅತ್ತೆಯೂ ಬಂದಿದ್ದರು – ನೂರುನ್ನೀಸಾ – ಅದು ರೋಗಿಯ ಹೆಸರು. ಅವನ ಕಣ್ಣಿನ ಬೆಳಕು. ಗಂಡನಿಗೆ ಹೆಂಡತಿ ಪಂಚಪ್ರಾಣ ; ಅತ್ತೆಗಂತೂ ಅವಳೇ ಕಣ್ಣಗೊಂಬೆ.

ಆದರೆ–ಅವಳು ಮಾತ್ರ ಇಳಿತದ ಕಾಲದಲ್ಲಿಳಿಯುವ ಕಡಲಿನಂತೆ ದಿನ ದಿನಕ್ಕೆ ಸವೆದು ಸಣ್ಣಗಾಗುತ್ತಿದ್ದಳು. ಒಂದು ಕಾಲಕ್ಕೆ ಆಗತಾನೇ ಅರಳಿದ ಗುಲಾಬಿಯಂತೆ ತಳತಳಿಸುತ್ತಿದ್ದಿರಬಹುದಾದ ಅವಳ ತುಟಿ ಬಿಳುಪಾಗಿ, ಮುಖ ಹಳೆಯ ದಂತದ ಬಣ್ಣಕ್ಕೆ ತಿರುಗಿತ್ತು.

ಅತ್ತೆ, ಗಂಡ ಇಬ್ಬರೂ ಡಾಕ್ಟರ ಕಾಲಿಗೆ ಬಿದ್ದು ಬೇಡಿಕೊಂಡರು.

' ಹೇಗಾದರೂ ಮಾಡಿ ನಮ್ಮ ನೂರಳನ್ನು ಉಳಿಸಿಕೊಡಿ.'

' ಹೆದರಬೇಡಿ. ಕೈಲಾದದ್ದನ್ನು ಮಾಡುತ್ತೇನೆ.'

—ಎಂದರು ನೂರಳನ್ನು ಪರೀಕ್ಷೆ ಮಾಡುತ್ತಿದ್ದ ಡಾಕ್ಟರು. ನಂಬಿ ಹೋದರು ಅವರು. ಮಗುವನ್ನು ಬಲವಂತವಾಗಿ ಅವರ ಜೊತೆಯಲ್ಲೇ ಕಳಿಸಿದರು ಡಾಕ್ಟರು. ನೂರಳ ಕಣ್ಣಂಚಿನಲ್ಲಿ ತುಳುಕಿದ ಹನಿಯೊಂದು ಕೆನ್ನೆಯ ಮೇಲಿಳಿಯಿತು.

' ಕೈಲಾದದ್ದನ್ನು ಮಾಡುತ್ತೇವೆ '

ಊಹೂ – ನಾವೇನೂ ಮಾಡಲಾರೆವು ನೂರಳಿಗೆ.

ಅವಳಿಗೆ ಶ್ವಾಸಕೋಶದ ಕ್ಷಯ ! ಇನ್ನೂ ಆರಂಭದೆಶೆ.

ರೋಗ ನಮಗೆ ಗೊತ್ತು, ಔಷಧವೂ ಗೊತ್ತು – ಪೆನ್ಸಿಲಿನ್ ಸ್ಟ್ರೆಪ್ಟೋಮೈಸಿನ್. ಅಬ್ಬಾ ! ಎಷ್ಟು ಬೆಲೆ

ಆದರೆ ನೂರಳ ಗಂಡ ರಹೀಂ ಜಟಕಾಗಾಡಿ ಹೊಡೆಯುವವನು. ಅವನು ಹೊರಲಾಗದ ಖಾಯಿಲೆ – ನೂರಳದು.

ಈ ದಿನ ನೂರಳನ್ನು ಅವಳ ಗಂಡನೊಂದಿಗೆ ಮನೆಗೆ ಕಳಿಸಿದೆವು. ನೂರ್ ಉಳಿಯುವಳೇ ?

ಆ ಸೌಂದರ್ಯ, ಮಮತೆ, ಪ್ರೇಮ, ಅಭಿಮಾನ, ವಿಶ್ವಾಸ—ರಹೀಂನ ಬಳಿ ಅವೆಲ್ಲವೂ ಇತ್ತು. ಆದರೆ ಕ್ಷಯರೋಗದ ದುಬಾರಿ ಬೆಲೆಯ ಔಷಧ ಕೊಳ್ಳಲು, ಆ ಉಪಚಾರ ನಡೆಸಲು ಹಣವೆಲ್ಲಿ ?

ಸೌಂಧರ್ಯ, ಪ್ರೇಮ, ಸಹಾನುಭೂತಿ – ಅವು ಲೋಕದ ಅತ್ಯಂತ ಅಮೂಲ್ಯ ವಸ್ತುಗಳು, ನಿಜ. ಆದರೆ ಅವು ಕ್ಷಯರೋಗಕ್ಕೆ ಔಷಧವಲ್ಲ.

ಮುಖದ ಮೇಲೆ ಬುರುಖಾ ಹಾಕಿಕೊಂಡು, ಎತ್ತಲಾಗದ ಕಾಲನ್ನು ಎಳೆಯುತ್ತಾ ನೂರ್ ಹೊರಟುಹೋದಳು. ಆಸ್ಪತ್ರೆಯಲ್ಲಿ ಹಗಲೇ ಕತ್ತಲು ಕವಿಯಿತು.

ಹೋಪ್ – ಎಲ್ಲಿ ಹೋಪ್ ? ಮ್ಯಾಪಿನಲ್ಲಿ ಮಾತ್ರ ಗುಡ್‌ಹೋಪ್ ಭೂಶಿರ.

* * *

ನೂರ್ ಆಸ್ಪತ್ರೆಯಿಂದ ಹೋಗಿ ಮೂರು ದಿನವಾಗಿದೆ. ಆದರೆ ನಮ್ಮ ನಮ್ಮಲ್ಲಿ ಮಾತ್ರ ನೂರಳ ಮಾತು ನಿಂತಿಲ್ಲ ಅವಳಿದ್ದ ಬೆಡ್‌ನಲ್ಲಿ ಈಗ ಬೇರೊಬ್ಬ ರೋಗಿ ಇದ್ದಾನೆ. ಆದರೆ ಅದರ ಬಳಿ ಬಂದಾಗಲೆಲ್ಲಾ ನಮಗೆ ಅವಳದೇ ನೆನಪು.

ಈ ದಿನ ನಾವು ಇಬ್ಬರು ಅದೇ ವಿಷಯ ಮಾತನಾಡುತ್ತಾ ಇದ್ದೆವು. ನಾನು ಹೇಳಿದೆ—

" ಬೇಕಾದ ಔಷದ ಕಂಡು ಹಿಡಿಯಬಹುದು. ಬೇಕಾದಷ್ಟು ಆಸ್ಪತ್ರೆ ಕಟ್ಟಿಸಬಹುದು. ವೈದ್ಯ ವಿಜ್ಞಾನ ಎಷ್ಟೋ ಮುಂದುವರಿಯ ಬಹುದು. ಆದರೆ ನೂರ್‌ಳಂಥವರಿಗೆ ಇದೆಲ್ಲದರಿಂದ ಏನು ಉಪಯೋಗ ? ಎಲ್ಲವೂ ನಾಯಿ ಮೊಲೆಯ ಹಾಲು "

" ಇಲ್ಲ, ಅಂಥವರಿಗೂ ಇದರಿಂದ ಉಪಯೋಗವಾಗುವ ಕಾಲ ಬರುತ್ತದೆ - ಈಗ ಯುದ್ಧದ ಕಾವಿನ ಕಾಲವಾದ್ದರಿಂದ ಇನ್ನೂ ಔಷದಗಳ ಬೆಲೆ ಇಳಿದಿಲ್ಲ. ಔಷಧಗಳ ಬೆಲೆ ಇಳಿದರೆ, ಆಗ ನೂರ್‌ಳಂಥವರಿಗೂ ಬದುಕಲು ಅವಕಾಶ ಸಿಗುತ್ತದೆ "

—ಎಂದ ನನ್ನ ಗೆಳೆಯ.

" ಆದರೆ ಆಗ ಅವರ ಬಡತನ ಕಡಿಮೆ ಬೆಲೆಯ ಔಷಧವನ್ನು ಕೊಳ್ಳಲಾಗದಷ್ಟು ಏರಿರುತ್ತದೆ "

—ಎಂದೆ ನಾನು.

" ಇಷ್ಟು ದಿನಕ್ಕೆ ನೀವು ಅದೊಂದು ನಿಜವಾದ ಮಾತನ್ನಾಡಿದಿರಿ. ನಮ್ಮ ದೇಶದಲ್ಲಿ ಮೊಟ್ಟಮೊದಲು ನಿವಾರಣೆಯಾಗಬೇಕಾದ ರೋಗ ಬಡತನ. ಅದಕ್ಕೆ ಔಷಧ ಕಂಡುಹಿಡಿಯುವವರೆಗೂ ಬೇರಾವ ಔಷಧ ಕಂಡುಹಿಡಿದರೂ ಉಪಯೋಗವಿಲ್ಲ "

—ಎಂದದ್ದು ಕೇಳಿಸಿ, ತಲೆ ಎತ್ತಿ ನೋಡಿದೆ. ಮೈಯ ನರವು ಒಮ್ಮೆ ಬಿಗಿದು ಸಡಿಲವಾಯಿತು.

ಆ ಮಾತನ್ನಾಡಿದವಳು — ಕಾತ್ಯಾಯನಿ !

ಅವಳು ಅಲ್ಲಿಗೆ ಯಾವಾಗ ಬಂದಳೋ, ನಮ್ಮ ಮಾತನ್ನು ಹೇಗೆ ಕೇಳಿಸಿಕೊಂಡಳೋ ತಿಳಿಯದು. ಅವಳ ಧ್ವನಿ ಕೇಳಿ ತಲೆ ಎತ್ತಿ ನೋಡಿದೆ. ಅವಳೂ ನನ್ನ ಮುಖ ನೋಡಿದಳು. ಇದ್ದಕ್ಕಿದ್ದ ಹಾಗೇ ನೆನಪಿಗೆ ಬಂತು.

' ಲೋಫರ್ – ಕಾತ್ಯಾಯನೀಯ ! '

ಎತ್ತಿದ ತಲೆಯನ್ನು ಹಾಗೇ ತಗ್ಗಿಸಿ ನಿಂತೆ. ಅಲ್ಲಿಂದ ಎತ್ತಲಾದರೂ ಓಡಿಹೋಗಬೇಕೆಂದು ನನ್ನ ಮನಸ್ಸು ಬಯಸುತ್ತಿತ್ತು. ಆದರೆ ಹಾಗೆ ಓಡಿ ಹೋಗಿದ್ದರೆ ನಗೆಪಾಟಲಿಗೆ ಗುರಿಯಾಗಬೇಕೆಂದು ಹೆದರಿ ಸುಮ್ಮನೆ ನಿಂತೆ.

ಕಾತ್ಯಾಯನಿಯೂ ನನ್ನ ಗೆಳೆಯನೂ ಏನೋ ವಾದಿಸುತ್ತಿದ್ದರು. ನನಗಾವುದೂ ಕೇಳಿಸಲಿಲ್ಲ. ನನ್ನ ಕಿವಿಯಲ್ಲಿ ಏನೋ ಪ್ರವಾಹ ಭೋರ್ಗರೆಯುತ್ತಿತ್ತು.

" ನಿಮ್ಮ ಮಾತಿನಲ್ಲಿ ನಡುವೆ ಬಂದುದಕ್ಕೆ ಕ್ಷಮಿಸಿ "

—ಎಂದು ಹೇಳಿ ಹೊರಟುಹೋದಳು ಕಾತ್ಯಾಯನಿ. ಹೋದಳು ಹೋಗುವ ಅವಳತ್ತ ನೋಡಿದೆ. ನಾನು ನೋಡಿದಾಗ ಅವಳೂ ನನ್ನತ್ತ ನೋಡಿದಳೆ ?

ನೋಡಿದರೆ ನನಗೇನು ?

—ಆದರೂ-ನೋಡಿದಳೇ ?

* * *

ಊರಿನಿಂದ ಕಾಗದ ಬಂದಿತ್ತು. ಅಮ್ಮನಿಗೆ ಮೈಯಲ್ಲಿ ಚೆನ್ನಾಗಿಲ್ಲವಂತೆ. 'ಆದರೂ ಗಾಬರಿಯಾಗುವಂಥದೇನೂ ಇಲ್ಲ' ಎಂದು ತಂದೆ ಕಾಗದ ಬರೆದಿದ್ದರು.

' ಸರಿಯಾದ ಡಾಕ್ಟರಿಗೆ ತೋರಿಸಿ ಔಷಧ ಕೊಡಿಸಿ. ಖಾಯಿಲೆ ಸಣ್ಣದೆಂದು ತಾತ್ಸಾರ ಮಾಡಬೇಡಿ. ನಾನು ಬರುವುದು ಅಗತ್ಯವಾದರೆ ಕಾಗದ ಬರೆಯಿರಿ. ಬರುತ್ತೇನೆ '

—ಎಂದು ಉತ್ತರ ಒರೆದು ಹಾಕಿದೆ. ಆದರೂ ಏಕೋ ಮನಸ್ಸಿಗೆ ಸಮಾಧಾನವಿಲ್ಲ. ಕಾಗದ ಬರೆಯುವ ಬದಲು ನಾನೇ ಹೋಗಿದ್ದರೆ ಚೆನ್ನಾಗಿತ್ತು ಎನಿಸುತ್ತದೆ.

*　　　*　　　*

ನಾನಿಲ್ಲಿ ಕಾತ್ಯಾಯನಿಯಿಂದ ತಪ್ಪಿಸಿಕೊಳ್ಳುವುದು ಸಾಧ್ಯವೇ ಇಲ್ಲ. ಒಂದೇ ವೃತ್ತದಲ್ಲಿ ಸುತ್ತುತ್ತಿರುವ ನಾವು ಒಬ್ಬರನ್ನೊಬ್ಬರು ನೋಡದೇ ಇರುವುದು ಸಾಧ್ಯವೇ ಇಲ್ಲ.

ಆದರೆ ನನ್ನ ಮನಸ್ಸಿನ ರೀತಿ ನನಗೆ ಅರ್ಥವೇ ಆಗುತ್ತಿಲ್ಲ.

ಅವಳಿಂದ ನಾನು ದೂರ ಹೋಗಬೇಕೇ ? ಅವಳು ಹತ್ತಿರವಿದ್ದಾಗ ನನ್ನ ಮನಸ್ಸಿನಲ್ಲಿಷ್ಟು ಹೋರಾಟವಾಗಬೇಕೇ ? ನನ್ನ ಸುತ್ತಮುತ್ತಲೂ ದಿನ ದಿನವೂ ಓಡಾಡುವ ಹತ್ತಾರು ಜನ ವಿದ್ಯಾರ್ಥಿನಿಯರಂತೆ, ನರ್ಸ್‌ಗಳಂತೆ, ರೋಗಿಗಳಂತೆ ಅವಳೂ ಒಬ್ಬ ಹೆಂಗಸು ಎಂದುಕೊಂಡು ತಾತ್ಸಾರವಾಗಿ ಇರಲಾರೆನೇಕೆ ?

ಈ ಉದ್ವೇಗ, ಉತ್ಸಾಹ, ನಿರಾಶೆ – ಎಲ್ಲವೂ ಎಷ್ಟು ಅಸಹಜ.

ಹೆಣ ಕೊಯ್ಯುವಾಗ ನಾನು ಹೆಣ್ಣಿನ ಮೈ ನೋಡಿದೇನೆ, ಬದುಕಿರುವ ಸ್ತ್ರೀ ರೋಗಿಗಳ ಅಂಗರಚನೆ ಏನೆಂಬುದನ್ನು ನಾನು ಬಲ್ಲೆ, ಎಷ್ಟೋ ಹೆಣ್ಣು ಮೈಗಳನ್ನು ನಾನು ಮುಟ್ಟಿನೋಡಿದೇನೆ ಅಲ್ಲಿ ನಾನು ಕಾಣದಿರುವ, ಅರಿಯದಿರುವ ರಹಸ್ಯವಾವುದೂ ಇಲ್ಲ.

ಎಲ್ಲ ಹೆಣ್ಣಿನಂತೆಯೇ ಕಾತ್ಯಾಯನಿಯೂ, ಎಲ್ಲ ಹೆಂಗಸರಂತೇ ಅವಳ ಅಂಗರಚನೆಯೂ. ಅದರಲ್ಲಿ ವಿಶೇಷವೇನೂ ಇಲ್ಲ.

ಆದರೂ ಉಳಿದಾರ ಸಾಮೀಪ್ಯದಿಂದಲೂ, ಸಂಪರ್ಕದಿಂದಲೂ ಉಂಟಾಗದ ಆ ವಿಚಿತ್ರ ಅನುಭವ, ಅವಳ ಮಾತು ಕೇಳಿದಾಗ ನನಗೆ ಏನಾಗಬೇಕು ?

ಆ ಧ್ವನಿ ಕೇಳಿದಾಗ ನನ್ನಲ್ಲಿ ಆಗುವ ಪರಿವರ್ತನೆ – ಭೌತಿಕವೇ, ರಾಸಾಯನಿಕವೇ, ಮಾನಸಿಕವೇ ?

ಊಹೂ – ಈ ಯಾವ ಬಗೆಯ ವಿಶ್ಲೇಷಣಕ್ಕೂ ಸಿಲುಕದ ಏನೋ ಒಂದು ಪರಿಣಾಮ ನನ್ನಲ್ಲಾಗುತ್ತಿದೆ. ಅದಕ್ಕೆ ಏನು ಹೆಸರು ? ಇದೇನು ವ್ಯಾಧಿ ? ಇದಕ್ಕೇನು ಔಷಧ ?

ಅವಳ ಕಣ್ಣು ನನ್ನತ್ತ ಸುಳಿದಾಗ, ಏಕೋ ಕಣ್ಣು ಕೋರೈಸಿ ಕಣ್ಣು ಕಾಣದಂತಾಗುವುದು.

ಅವಳು ಬೇರೆಯವರೊಡನೆ ನಗುನಗುತ್ತಾ ಮಾತನಾಡಿದಾಗ ನನ್ನೆದೆಯಲ್ಲಿ ಏನೋ ಬೇಗೆ ಬೇಯುವುದು.

ಏಕೆ ?

ನನ್ನ ಗೆಳೆಯ ನಾಯಿಡೂ ಹೇಳುತ್ತಾನೆ – ಎಲ್ಲ ಹೆಂಗಸೂ ಒಂದೇ. ನಿಜ. ಅದು ಅವನಿಗಲ್ಲದೆ ಬೇರೆ ಯಾರಿಗೆ ಗೊತ್ತು. ನಿಜ—ಅವನು ಎಷ್ಟು ಜನ ಹೆಂಗಸರನ್ನು ನೋಡಿದ್ದಾನೋ. ವಾರಕ್ಕೆ ಒಂದಾದರೂ ಇದ್ದದ್ದೇ. ಭಾನುವಾರ ಅವನ ಬೇಟೆಯ ದಿನ.

ನಿಜ. ಅವನಲ್ಲಿ ಏನೂ ಮುಚ್ಚುಮರೆಯಿಲ್ಲ ಅವನು ಹೇಳುತ್ತಾನೆ—

" ಎಲ್ಲ ಹೆಂಗಸರು ಕೊಡುವ ಸುಖವೂ ಒಂದೇ. ಅವರೇ ಆಗಬೇಕು. ಇವರೇ ಬೇಕು ಎನ್ನುವುದು ಮೂರ್ಖತನ. ಪ್ರೇಮವೆನ್ನುವುದು ಒಂದು ಬಗೆಯ ಮ್ಯಾನಿಯಾ. ಸಿಂಗಲ್ ಟ್ರಾಕ್ ಮೈಂಡ್‌ನ ( ಒಂದೇ ಕಡೆ ಹರಿವ ಬುದ್ಧಿಯ ) ಇಲ್‌ಯೂಷನ್. ಇಬ್ಬರನ್ನು ಅನುಭವಿಸಿದರೆ ಆ ಹುಚ್ಚು ಬಿಟ್ಟು ಹೋಗುತ್ತದೆ."

ಅವನು ಹೇಳುವುದು ಸತ್ಯವೇ ? ಏನೋ. ಅವನಿಗೇ ಗೊತ್ತಿರಬೇಕು. ಅವನು ಕಸಬುದಾರ. ಆದರೂ ಅವನ ಮಾತು ಕೇಳಿದಾಗ ನನಗೆ ಅಸಹ್ಯವಾಗುತ್ತದೆ.

ಅವನು' ಕಾತ್ಯಾಯನಿಯೊಂದಿಗೆ ಮಾತನಾಡುವಾಗ ಭಯವಾಗುತ್ತದೆ. 'ಷ್, ಅದು ಬೆಂಕಿ, ಹತ್ತಿರ ಹೋಗಬೇಡ' ಎಂದು ಅವಳಿಗೆ ಹೇಳಬೇಕು ಎನಿಸುತ್ತದೆ.

ಆದ—

ಅವಳಿಗೆ ನಾನು ಯಾರು ? ಅಲ್ಲ, ನನಗೆ ಅವಳು ಯಾರು ?

* * *

ರೋಗಿಗಳು ಎಷ್ಟು ಜನವೋ, ಅವರಿಗೆ ಔಷಧ ಕೊಡುವವರಲ್ಲೂ ಅಷ್ಟು ಜಾತಿ.

ಕೆಲವರ ಪಾಲಿಗೆ ರೋಗಿಗಳು ದೇವರು, ಕೆಲವರ ಪಾಲಿಗೆ ಪ್ರಯೋಗ ಪಶು, ಕೆಲವರ ಪಾಲಿಗೆ ಏನೂ ಅಲ್ಲ, ಕೆಲವರ ಪಾಲಿಗೆ ಕೊನೆಗಾಣದ ಬೇಸರ.

ಆ ವೃತ್ತಿಯಲ್ಲಿದ್ದು ಪಳಗಿದವರಿಗೇ ಇರಲಿ, ವಿದ್ಯಾರ್ಥಿಗಳಲ್ಲೂ ಅಷ್ಟೆ.

ಈದಿನ ಒಬ್ಬ ರೋಗಿಯನ್ನು ಪರೀಕ್ಷೆ ಮಾಡಿ ಡೈಯಾಗನೈಸ್ ಮಾಡಲು ನಮಗೆ ಹೇಳಿದರು ಡಾಕ್ಟರಾಗಲೇ ಅವನನ್ನು ಪರೀಕ್ಷಿಸಿದ್ದರು. ಪರೀಕ್ಷೆಗೆಂದು ನಮ್ಮ ಗುಂಪಿಗೆ ಒಪ್ಪಿಸಿದಾಗ ಅತ, ಬೇಟೆ ನಾಯಿಗಳ ಗುಂಪಿಗೆ ಸಿಕ್ಕ

ಜಿಂಕೆಯಂತೆ ಕಂಗಾಲಾದ.

ಅವನ ಭಯವೇನೂ ತಪ್ಪಾದುದಲ್ಲ ಎನಿಸಿತು ನನಗೆ, ಕೆಲವರು ಅವನನ್ನು ಪರೀಕ್ಷಿಸುವ ರೀತಿ ನೋಡಿದಾಗ, ಅವರ ರೀತಿಯಲ್ಲಿ ನಯವಿರಲಿಲ್ಲ, ಮಾರ್ದವತೆ ಇರಲಿಲ್ಲ, ಆ ಎದೆ ಕುಟ್ಟಿ ನೋಡುವುದೇನು ? ನಾಲಿಗೆ ತೆಗೆ, ಕಣ್ಣು ಅರಳಿಸು ಎಂದು ಹೇಳುವುದೇನು ?

ಅವನು ರೋಗಿಯಾಗಿ ನಮ್ಮ ಬಳಿ ಬಂದುದೇ ತಪ್ಪೇ ? ಅದೇನು ಅಪರಾಧವೇ ?

" ಡಾಕ್ಟರ್ ರೋಗಿಯನ್ನು ಪರೀಕ್ಷಿಸುವ ರೀತಿಯಲ್ಲಿ ತಜ್ಞನಾಗಿರಬೇಕು. ಸೈಕಲಾಜಿಕಲ್ ಅಪ್ರೋಚ್, ಫಿಸಿಕಲ್ ಅಪ್ರೋಚ್‌ಗಿಂತ ಉತ್ತಮವಾದದ್ದು–ಹೆಚ್ಚು ಪರಿಣಾಮಕಾರಿಯಾದದ್ದು "

ಎಂದು ಮೇಲಿಂದ ಮೇಲೆ ಪ್ರೊಫೆಸರ್ ಹೇಳುತ್ತಲೇ ಇರುತ್ತಾರೆ. ಆದರೇನು – ಎಷ್ಟೋ ಜನಕ್ಕೆ ಅದು ಅರ್ಥವೇ ಆಗುವುದಿಲ್ಲ.

ಡಾ ನಂಬಿಯಾರ್ ರೋಗಿಗಳನ್ನು ಪರೀಕ್ಷಿಸುವುದೇ ಒಂದು ಕಲೆ.

ನಿಜ. ನಾನೂ ಹಾಗಾಗಬೇಕು.

ಕೆಲವರಿಗೆ ಕೆಲ ಬಗೆಯ ರೋಗಿಗಳನ್ನು ಕಂಡರೆ ತಾತ್ಸಾರ. ಸ್ತ್ರೀರೋಗದಿಂದ ನರಳುತ್ತಿರುವವನು ಒಬ್ಬನು ಬಂದಾಗ ಎಷ್ಟು ರೀತಿಯಲ್ಲಿ ಅವನನ್ನು ಗೇಲಿ ಮಾಡಿದರು. ಅವನು ಬಂದದ್ದು ಔಷಧಿಗೆ, ಗೇಲಿಗಲ್ಲ ಎನ್ನುವುದೂ ಇವರಿಗೆ ಅರಿವಾಗಲಿಲ್ಲ.

" ರೋಗಿ ಯಾರಾದರೇನು, ರೋಗ ಯಾವುದಾದರೇನು – ಅವನು ರೋಗಿ, ಬಂದಿರುವುದು ಚಿಕಿತ್ಸೆಗೆ ಎನ್ನುವುದನ್ನು ಮರೆಯಬೇಡಿ "

ಎಂದು ಡಾಕ್ಟರ್ ನಂಬಿಯಾರ್ ಹೇಳಿದ ಮಾತು ನನ್ನ ಕಿವಿಗಳಲ್ಲಿನ್ನೂ ಮೊಳಗುತ್ತಿದೆ.

ನಿಜ. ಡಾಕ್ಟರಾಗಬೇಕೆಂದು ಬಯಸುವ ಯಾರೂ ಆ ಬುದ್ಧಿವಾದವನ್ನು ಮರೆಯಬಾರದು.

ದೇವರೇ—ನನಗೆ ಎಂದೂ ರೋಗಗಳಲ್ಲಿ, ತರತಮ ವ್ಯತ್ಯಾಸವನ್ನು ಕಾಣುವ ಬುದ್ಧಿಯನ್ನು ಕೊಡಬೇಡ. ಯಾವ ಕಾರಣಕ್ಕಾಗಿಯೂ, ಯಾರನ್ನೂ ನೋಯಿಸದಂತೆ ನಡೆದುಕೊಳ್ಳುವ ಬುದ್ಧಿಯನ್ನು ಕೊಡು.

" ನಾನು ನ್ಯಾಯಾಧೀಶನಲ್ಲ, ವೈದ್ಯ "

" ನಾನು ವ್ಯಾಪಾರಿಯಲ್ಲ, ವೈದ್ಯ "

—ಈ ಮಾತು ನನಗೆ ಎಂದೆಂದಿಗೂ ನೆನಪಿನಲ್ಲಿರಲಿ.

ಈ ದಿನ ನನ್ನ ಕಣ್ಣು ತೆರೆಸುವಂಥ ಘಟನೆಯೊಂದು ನಡೆಯಿತು.

ಈ ದಿನ ನಮ್ಮನ್ನು ಸರ್ಜಿಕಲ್ ವಾರ್ಡ್‌ಗೆ ಡ್ಯೂಟಿಗೆ ಹಾಕಿದ್ದರು. ಉತ್ಕಟಾವಸ್ಥೆಯಲ್ಲಿದ್ದ 'ಕೇಸ್' ಒಂದರ ಆಪರೇಷನ್‌ಗಾಗಿ ಡಾ. ಶ್ರೀನಿವಾಸುಲು ಸಿದ್ಧತೆ ಮಾಡಿಕೊಳ್ಳುತ್ತಿದ್ದರು. ನರ್ಸ್ ಆಗಲೇ ಪೇಷೆಂಟ್‌ಗೆ ಅನಸ್ಥೇಷಿಯಾ ಕೊಡಲು ಸಿದ್ಧವಾಗಿದ್ದಳು ಮೇಜಿನ ಮೇಲೆ ರೋಗಿ ಭಯದಿಂದ ಕಣ್ಣು ಕಣ್ಣು ಬಿಡುತ್ತಿದ್ದನು. ನಮ್ಮ ಬಿಳಿಯ ಗೌನು, ನೆತ್ತಿಯ ಮೇಲಿದ್ದ ಮುಖವಾಡ ಅವನಿಗೆ ಸಮೀಪಗತವಾದ ಮೃತ್ಯುದರ್ಶನದಂತೆ ಕಾಣುತ್ತಿದ್ದಿರಬೇಕು.

ಡಾ. ಶ್ರೀನಿವಾಸುಲು ಆ ರೋಗಿಯ ಹೊಟ್ಟೆಯಲ್ಲಿ ಬೆಳೆದ 'ಮ್ಯಾಲಿಗ್ನೆಂಟ್ ಟ್ಯೂಮರ್'ನ ರೀತಿಯನ್ನು ವಿವರಿಸಿ, ಹೇಗೆ ಅದನ್ನು ತಪ್ಪಾಗಿ 'ಕ್ಯಾನ್ಸರ್' ಎಂದು ಕರೆಯಲೂ ಅವಕಾಶವಿದೆಯೆಂದು ಹೇಳಿ, ಆಪರೇಷನ್ ಮಾಡಲು, ನರ್ಸ್‌ಗೆ 'ಅನಸ್ಥೇಷಿಯಾ ಕೊಡು' ಎಂದು, ಹೇಳಬೇಕು, ಅಷ್ಟರಲ್ಲೇ ವಾರ್ಡ್ ಬಾಯ್ ಓಡಿಬಂದು 'ಬೀದಿಯಲ್ಲಿ ಆಡುತ್ತಿದ್ದ ಅವರ ಮಗುವಿನ ಮೇಲೆ ಗಾಡಿ ಹರಿಯಿತಂತೆ. ಮನೆಯವರು ಫೋನ್ ಮಾಡಿದ್ದಾರೆ' ಎಂದು ಹೇಳಿದ. ಒಂದು ಗಳಿಗೆ ಡಾಕ್ಟರ ಮನಸ್ಸು ಹೊಯ್ದಾಡಿತು. ಮರುಗಳಿಗೆ ಆಪರೇಷನ್ ಟೇಬಲ್ ಮೇಲೆ ಮಲಗಿಸಿದ್ದ ರೋಗಿಯನ್ನು ನೋಡಿದರು. ಕೂಡಲೆ ನಿರ್ಧಾರಕ್ಕೆ ಬಂದು, ವಾರ್ಡ್‌ಬಾಯ್‌ಗೆ 'ಅಂಬುಲೆನ್ಸ್ ವ್ಯಾನ್ ಮನೆಗೆ ಕಳಿಸಿ, ಮಗುವನ್ನು ತರಲು ಹೇಳು' ಎಂದು, ನರ್ಸ್‌ಗೆ 'ಬಾಗಿಲು ಹಾಕಿ, ಅನಸ್ಥೇಷಿಯಾ ಕೊಡು' ಎಂದರು. ನಮ್ಮಲ್ಲೇ ಒಬ್ಬ ವಿದ್ಯಾರ್ಥಿನಿ 'ಹೇಗಾದರೂ ನೀವು ಹೋಗಿ ಬರಬೇಕಾಗಿತ್ತು ಸರ್. ನಿಮ್ಮ ಮನೆಯವರು ಬಹಳ ಪೇಚಾಡುತ್ತಿರಬಹುದು' ಎಂದಳು. ಡಾಕ್ಟರು ಅದಕ್ಕೆ 'ಎ ಡಾಕ್ಟರ್ ಹ್ಯಾಸ್ ನೊ ಪ್ರೈವೇಟ್ ವರ್ಲ್ಡ್' ಎಂದಷ್ಟೇ ಉತ್ತರ ಹೇಳಿ ತಮ್ಮ ಕೆಲಸ ಮುಂದುವರಿಸಿದರು.

ಆ ಮಾತು ಕೇಳಿ ನನಗೆ ಮಿಂಚು ಮುಟ್ಟಿದ ಹಾಗಾಯಿತು

'ಡಾಕ್ಟರ್ ಹ್ಯಾಸ್ ನೊ ಪ್ರೈವೇಟ್ ವರ್ಲ್ಡ್' (ಡಾಕ್ಟರಿಗೆ ಖಾಸಗಿ ಪ್ರಪಂಚವಿಲ್ಲ.)

ಹಿಂದೊಮ್ಮೆ ನಂಬಿಯಾರರು ಹೇಳಿದುದು ನೆನಪಾಯಿತು.

'ರೋಗ, ಸಾವು, ಡಾಕ್ಟರಿಗೆ ಕಾಯುವುದಿಲ್ಲ'

ನನ್ನ ಕಣ್ಣಿಗೆ ಡಾಕ್ಟರ್ ಶ್ರೀನಿವಾಸುಲು ದೇವರಂತೆ ಕಂಡರು. ಅಂಥ ಚಿತ್ತಸ್ಥೈರ್ಯ ನನಗೆಂದಾದರೂ ಬರಬಹುದೇ ?

ಡಾ. ನಂಬಿಯಾರ್, ಡಾ. ಶ್ರೀನಿವಾಸುಲು, ಡಾ. ರಾರ್ಜ—ನನ್ನ ಆರಾಧನಾ ಜಗತ್ತಿನ ತ್ರಿಮೂರ್ತಿಗಳು.

ಡಾ. ನಂಬಿಯಾರ್, ಶ್ರೀನಿವಾಸುಲು ಒಂದು ತರ. ಆದರೆ ಡಾ. ರಾರ್ಜರೇ ಒಂದು ರೀತಿ.

ಎಷ್ಟು ನಿಜವೋ, ಎಷ್ಟು ಸುಳ್ಳೋ-ಅಂತೂ ಅವರು ಯಾವ ನರ್ಸನ್ನೂ ಬಿಟ್ಟಿಲ್ಲ ಎನ್ನುತ್ತಾರೆ. ಕಾಲೇಜಿನಲ್ಲಿ ಪಾಠ ಹೇಳುವಾಗಲೂ ಅಷ್ಟೆ, ವಾರ್ಡ್‌ನಲ್ಲಿ ಪಾಠ ಹೇಳುವಾಗಲೂ ಅಷ್ಟೆ. ಅವರ ಬಳಿ ಹುಡುಗಿಯರಿರಬೇಕು. ಹುಡುಗಿಯರಿಲ್ಲದಿದ್ದರೆ ಅವರಿಗೆ ಪಾಠ ಹೇಳಲು ಸ್ಫೂರ್ತಿಯೇ ಇದ್ದಂತಿರುವುದಿಲ್ಲ.

ಅಷ್ಟೇಮಟ್ಟಿಗೆ ಅವರು ಕುಡಿಯುತ್ತಾರೆ ಎಂದು ಕೇಳಿದೇನೆ. ಒಂದೆರಡು ಬಾರಿ ಅವರ ಬಾಯಿಂದ ಬರುವ ವಾಸನೆಯನ್ನೂ ಅನುಭವಿಸಿದೇನೆ.

ಆದರೇನು ? ಅವರು ಏನು ಮಾಡಿದರೇನು ? ಅವರ ಬಳಿ ' ಕೇಸ್ ' ಬಂದಾಗ ಎಷ್ಟು ಉತ್ಸಾಹ. ಏನೋ ದೊಡ್ಡ ನಿಧಿ ಸಿಕ್ಕಷ್ಟು ಸಂತೋಷವಾಗುತ್ತದೆ ಅವರಿಗೆ. ಅದರ ಚಿಕಿತ್ಸೆಯಲ್ಲಿ ಮೈಮರೆತು ಬಿಡುತ್ತಾರೆ. ಆ ಕೇಸು ಗುಣವಾಗುತ್ತಿರುವುದು ಕಂಡಾಗ ಆ ಸಂತೋಷದಲ್ಲಿ ಮತ್ತರಾಗುತ್ತಾರೆ.

ಒಂದು ಸಲ ಬಡಕಲಾಗಿ, ಎಲುಬು ಹೊರಟುಕೊಂಡ ಮೈಯ ಮಗುವೊಂದು ಬಂದಿತ್ತು. ನೋಡಿದ ಕೂಡಲೇ ಅದು ವಿಟಮಿನ್ ಬಿ ಅಭಾವದ ಕೇಸು ಎಂದು ಕಾಣುವಂತಿತ್ತು. ತಾಯಿಯೊಂದಿಗೆ ಮಾತನಾಡಿದಾಗ, ಆ ಮಗು ಆಕೆಯ ಮೊಲೆಯಹಾಲು ಕುಡಿಯದೆ, ಫೀಡಿಂಗ್ ಬಾಟಲ್ ಮೇಲೆ ಬೆಳೆಯುತ್ತಿದೆ ಎಂದು ತಿಳಿಯಿತು ಆ ಮಾತು ಕೇಳಿದಾಗ ಡಾ. ರಾರ್ಜರ ಮುಖದಲ್ಲಾದ ಬದಲಾವಣೆಯನ್ನು ಕಂಡು ನಮಗೆ ಗಾಬರಿಯಾಯಿತು.

" ನಿಮ್ಮ ಮೊಲೆ ಇರುವುದು ಗಂಡನ ಆಟಕ್ಕೆಂದು ತಿಳಿದಿರೇನು, ಆದಿರುವುದು ಈ ಮಗುವನ್ನು ಸಾಕಲು. ಹೋಗಿ, ಹೋಗಿ, ನೀವು ತಾಯಿಯಾಗಲು ತೀರಾ ಅಯೋಗ್ಯರು "

—ಎಂದು ಆ ಮಗುವಿನ ತಾಯನ್ನು ಒರಟಾಗಿ ಗದರಿಸಿ ಕಳಿಸಿಬಿಟ್ಟರು.

ಆ ತಾಯಿಯಂಥ ಕೆಲವರನ್ನು ನೋಡಿದ್ದೆವು. ತನ್ನ ಮಗುವಿಗೆ ಸ್ತನಪಾನ ಮಾಡಿಸಿದರೆ ತನ್ನ ದೇಹ ಸೌಂದರ್ಯಕ್ಕೆಲ್ಲಿ ಕುಂದು ಬರುವುದೋ ಎಂದು ಹೆದರುವ ಆಧುನಿಕ ಸ್ತ್ರೀ ಆಕೆ. ಆಕೆ ಮಾಡಿದುದು ತಪ್ಪು ಆದರೂ ಇಷ್ಟು ಕಠೋರವಾಗಿ ಗದರುವುದೇ ?

ಡಾಕ್ಟರ ಸಿಟ್ಟು ಮರುಗಳಿಗೆಯಲ್ಲೇ ಮಾಯವಾಯಿತು.

" ಇಲ್ಲಿ ನೋಡಿ. ವಿಟಮಿರ್ನ ಬಿ ಈ ಮಗುವಿನ ಮೈಯಲ್ಲಿ ಪವಾಡದಂತೆ ಕೆಲಸ ಮಾಡುತ್ತದೆ. ನೀವೇ ನೋಡುತ್ತೀರ – ಇದರ ಕೆನ್ನೆಗಳಲ್ಲಿ ಗುಲಾಬಿ ಅರಳುತ್ತದೆ, ಕಣ್ಣಲ್ಲಿ ಸೂರ್ಯರಶ್ಮಿ ಕುಣಿದಾಡುತ್ತದೆ. ಒಂದೊಂದು ದಿನ, ಒಂದೊಂದು ಗಳಿಗೆಯೂ ನೀವು ಆ ದೈವೀ ಪರಿವರ್ತನೆಯನ್ನು ಗುರುತಿಸ ಬಹುದು. ಒಂದೆರಡು ವಾರ ..ಒಂದೆರಡು ವಾರ....... ಅಷ್ಟೆ ಆ ಬಳಿಕ ಓ ವಾಟ್ ಎ ಗ್ಲೋರಿಯಸ್ ಟ್ರಾನ್ಸ್‌ಫಾರ್ಮೇರ್ಷ. ವಾಚ್ ದಿ ಮಿರಾಕಲ್ ವರ್ಕ್ಸ್ ಸ್ಟೆಪ್ ಬೈ ಸ್ಟೆಪ್ ಮೈ ಫ್ರೆಂಡ್ಸ್ ಅಂಡ್ ನೊ ದಿಸ್. ಯೂ ಆರ್ ದಿ ಆರ್ಕಿಟೆಕ್ಟ್ ಆಫ್ ದಟ್ ಮಿರಾಕಲ್."

ಆ ಗಳಿಗೆಯಲ್ಲಿ ಹಿಂದೆ ಕಂಡ ಒರಟು ಮನುಷ್ಯ ಎಲ್ಲೋ ಕೋಟ್ಯಾಂತರ ಮೈಲಿಗಳಾಚೆ ಕಣ್ಣುಮರೆಯಾಗಿ, ನಮ್ಮ ಕಣ್ಣೆದಿರು ದೈವೀ ವ್ಯಕ್ತಿತ್ವವೊಂದು ಕಂಗೊಳಿಸುತ್ತಿತ್ತು.

ಅವರ ಮಾತು ಕೇಳುತ್ತಾ ಕೇಳುತ್ತಾ ನಮಗೆ ಕಳ್ಳು ಕುಡಿದಂತಾಯಿತು.

ಓ – ಎಂಥ ಮನುಷ್ಯರು ಡಾ. ರಾರ್ಜ !

* * *

ಯಾವುದಕ್ಕೂ ಬಿಡುವಿಲ್ಲ. ಎಷ್ಟು ಓದಬೇಕು, ಅಲ್ಲದೆ ದಿನ ದಿನಕ್ಕೆ ಹೊಸದೊಂದು ಅನುಭವ ಆಗುತ್ತಿದೆ ನನಗೆ. ದಿನ ದಿನಕ್ಕೆ ನನ್ನಲ್ಲಿ ಆತುರ ಬೆಳೆಯುತ್ತಿದೆ.

ಎಷ್ಟು ಬೇಗ ಈ ಓದು ಮುಗಿದೀತು. ಎಷ್ಟು ಬೇಗ ನಾನೂ ಡಾಕ್ಟರಾ ದೇನು, ಎಷ್ಟು ಬೇಗ ನನ್ನದೇ ಒಂದು ಆಸ್ಪತ್ರೆಯಾದೀತು.

ನಿಜವಾಗಿಯೂ ಈ ಜಗತ್ತಿನಲ್ಲಿ ಡಾಕ್ಟರ್ ಕೆಲಸದ ಸಮಾನ ಬೇರೊಂದು ವೃತ್ತಿಯೇ ಇಲ್ಲ. ಆದರೆ ಸರಿಯಾದ ಡಾಕ್ಟರಾಗಬೇಕೆನ್ನುವವನು ಮೊದಲು ಸರಿಯಾದ ವಿದ್ಯಾರ್ಥಿಯಾಗಬೇಕು. ಶಿಕ್ಷಣ ಸಮಯದಲ್ಲಿ ಅಸಡ್ಡೆ ಮಾಡಿದರೆ ನಡೆಯುವುದಿಲ್ಲ. ಎಷ್ಟು ಕಲಿಯುವುದಿದೆ, ಎಷ್ಟು ತಿಳಿದುಕೊಳ್ಳಬೇಕಾದದ್ದಿದೆ.

ಬೇರೆ ಕೆಲಸಕ್ಕಿರಲಿ ದಿನಚರಿ ಒರೆಯಲು ಕೂಡಾ ವೇಳೆ ಇಲ್ಲ ಎನಿಸುತ್ತದೆ.

ನಿಜ, ಇದನ್ನು ಏಕೆ ಬರೆಯಬೇಕು ? ಯಾರಿಗಾಗಿ ? ಈಚೀಚೆಗೆ ಇದು ಅನಗತ್ಯವೆಂದೇ ತೋರುತ್ತದೆ. ಈ ವೇಳೆಯನ್ನು ಓದಿಗೇ ಮೀಸಲು ಮಾಡ ಬಹುದು. ಅದೇ ಸರಿ.

# ಕಾತ್ಯಾಯನಿ

## (ಒಂದು ಸ್ವಗತ)

ಆ ಸಿಡಿಲಿನೇಟೇ ಬೇಕಾಗಿತ್ತೇ ನನ್ನ ಕಣ್ಣು ತೆರೆಸಲು ?

ನಿಜ, ಅಂದಿನವರೆಗೂ ನನಗೆ ಅವನ ಬಗ್ಗೆ ನನಗಿದ್ದ ಭಾವನೆ ಏನೆಂಬುದೇ ಅರಿವಾಗಿರಲಿಲ್ಲ. ಉಳಿದ 'ಯಾರ ಬಗ್ಗೆಯೂ ಇರದ ಗೌರವ ಆತನ ಬಗ್ಗೆ ನನಗೆ ಇತ್ತು. ಆದರೆ ಆ ಗೌರವ ಈ ಬಗೆಯ ಭಾವನೆಯ ಮುಖವಾಡವೆಂದು ನಾನು ಅರಿತಿರಲಿಲ್ಲ.

ಮೊದಮೊದಲು ಆತನ ಬಗ್ಗೆ ನನಗೆ ತಿರಸ್ಕಾರವೇ ಇತ್ತು.

ಆಗಸ್ಟ್ ಕ್ರಾಂತಿಯ ಕಾಲಕ್ಕೆ ನಮ್ಮ ಮಾತು ಮೀರಿ, ಬೇಡಿಕೆಯನ್ನು ಧಿಕ್ಕರಿಸಿ ಕಾಲೇಜಿಗೆ ಹೋದಾಗ 'ಶುದ್ಧ ಹೇಡಿ' ಎಂದು ತಾತ್ಸಾರವೆನಿಸಿತ್ತು. ಅದಕ್ಕಾಗಿಯೇ ಆ ಅರಿಶಿನ ಕುಂಕುಮದ ಪೊಟ್ಟಣಕೊಟ್ಟದ್ದು.

ಆ ಪೊಟ್ಟಣ ಕೊಟ್ಟಾಗ, ನನ್ನ ಕೃತ್ಯದ ಬಗ್ಗೆ ನನಗೆ ಹೆಮ್ಮೆ ಎನಸಿತ್ತು. ಆತನ ಬಗ್ಗೆ ತಾತ್ಸಾರವೆನಿಸಿತ್ತು. ಆದರೆ ಕ್ರಾಂತಿಯ ಮೊದಲ ಕೆಲವು ದಿನಗಳ ಉರುಬು ಇಳಿದಮೇಲೆ, ' ಗಾಂಧೀಜೀ ಬಿಡುಗಡೆಯಾಗುವವರೆಗೂ ಕಾಲಿಡು ವುದಿಲ್ಲ ', ' ಭಾರತ ಬಿಡುಗಡೆ ಯಾಗುವವರೆಗೂ ಹೋರಾಡುತ್ತೇವೆ ' ಎಂದು ಕ್ರಾಂತಿ ಘೋಷ ಕೂಗುತ್ತಾ ಅಡ್ಡಾಡಿದವರು ಒಬ್ಬೊಬ್ಬರಾಗಿ ತಲೆಯಮೇಲಿದ್ದ ಗಾಂಧೀ ಟೋಪಿಯನ್ನು ಮತ್ತೆ ಮುಂದಿನ ಕ್ರಾಂತಿಯ ಕಾಲಕ್ಕೆ ಇರಲಿ ಎಂದೋ ಏನೋ-ಪೆಟ್ಟಿಗೆ ಸೇರಿಸಿ, ಕುರಿಗಳಂತೆ ಕ್ರಾಂತಿಯನ್ನು, ಸೆರೆಯಲ್ಲಿದ್ದವರನ್ನು ಮರೆತು, ಒಬ್ಬೊಬ್ಬರಾಗಿ ಕುರಿಗಳಂತೆ ಕಾಲೇಜಿಗೆ ಮರಳಿದುದನ್ನು ನಾನೇ ಕಣ್ಣಾರೆ ನೋಡಿದಾಗ, ಎಲ್ಲರಂತೆ ನಾನೂ ಬೇರೆ ದಾರಿಯಿಲ್ಲದೆ ಕಾಲೇಜಿಗೆ ಬಂದಾಗ ಆತನಿಗೆ ನಾನು ' ಅರಿಶಿನ ಕುಂಕುಮ ಕೊಟ್ಟುದು ಸರಿಯೇ ' ಎನಿಸಿತು.

ಆಗ ಆತನನ್ನು ನಾನು ಹೇಡಿ ಎಂದು ಕರೆದಿದ್ದೆ ಈಗ ಅನಿಸುತ್ತದೆ – ನಾವು ವೀರರೇ ?

ಊಹೂ – ಈಗ ಅನಿಸುತ್ತದೆ ನಮಗಿಂತ ಹೆಚ್ಚಿನ ಧೈರ್ಯ ಆತನದು.

ನಾವೆಲ್ಲಾ ಯಾವುದೋ ಅಮಲಿನಲ್ಲಿ ಕುಣಿದಾಡಿದೆವು. ಆ ಅಮಲು ಇಳಿದುಹೋದ ಬಳಿಕ, ಗಾಳಿ ಇಳಿದುಹೋದ ಚಪ್ಪಟೆ ಬೆಲೂನುಗಳಂತೆ ಮುಖ

ಕೆಳಗೆ ಹಾಕಿಕೊಂಡು ಕಾಲೇಜಿಗೆ ಹಿಂತಿರುಗಿದೆವು. ಬಹಿರಂಗ ಭಾಷಣಗಳಲ್ಲಿ ಎಷ್ಟೆಲ್ಲಾ ಮಾತಾಡಿದ್ದೆವು; ಏನೆಲ್ಲಾ ಪ್ರತಿಜ್ಞೆ ಮಾಡಿದ್ದೆವು. ಆದರೆ ಯಾವುದೂ ಉಳಿಯಲಿಲ್ಲ. ಯಾವುದನ್ನೂ ನಾವು ಉಳಿಸಿಕೊಳ್ಳಲಿಲ್ಲ. ಹುಲಿಯನ್ನು ಹೊಡೆದು ತರುತ್ತೇವೆ ಎಂದು ಹೋದವರು, ಇಲಿಯನ್ನೂ ಹೊಡೆಯದೆ ಹಿಂದಿರುಗಿ ಬಂದೆವು.

ಅಗ ಆತ ನಮ್ಮನ್ನು ನೋಡಿ ನಗಬಹುದಾಗಿತ್ತು, ರೇಗಿಸಬಹುದಾಗಿತ್ತು ಛಿಡಾಯಿಸಬಹುದಾಗಿತ್ತು. ಹಾಗೆ ಮಾಡಿದವರೂ ಇಲ್ಲದೆ ಇರಲಿಲ್ಲ; 'ಯಾವ ಜೋಬಿನಲ್ಲಿದೆ ಸ್ವಾತಂತ್ರ್ಯ' ಎಂದು ಕೇಳಿದವರೂ ಇಲ್ಲದೆ ಇರಲಿಲ್ಲ.

ಆದರೆ ಆತನೊಬ್ಬ ಮಾತ್ರ ಹಾಗೆ ಮಾಡಲಿಲ್ಲ.

ನಾವು ಅಮಲೇರಿ ಕುಣಿದಾಗ ನಮ್ಮೊಂದಿಗೆ ಕುಣಿಯಲಿಲ್ಲ; ನಾವು ಜಾರಿಬಿದ್ದಾಗ ನಗಲಿಲ್ಲ.

ಆಗಲೂ–ಈಗಲೂ–ಯಾವಾಗಲೂ ಒಂದೇ, ತಾನಾಯಿತು, ತನ್ನ ಕೆಲಸವಾಯಿತು, ತನ್ನ ನಂಬಿಕೆಯ ದಾರಿಯಾಯಿತು.

ಈಗ ಉದ್ವೇಗ ಕಳೆದ ಬಳಿಕ ತಿಳಿಚಿತ್ತದಿಂದ ಕುಳಿತು ಯೋಚಿಸುವಾಗ ನನಗನಿಸುತ್ತದೆ – ದೇಶಸೇವೆ ಆವೇಶದ ಪ್ರಾಣಿಗಳಿಂದಾಗುವುದಿಲ್ಲ. ಅದಕ್ಕೆ ನಿರುದ್ವಿಗ್ನ ಚಿತ್ತಬೇಕು.

ಈ ಯೋಚನೆ ಬಂದಾಗ ನನಗೆ ಆತನ ಬಗ್ಗೆ ಇದ್ದ ತಾತ್ಸಾರ ಅಳಿದು, ಗೌರವ ಮೂಡಿತು. ಗೌರವ ಮೂಡಿದ ಹಾಗೆ ಆತನಿಗೆ ಅರಶಿನ ಕುಂಕುಮದ ಪೊಟ್ಟಣ ಕೊಟ್ಟದ್ದಕ್ಕಾಗಿ ನನಗೇ ನಾಚಿಕೆಯೆನಿಸಿತು. ಅವಕಾಶ ದೊರೆತರೆ ಕ್ಷಮಾಪಣೆ ಕೇಳಿಕೊಳ್ಳಬೇಕೆಂದೂ ಅನಿಸಿತು

* * *

ಆದರೆ ಮತ್ತೊಮ್ಮೆ ನನ್ನ ಮನಸ್ಸಿಗೆ ಕಾವಳ ಕವಿಯಿತು.

ಆತನ ಬಗ್ಗೆ ನಾನಿಟ್ಟುಕೊಂಡಿದ್ದ ಭಾವನೆಗಳೆಲ್ಲವೂ ತಪ್ಪೋ ಏನೋ ಎನಿಸತೊಡಗಿತು ಕಾಲೇಜಿಗೆ ಹಿಂದಿರುಗಿದ ಬಳಿಕ ಆತನನ್ನು ನಾನು ಗಮನಿಸಿದೆ. ನನಗಿಂತ ಹೆಚ್ಚಾಗಿ ಆತನ ಕಣ್ಣುಗಳು ನನ್ನನ್ನೇ ಹುಡುಕುತ್ತಿದ್ದುವು. ಹೋದತ್ತ, ಬಂದತ್ತ, ನಿಂತತ್ತ ನನ್ನ ಮಾತು ಕೇಳಿದತ್ತ, ಸರಗಿನ ಗಾಳಿ ಬೀಸಿದತ್ತ ಈತನ ಕಣ್ಣುಗಳು ಅಲೆಯುತ್ತಿದ್ದುವು; ಕಣ್ಣಿಗೆ ಕಂಡಾಗ ಹೊಳಪೇರಿ ನೋಡುತ್ತಿದ್ದವು; ಉಟ್ಟ ಬಟ್ಟೆಯನ್ನು ಸುಲಿದು ಬೆತ್ತಲೆ ಮಾಡಿ ನೋಡುವಂತೆ ನೋಡುತ್ತಿದ್ದವು.

ಆ ಕಣ್ಣು, ಆ ನೋಟ ನನಗೇನೂ ಹೊಸದಲ್ಲ.

ಮನೆಯ ಬಳಿ, ಬೀದಿಯಲ್ಲಿ, ಬಸ್ಸಿನಲ್ಲಿ, ಸಿನಿಮಾದಲ್ಲಿ, ಹೋಟೆಲಿನಲ್ಲಿ, ಕಾಲೇಜಿನಲ್ಲಿ – ಎಲ್ಲ ಕಡೆಯೂ ಅಂಥ ಸಾವಿರ ಕಣ್ಣು ಅರಳಿ ನನ್ನತ್ತ ನೋಡುವುದನ್ನು ನೋಡಿದೇನೆ.

ನಾನು ಸುಂದರಿ, ನಾನು ಬಲ್ಲೆ. ನನ್ನ ಬಣ್ಣ ಕಣ್ಣಿಗೆ ಚೆನ್ನಾಗಿದೆ. ನನ್ನ ಮೈಮಾಟ ಸುಂದರವಾಗಿದೆ. ಕೇಶರಾಶಿ ಉಳಿದ ಹೆಂಗಸರು ಕರುಬುವಂತಿದೆ.

ಅವರಿವರು ಹೇಳುವುದೇನು – ನನ್ನ ಮೈ ಸುಂದರವಾದುದೆಂದು ನಾನೇ ಬಲ್ಲೆ. ದಿನಕ್ಕೆ ನಾಲ್ಕು ಸಾರಿ ಕನ್ನಡಿ ಆ ಮಾತನ್ನು ಹೇಳುತ್ತದೆ. ಸ್ನಾನ ಮಾಡುವಾಗ ನನ್ನ ಕಣ್ಣೇ ಹೇಳುತ್ತದೆ. ನಾನು ಸುಂದರಿಯೆಂದು ನಾನು ಬಲ್ಲೆ.

ಸುಂದರವಾದುದನ್ನು ನೋಡುವುದಾಗಲಿ, ನೋಡಿ ಮೆಚ್ಚಿಗೆ ವ್ಯಕ್ತಪಡಿಸುವುದಾಗಲಿ ಏನೂ ತಪ್ಪಲ್ಲ. ಬೇಲೂರು, ಹಳೆಬೀಡಿಗೆ ಹೋದಾಗ, ಚಿತ್ರಗಳನ್ನು ನೋಡಿದಾಗ, ಸಿನಿಮಾದಲ್ಲಿ ಕಂಡಾಗ 'ಅದು ಸುಂದರವಾಗಿದೆ, ಅವಳು ಸುಂದರವಾಗಿದಾಳೆ, ಅವನು ಚೆಲುವ' ಎಂದು ನಾನು ಮೆಚ್ಚಿಕೊಂಡಿದೇನೆ ಹಾಗೆ ನೋಡುವುದು ಮೆಚ್ಚುವುದು ಪಾಪವೂ ಅಲ್ಲ–ತಪ್ಪೂ ಅಲ್ಲ.

ಆದರೆ ನಾನು ಬಲ್ಲೆ – ನನ್ನ ಸುತ್ತ ಅರಳಿ ನೋಡುವ ನೋಟ ನಿರ್ಹೇತುಕವಾದ ಸೌಂದರ್ಯಗ್ರಹಣದ ನೋಟವಲ್ಲ.

ಆ ನೋಟದಲ್ಲಿ ಕಾಣುವುದು ಸೌಂದರ್ಯಾರಾಧನೆಯ ಭಾವನೆಯಲ್ಲ–

ಆ ನೋಟ ಬಾಯಿಬಿಟ್ಟು ಹೇಳದಿದ್ದರೆ ತಾನೇ ಏನು, ನೋಟವೇ ಸಾರಿಹೇಳುತ್ತದೆ. ಅದರ ಹಿಂದಿರುವುದು ಶಯ್ಯಾಗೃಹದ ಕನಸು.

ಸುಮ್ಮನೆ ನೋಡಿ ಮೆಚ್ಚಿ, ಅಲ್ಲಿಗೆ ಸುಮ್ಮನಾಗುವುದಿಲ್ಲ— ಎರಡು ಹೆಜ್ಜೆ ಮುಂದೆ ಕುಪ್ಪಳಿಸಿ, ಆ ರೂಪವನ್ನು ತನ್ನ ತೋಳತೆಕ್ಕೆಯಲ್ಲಿಟ್ಟುಕೊಂಡು, ಹಾಸಿಗೆಯ ಮೇಲೆ ಮಲಗಿಸಿಕೊಂಡು ಬೆತ್ತಲೆಮಾಡಿ ನೋಡಿ, ಕಾಮಕೇಳಿಯ ಸರಸಕ್ಕೆ ಕರೆಯುತ್ತದೆ.

ಸೀರೆಯ ಅಂಗಡಿಯ ಮುಂದೆ ಹೋಗುವ ಹೆಣ್ಣು ಷೋ ಕೇಸಿನ ಹಿಂದೆ ಕಾಣುವ ಸೀರೆಯನ್ನು ನೋಡಿ, ತೃಪ್ತಳಾಗದೆ ಊಹೆಯಲ್ಲೇ ಅದನ್ನು ಉಟ್ಟು ಅದು ತನ್ನ ಮೈಗೆ ಹೇಗೆ ಒಪ್ಪಬಹುದು ಎಂದು ನೋಡಿಕೊಳ್ಳುವಂತೆ ಈ ಜನ ಬೀದಿಯಲ್ಲಿ ಚಲುವೆಯನ್ನು ತಮ್ಮ ಹಾಸಿಗೆಯ ಮೇಲೆ ಇವಳು ಎಷ್ಟು ಚೆನ್ನಾಗಿ ಕಾಣಬಹುದು ಎಂದು ಊಹಿಸಿ ಬಾಯಿ ಚಪ್ಪರಿಸುತ್ತಾರೆ.

ಚಿತ್ರದಲ್ಲಿ ಕಂಡು, ನಾಲಗೆಯನ್ನು ಹೊರಚಾಚಿ ಜೊಲ್ಲು ಸುರಿಸುವ ನಾಯಿತನ ಆ ಕಣ್ಣುಗಳ ಮೂಲೆಮೂಲೆಯಿಂದಲೂ ಇಣಕುತ್ತಿರುತ್ತದೆ.

ನಾನದನ್ನು ಬಲ್ಲೆ. ಚೆನ್ನಾಗಿ ಬಲ್ಲೆ. ನಾನದನ್ನು ಎಷ್ಟುಚೆನ್ನಾಗಿ ಬಲ್ಲೆನೋ ಅಷ್ಟೇಮಟ್ಟಿಗೆ ಆ ಬಗೆಯ ನೋಟವನ್ನು ದ್ವೇಷಿಸುತ್ತೇನೆ,

ಆ ನೋಟಕ್ಕಿಂತಲೂ ಹೆಚ್ಚಾಗಿ ಆ ನೋಟದ ಹಿಂದೆ ಹುದುಗಿರುವ ಹೇಡಿತನವನ್ನು ದ್ವೇಷಿಸುತ್ತೇನೆ.

ಹೇಡಿತನ, ನಿಜ, ಹೇಡಿತನ.

ಆ ನೋಟಕ್ಕೆ ಸ್ವಲ್ಪವಾದರೂ ಗಂಡಸುತನವಿದ್ದರೆ, ಎದೆಗಾರಿಕೆಯಿದ್ದರೆ, ನೇರವಾಗಿ ಬಂದು—' ಮಿಸ್. ನಿನ್ನ ತುಟಿ ಮುತ್ತಿಡಲು ಬಹಳ ಸುಂದರವಾಗಿದೆ. ಅವಕಾಶ ಕೊಡುತ್ತೀಯಾ ? ' ಎಂದು ಕೇಳುತ್ತಿತ್ತು.

ಹಾಗೆ ಕೇಳುವುದು ಸಭ್ಯತನವಲ್ಲ, ನಿರ್ಲಜ್ಜತನ. ನಾನು ಬಲ್ಲೆ. ಆದರೆ ಈ ಬಗೆಯಾಗಿ ನೋಡುವ ಜನರ ಹೆದರಿಕೆ, ಹೇಡಿತನ, ಇವರು ನಡೆಸುವ ಮಾನಸಿಕ ರತಿಯ ಹೊಲಸಿಗಿಂತ ಆ ಬಗೆಯ ನಿರ್ಲಜ್ಜತನ ಮೇಲು. ಕಕ್ಕಸಿನಲ್ಲಿ ಹೊಲಸು ಚಿತ್ರ ಬರೆದು, ಅದರ ಕೆಳಗೆ ಬೇಕಾದವಳ ಹೆಸರು ಬರೆದು ಪಡುವ ನೀಚ ತೃಪ್ತಿಯು ಅಸಹ್ಯ. ಹೇಡಿತನಕ್ಕಿಂತಲೂ ಆ ನಿರ್ಲಜ್ಜತನ ಬಹಳ ಮೇಲುಮಟ್ಟದ್ದು. ಎಂತಲೇ ಆ ಬಗೆಯ ನೋಟವನ್ನು ದ್ವೇಷಿಸುತ್ತೇನೆ.

ಹೆಣ್ಣು ನಾಯನ್ನು ಬೆನ್ನಟ್ಟಿ ಗಲ್ಲಿ ಗಲ್ಲಿಯಲ್ಲಲೆದು ಚರಂಡಿಯಲ್ಲೂ ನುಸುಳುವ ನಾಯಿತನ ಆ ನೋಟದ ತಂದೆ.

ಎಷ್ಟು ಬಾರಿ ಅಂಥ ನಾಯಿನೋಟ ದೂರದಿಂದಲೇ ನನ್ನ ಮೈಯನ್ನು ನೆಕ್ಕಿಲ್ಲ. ಒಮ್ಮೊಮ್ಮೆ ಹಾಗಾದಾಗಲೂ ನನಗೆ ನನ್ನ ಮೈಯೇ, ನನ್ನ ಸೌಂದರ್ಯವೇ ಹೊಲಸಾದಂತೆ ಮೈಲಿಗೆಯಾದಂತೆ ಅನಿಸಿದೆ. ಹಾಗನಿಸಿದಾಗ ದಿನಕ್ಕೆ ಮೂರು ಬಾರಿ, ನಾಲ್ಕು ಬಾರಿ, ಮೈ ತೊಳೆದಿದ್ದೇನೆ. ಡೆಟಾಲ್ ಹಾಕಿ ನನ್ನ ಮೈ ಶುದ್ಧಿ ಮಾಡಿಕೊಂಡಿದ್ದೇನೆ. ಆದರೆ ಆ ನೋಟದ ಕಲುಷಿತ ಬೇಲಿ. ಮಾನಸಿಕ ರತಿಯ ವಿಕೃತ ಕಾಮದ ಸೋಂಕಿನಿಂದ ನನ್ನ ಮೈ ಶುದ್ಧವಾದಂತೆ ನನಗನಿಸುವುದಿಲ್ಲ. ಹೋದತ್ತ ಬಂದತ್ತ ಈ ಹೊಲಸು ನನ್ನ ಮೈ ಸೋಂಕುತ್ತದೆ. ಎಷ್ಟೋ ಬಾರಿ ನಾನು ಶುದ್ಧ ಗಾಳಿಯ ಜಗತ್ತಿನಲ್ಲಿಲ್ಲ, ಗಟಾರದಲ್ಲಿ ತೆವಳುತ್ತಿದ್ದೇನೆ ಎನಿಸಿದೆ. ಇದಕ್ಕೆ ಕೊನೆಯಿಲ್ಲವೇ ?

ಊಹೂ – ಆ ಬಗೆಯ ನೋಟಕ್ಕೆ ಕೊನೆಯೇ ಇಲ್ಲ.

ಮೊದಲ ಬಾರಿ ಹಾಗೆ ನೋಡಿದಾಗ, ' ಹೋಗಲಿ. ಮೊದಲ ನೋಟದ ಉದ್ರೇಕ ' ಎಂದುಕೊಳ್ಳಬಹುದು. ' ಬಳಕೆ ಬೆಳೆದಂತೆ ಇದು ಕಡಮೆಯಾಗಬಹುದು ' ಎಂತಲೂ ಅಂದುಕೊಂಡಿದ್ದೇನೆ. ಊಹೂ – ದಿನದಿನಕ್ಕೆ ಕಡಮೆಯಾಗುವ ವಿಚಾರವಲ್ಲ ಇದು ; ದಿನದಿನಕ್ಕೆ ಬೆಳೆವ ಉನ್ಮಾದ, ದಿನದಿನಕ್ಕೆ ಆ

ನೋಟದ ಹಿಂದಿನ ಪಶುಧೈರ್ಯ ಬೆಳೆಯುತ್ತದೆ. ಮೊದಲು ಕಳ್ಳ ನೋ. ಇಣುಕುತ್ತಿದ್ದುದು, ಬಳಿಕ ಬೊಗಸೆಗಣ್ಣರಳಿಸಿ ನಿರ್ಲಜ್ಜವಾಗಿ ನೋಡುತ್ತಿ.

ಹುಡುಗರಿರಲಿ, ನಮ್ಮ ಉಪಾಧ್ಯಾಯರು ಒಬ್ಬಿಬ್ಬರ ಕಣ್ಣುಗಳಿಂದಲೇ ಈ ಬಗೆಯ ಕಾಮತೃಷೆಯ ಕಳ್ಳಬೆಕ್ಕು ಸಂಚುಹಾಕುವುದನ್ನು ನೋಡಿದೇನೆ.

ಫ್ರಾಯ್ಡನ ಮನೋವಿಶ್ಲೇಷಣ ನನಗೆ ಅಸಹ್ಯವೆನಿಸುತ್ತದೆ. ಸ್ತನ್ಯಪಾನ ದಲ್ಲೂ ಕಾಮತೃಷೆಯ ಕುರುಹನ್ನು ಕಾಣುವ ಆತನ ವಾದವನ್ನೋದಿದಾಗ ನನಗೆ ಮೈಮೇಲೆ ಮುಳ್ಳು ಬರುತ್ತದೆ.

ಆದರೆ ಇವನನ್ನು, ಇಂಥ ನೋಟವನ್ನು ನೋಡಿದಾಗ ಆತನ ವಾದದಲ್ಲಿ ತಪ್ಪಿಲ್ಲವೇನೋ ಅನಿಸುತ್ತದೆ.

ಬೀದಿಯಲ್ಲಿ ಸುಳಿವ ಎಲ್ಲ ಸ್ತ್ರೀರೂಪವನ್ನು ಶಯ್ಯಾಗೃಹದ ಒಡವೆಯಂತೆ ಕಾಣುವ ಈ ಕಣ್ಣುಗಳು ಮಾತ್ರ ಸ್ತನಪಾನದಲ್ಲೂ ರತಿಕ್ರೀಡೆಯ ಪ್ರಥಮ ಪುಳಕವನ್ನು ಅನುಭವಿಸಿದ್ದರೆ ಏನೂ ತಪ್ಪಲ್ಲ. ಇವರ ಮಟ್ಟಿಗೆ ಫ್ರಾಯ್ಡ್ ಸರಿಯೆಂದೇ ನನಗೆ ತೋರುತ್ತದೆ.

ಹಾಗೇ ಇದನ್ನು ನಾನು ಬಲ್ಲೆ—

ವ್ಯಕ್ತಿಯ ಪ್ರತಿಭೆ, ಚೈತನ್ಯ ಸಹಜವಾಗಿ ಬೆಳೆಯಲು ಅವಕಾಶವಿಲ್ಲದಾಗ, ಅದು ಮಾನಸಿಕ ವಿಕಾರವಾಗಿ ಪರಿಣಮಿಸುತ್ತದೆ ಎಂಬುದನ್ನು ನಾನು ಬಲ್ಲೆ.

ನಮ್ಮ ದೇಶದಲ್ಲಿ ಒಬ್ಬ ವ್ಯಕ್ತಿಯಲ್ಲ, ದೇಶಕ್ಕೆ ದೇಶವೇ ಹಾಗಾಗಿದೆ. ಶತಶತಮಾನಗಳ ರಾಜಕೀಯ, ಆರ್ಥಿಕ, ಸಾಮಾಜಿಕ ದಾಸ್ಯ ಅರ್ಥಗೆಟ್ಟ ಆಚಾರ–ವಿಚಾರಗಳ ಕಠೋರ ಬಂಧನ, ಹೊಸ ವಿಚಾರದ ದಾರಿದ್ರ್ಯ ಇವುಗಳ ಬೇಲಿಯಲ್ಲಿ ಸಿಲುಕಿಕೊಂಡು ಗುರಿಗೆಟ್ಟ ನಮ್ಮ ಜನದ ಜೀವನ ವಿಕಾರಗಳ ಕಂತೆಯಾಗಿವೆ. ಎಲ್ಲ ಬಗೆಯ ಅತೃಪ್ತಿಗಳೂ ಕಾಮತೃಪ್ತಿಯಲ್ಲಿ ವಿಶ್ರಾಂತಿ ಪಡೆಯಲು ಹಾತೊರೆಯುತ್ತಿವೆ.

ಇದನ್ನು ನಾನು ಬಲ್ಲೆ. ಎಂತಲೇ ಈ ಬಗೆಯ ನೋಟವನ್ನು ನಾನು ಸಹಿಸಿಕೊಂಡಿದೇನೆ. ಇಲ್ಲವಾದರೆ ಎಂದೋ, ಎಂದೋ ನಿರಾಶೆಯಲ್ಲಿ ಆತ್ಮಹತ್ಯ ಮಾಡಿಕೊಳ್ಳುತ್ತಿದ್ದೆ; ಕೊನೆಯಪಕ್ಷ ನನ್ನ ಮುಖವನ್ನಾದರೂ ವಿಕಾರ ಮಾಡಿ ಕೊಳ್ಳುತ್ತಿದ್ದೆ.

ನಾನು ಈ ಬಗೆಯ ಪರಿಸ್ಥಿತಿಯ ಬಂದಿಯಾದಂತೆಯೇ, ಇವರೂ ತಮ್ಮ ಪರಿಸ್ಥಿತಿಯ ಬಂದಿಗಳು. ಎಂತಲೇ ಅಸಹ್ಯವಾದರೂ ಈ ಗಟಾರದ ರಾಡಿಯಲ್ಲಿ ತೆವಳುತ್ತಿದ್ದೇನೆ. ಈ ಜನದಿಂದ ಇದಕ್ಕಿಂತ ಹೆಚ್ಚಿನದೇನನ್ನೂ ನಿರೀಕ್ಷಿಸಬಾರ ದೆಂಬ ಬುದ್ಧಿಯನ್ನು ಕಲಿತಿದೇನೆ.

ಆದರೆ ರಾಜಶೇಖರನಿಂದ ನಾನು ಆ ಬಗೆಯ ನೋಟವನ್ನು ನಿರೀಕ್ಷಿಸಿರಲಿಲ್ಲ.

ಏಕೆ ನಿರೀಕ್ಷಿಸಿರಲಿಲ್ಲ ಎಂದರೆ ಅದಕ್ಕೆ ನಾನೇನೂ ಉತ್ತರ ಹೇಳಲಾರೆ. ಆ ಬಗೆಯಾಗಿ ನನ್ನನ್ನು ನೋಡುವುದಿಲ್ಲ ಎಂದು ಆತ ನನಗೆ ಪತ್ರವನ್ನೇನೂ ಬರೆದುಕೊಟ್ಟಿರಲಿಲ್ಲ. ನನ್ನ ಕಲ್ಪನೆಗೆ ಯಾವ ಕಾರಣವೂ ಇರಲಿಲ್ಲ.

ಆದರೂ........ಆದರೂ........

ಏಕೋ – ಏನೋ —

ಅವನಿಂದ ನಾನು ಈ ಬಗೆಯ ನೋಟವನ್ನು ನಿರೀಕ್ಷಿಸಿರಲಿಲ್ಲ. ರಾಜಶೇಖರ ಬೇರೇನು ಮಾಡಿದ್ದರೂ ನನಗಷ್ಟು ಸಂಕಟವಾಗುತ್ತಿರಲಿಲ್ಲ. ನೇರವಾಗಿ ನನ್ನ ಬಳಿ ಬಂದು ತನ್ನ ಒಲವನ್ನು ಸಾರಿ ಹೇಳಿದ್ದರೂ, ನಾನು ತಪ್ಪು ತಿಳಿಯುತ್ತಿರಲಿಲ್ಲ.

ಆದರೆ ಆ ನೋಟ—

ಅವನ ಕಣ್ಣಿನಿಂದಲೂ ಆ ನೋಟ ನನ್ನ ಬಳಿ ಸುಳಿದಾಗ, ಆ ನೋಟದ ನಾಯಿನಾಲಗೆ ನನ್ನ ಮೈ ಸೋಕಿದಾಗ, ನಾನು ಕಟ್ಟಿದ ಗೌರವದ ಗೋಪುರ ಧಡೀರನೆ ಕುಸಿದು ಹೋಯಿತು. ಮಾನವತೆಯ ಬಗ್ಗೆ ಉಳಿದಿದ್ದ ಅಲ್ಪಸ್ವಲ್ಪ ನಂಬಿಕೆಯೂ ಅಲ್ಲಾಡಿಹೋಯಿತು. ನನ್ನನ್ನು ಹತ್ತುಜನರ ಎದುರು ಅಪಮಾನಗೊಳಿಸಿ ಕೆನ್ನೆಗೆ ರಪರಪನೆ ಹೊಡೆದಂತಾಯಿತು. ನನ್ನ ಜೀವನದಲ್ಲಿ ನಾನು ಹಿಂದೆಂದೂ ಆ ಬಗೆಯ ವ್ಯಥೆಯನ್ನು ಅನುಭವಿಸಿರಲಿಲ್ಲ. ನಿಜ–ಆ ದಿನ ನಾನು ಕಂಬನಿ ಗರೆಯುವವರೆಗೂ ವ್ಯಥೆ ಪಟ್ಟಿದ್ದೆ.

ಅಷ್ಟು ತೀವ್ರ ಪ್ರತಿಕ್ರಿಯೆ ನನ್ನಲ್ಲಿ ಏಕಾಯಿತೊ ನಾನರಿಯೆ. ಆದರೂ ಏನೋ ದೊಡ್ಡ ಸೌಭಾಗ್ಯವನ್ನು ಕಳೆದುಕೊಂಡವಳಂತೆ ಆಡ್ಡಾಡಿದೆ. ಬಹು ದಿನಗಳಿಂದ ಕುದಿಯುತ್ತಿದ್ದ ಕಹಿ ಆ ದಿನ ನನ್ನೆದೆಯಲ್ಲಿ ಹೆಪ್ಪುಕಟ್ಟಿತು. ಆ ಬಗೆಯಾಗಿ ನನ್ನನ್ನು ನೋಡುತ್ತಿದ್ದ ಉಳಿದೆಲ್ಲರಿಗಿಂತಲೂ ರಾಜಶೇಖರನ ಮೇಲೆ ಸಿಟ್ಟು ಹೆಚ್ಚಿತು.

ಆದುದರಿಂದಲೇ ಡಿಸೆರ್ಕ್ಷ ಥಿಯೇಟರಿನಲ್ಲಿ ಅವನು ನನ್ನ ಮುಖ ನೋಡಿದಾಗ ಮುಖ ಮುರಿದೆ. ಆ ಬಳಿಕ ಮಾತಾಡಲು ಯತ್ನಿಸಿದಾಗ ಮಾತು ಹೊರಡದಂತೆ ಮಾಡಿದೆ; ಹಿಂದೆ ಬಂದಾಗ ಬೆದರಿಸಿದೆ.

ಆವರೆಗೆ ನಾನು ಎಂದೂ ಯಾರೊಂದಿಗೂ ಅಷ್ಟು ಕಠೋರವಾಗಿ ನಡೆದುಕೊಂಡಿರಲಿಲ್ಲ.

ಒಂದೊಂದು ಬಾರಿ ಮುಖಭಂಗಮಾಡಿದಾಗಲೂ ತಕ್ಕದ್ದೇ ಆಯಿತು

ಎಂದು ಸಮಾಧಾನವಾದರೂ, ಏಕೋ ಹೇಳಲಾಗದ ವ್ಯಸನವೊಂದು ಮಾಂಸ ದೊಳಗಡೆ ಮುರಿದ ಮುಳ್ಳಿನಂತೆ ಅಳುಕುತ್ತಿತ್ತು. ಇವನೂ ಆ ಶ್ವಾನಪಡೆಗೇ ಸೇರಿದನಲ್ಲಾ ಎಂದು ಬೇಸರವಾಗುತ್ತಿತ್ತು.

ಆದರೆ ಬೇಗ, ಬಹುಬೇಗ ನನ್ನ ಲೆಕ್ಕಾಚಾರ ತಪ್ಪೆಂಬುದು ಅರಿವಾಯಿತು.

ಹಾವು ತುಳಿದು ಹೆದರಿದವನು ಹಗ್ಗವನ್ನು ತುಳಿದಾಗಲೂ ಹಾವೇ ಎಂದು ಬೆದರುವಂತೆ, ಸುತ್ತಮುತ್ತ ಶ್ವಾನಪಡೆಯನ್ನೇ ಕಂಡ ನಾನು, ತೋರಿ ಕೆಯ ಲಕ್ಷಣಗಳಿಂದ ರಾಜಶೇಖರನನ್ನು ಅದೇ ಗುಂಪಿಗೆ ಸೇರಿಸಿದ್ದೆ. ಅವನ ಮುಖ ಮುರಿದಾಗ ಅವನಿಂದ ಯಾವ ಪ್ರತಿಕ್ರಿಯೆ ಬರಬಹುದೆಂದೂ ನಿರೀ ಕ್ಷಿಸಿದ್ದೆ. ಅದೂ ನನಗೆ ಹೊಸದಲ್ಲ.

ಚಲುವೆಯಾದ ಹುಡುಗಿ ಕಂಡ ಕೂಡಲೇ ಅವಳಲ್ಲಿ ಪ್ರೇಮಯಾಚನೆ ಮಾಡುವುದು, ' ಲೈಲಾ – ಮಜನೂ ' ನಾಟಕದ ಪುನರಾಭಿನಯ ಮಾಡು ವುದು — ನಿಜ. ಇವರ ' ಶುದ್ಧ, ಸ್ವರ್ಗೀಯ, ಅಪ್ಪಟ, ಹದಿನಾರಾಣೆ ಪ್ರೇಮ'ವೆಲ್ಲಾ ಸುಂದರಿಯರಾದ ಹುಡುಗಿಯರನ್ನು ಕಂಡಾಗಲೇ ಹುಟ್ಟು ವುದು. ಈ 'ದೇಹಾತೀತವಾದ ಒಲವು' ಕುರೂಪಿಯಾದ ಹುಡುಗಿಯನ್ನು ಕಂಡಾಗ ಇವರ ಹೃದಯ ನಂದನದಲ್ಲಿ ಮೂಡಿರುವುದು ಇದುವರೆಗೂ ನಾನು ಕಂಡು ಕೇಳದ ಮಾತು. ಥತ್. ಹಿಪಾಕ್ರಿಟ್ಸ್ ! ಇವರಿಗೇನು ಬೇಕೆಂಬು ದನ್ನು ನಾನು ಬಲ್ಲೆ.—ಹುಡುಗಿ ಅದಕ್ಕೆ ಒಪ್ಪದಿದ್ದಾಗ ಅವಳ ಬಗ್ಗೆ, ಅವಳ ನಡತೆಯ ಬಗ್ಗೆ ಕಟ್ಟುಕಥೆ ಕಟ್ಟುವುದು, ಅಲ್ಲಸಲ್ಲದ ಅಪಪ್ರಚಾರ ಮಾಡು ವುದು, ಹೊಲಸು ಅಡ್ಡಹೆಸರು ಇಡುವುದು.

ಇದು ನಮ್ಮ ಕಾಲೇಜಿನ ರೋಮಿಯೋಗಳ ಪ್ರಣಯ ದುರಂತದ ಪ್ರತಿ ಕ್ರಿಯೆ. ಇದನ್ನು ನಾನು ಚೆನ್ನಾಗಿ ಬಲ್ಲೆ. ನನಗೆ ಆ ಹುಡುಗರಿಟ್ಟ ಅಡ್ಡ ಹೆಸರುಗಳು, ಹಬ್ಬಿಸಿದ ಕಥೆಗಳೆಲ್ಲ ಗೊತ್ತು. ನನ್ನ ಗೆಳತಿಯರು ಅನುಭವಿಸಿ ದುದನ್ನು ನಾನು ಬಲ್ಲೆ. ಹಿಂದಿ ಚಿತ್ರಗಳ ಹಾಗೆ ಇವರ ಪ್ರೇಮ. ಹೆಸರು ಬೇರೆಯಾದರೂ ವಸ್ತು ಒಂದೇ.

ಮುಖಭಂಗಿತನಾದ ರಾಜಶೇಖರನಿಂದಲೂ ನಾನು ಇದೇ ಬಗೆಯ ಪ್ರತಿಕ್ರಿಯೆಯನ್ನೇ ನಿರೀಕ್ಷಿಸಿದ್ದೆ. ಅವನೂ ನನ್ನ ಬಗ್ಗೆ ಕಥೆ ಹರಡುವ, ಬೆನ್ನ ಹಿಂದೆ ಕುಹಕ ಮಾಡುವ ಕಾಯಕವನ್ನು ಆರಂಭಿಸಬಹುದು ಎಂದಿದ್ದೆ.

ಊಹೂ – ಆದರೆ ಆತ ಹಾಗೆ ಮಾಡಲಿಲ್ಲ.

ನಾಲ್ಕುದಿನ ಏನೋ ಗಂಟು ಕಳೆದುಕೊಂಡವನ ಹಾಗಿದ್ದ. ಬಳಿಕ ಗಂಭೀರವಾಗಿ ತನ್ನ ಕೆಲಸದಲ್ಲಿ ಮಗ್ನನಾದ. ಉಳಿದವರ ಹಾಗೆ ' ಈ ಹಕ್ಕಿ

ಯಲ್ಲವಾದರೆ ಬೇರೆ ಹಕ್ಕಿ' ಎಂದು ಬೇರೆಕಡೆ ಬೇಟೆ ಆರಂಭಿಸಲಿಲ್ಲ.

ಇದೂ ಒಂದು ಹೊಸ ಆಟವೇನೋ ಎಂದುಕೊಂಡು ನಾಲ್ಕಾರು ತಿಂಗಳು ನೋಡಿದೆ.

ಅಲ್ಲ –ಈರೀತಿಯೇ ಬೇರೆ ; ಇದು ಬೇರೆ ಜಾತಿ.

ಮೊದಲು ನನ್ನ ದನಿ ಕೇಳಿಸಿದರೆ ಕಿವಿ ನಿಮಿರಿಸಿ ಕತ್ತು ಹೊರಳಿಸುತ್ತಿದ್ದವನು, ಈಗ ಹತ್ತಿರ ಸುಳಿದಾಗಲೂ ನನ್ನತ್ತ ತಿರುಗಿ ನೋಡುತ್ತಿರಲಿಲ್ಲ. ಅಕಸ್ಮಾತ್ತಾಗಿ ನೋಡಲೇಬೇಕಾಗಿ ಬಂದರೂ ಕಣ್ಣು ನೆಲದ ಮೇಲೇ. ಎರಡು ಮಾತನ್ನಾದರೂ ಆಡಲೇಬೇಕಾಗಿ ಬಂದರೂ ಬಹಳ ಗೌರವವಾಗಿ. ಆದರೂ ನನ್ನನ್ನು ಕಂಡಾಗ ಏನೋ ಭೀತಿಪಟ್ಟಂತೆ ಕಾಣುತ್ತಿತ್ತು. ಆತನ ಆ ಭೀತಿಯನ್ನು ಕಂಡು ನಾನೇ ಎಷ್ಟೋ ಬಾರಿ ಮನಸ್ಸಿನಲ್ಲಿಯೇ ನಕ್ಕಿದ್ದೇನೆ. ಪೂರ್‌ಥಿಂಗ್ ! ಎಂದು ಪಶ್ಚಾತ್ತಾಪ ಪಟ್ಟಿದೇನೆ. ಆ ಭಯ ಬಿಡಲಿ ಎಂದು ನಾನೇ ಆತನನ್ನು ಮಾತನಾಡಿಸಲು ಯತ್ನಿಸಿದ್ದೇನೆ.

ನಿಜ—ರಾಜಶೇಖರ ಪ್ರಿ - ಕ್ಲಿನಿಕಲ್ ಮುಗಿಸಿ, ಕ್ಲಿನಿಕಲ್‌ಗೆ ಬಂದ ಮೇಲೆ, ಹಾಸ್ಪಿಟಲ್ ಡ್ಯೂಟಿಗೆ ಬರಲಾರಂಭಿಸಿದ ಮೇಲೆ ನಾವಿಬ್ಬರೂ ಆಗಾಗ ಒಬ್ಬರು ಮತ್ತೊಬ್ಬರನ್ನು ನೋಡುವುದು ಅನಿವಾರ್ಯವಾಯಿತು. ಆತ ನನ್ನ ಕಣ್ಣಿಗೆ ಬೀಳದಿರಲು, ನನ್ನ ಬಳಿ ಸುಳಿಯದಿರಲು ಬಹಳ ಪ್ರಯತ್ನಿಸುತ್ತಿದ್ದ. ಆದರೆ ಒಂದೇ ವೃತ್ತದಲ್ಲಿ ಸುತ್ತುತ್ತಿರುವವರಿಗೆ ಅದು ಸಾಧ್ಯವೇ? ಆದರೂ ಹಾಗೆ ಕಲೆಯಬೇಕಾಗಿ ಬಂದಾಗ ಎಷ್ಟು ಭೀತಿ.

ಒಂದು ದಿನ ಮೆಟರ್ನಿಟಿ ವಾರ್ಡಿನಲ್ಲಿ ನಾವಿಬ್ಬರೂ ಒಂದೇ ಗುಂಪಿನಲ್ಲಿ ಒಬ್ಬ ರೋಗಿಯನ್ನು ನೋಡಬೇಕಾದ ಸಂಧರ್ಭ ಬಂತು. ನಮ್ಮ ಗುಂಪಿಗೆ ಬಂದಿದ್ದ ಉಳಿದಿಬ್ಬರು ಹುಡುಗರು 'ಕಾಫಿ ಕುಡಿದು ಸಿಗರೇಟು ಸೇದಲು' ಹೋಗಿದ್ದರು. ನಾವಿಬ್ಬರೇ ಇದ್ದೆವು ರೋಗಿಯ ಬಳಿ. ನಾನು ಪೇಷೆಂಟ್‌ನ ಬಳಿಯಲ್ಲಿಯೇ ಇದ್ದೆ. ರಾಜಶೇಖರ್ ಅಷ್ಟು ದೂರದಲ್ಲಿದ್ದ ಕುರ್ಚಿಯ ಮೇಲೆ ಕುಳಿತಿದ್ದ. ಪೇಷೆಂಟ್ ನನ್ನನ್ನು ಏನೋ ತೆಲುಗಿನಲ್ಲಿ ಕೇಳಿದಳು. ನನಗೆ ತೆಲಗು ಭಾಷೆ ತಿಳಿಯದುದರಿಂದ, ರಾಜಶೇಖರ್ ಶೆಟ್ಟರಾದುದರಿಂದ ಆತನಿಗೆ ಆ ಭಾಷೆ ಗೊತ್ತಿರಬೇಕೆಂದು 'ಬನ್ನಿ. ಆಕೆ ಏನೋ ಕೇಳುತ್ತಾಳೆ. ಏನೋ ವಿಚಾರಿಸಿ' ಎಂದೆ. ನಾನು ಅವನನ್ನು ಹೆಸರು ಹಿಡಿದು ಕೂಗಿದಾಗ ಆತ ಹಾವು ತುಳಿದವನಂತೆ ಬೆಚ್ಚಿಬಿದ್ದ. ಆಮೇಲೆ ನಾನು ಏತಕ್ಕೆ ಕರೆದೆನೆಂಬುದನ್ನು ಅರ್ಥ ಮಾಡಿಕೊಂಡು ಬಂದು, ರೋಗಿಗೆ ಏನು ಬೇಕೆಂಬುದನ್ನು ವಿಚಾರಿಸಿ, ಆಕೆ ಕೇಳಿದುದನ್ನು ಕೊಟ್ಟ. ಆ ಬಳಿಕ ಆತ ನನ್ನೊಡನೆ ಮಾತ

ನಾಡಬಹುದು ಎಂದಿದ್ದೆ. ಊಹೂ–ಆ ಕೆಲಸ ಮುಗಿದೊಡನೆಯೇ ಹೋಗಿ ಮತ್ತೆ ಕುರ್ಚಿಯನ್ನು ಸೇರಿ, ಪುಸ್ತಕ ಬಿಚ್ಚಿದ. ನನಗೆ ಒಂದು ಗಳಿಗೆ ಸಿಟ್ಟು ಬಂತು. ಮರುಗಳಿಗೆಯೇ ನಗು, ಅದರೊಂದಿಗೇ ಪಶ್ಚಾತ್ತಾಪ. ನನಗೆ ನಾನೇ ಹೇಳಿಕೊಂಡೆ 'ಕಾತ್ಯಾಯನಿ, ಯು ಷುಡ್ ನಾಟ್ ಹ್ಯಾವ್ ಸ್ಕೇರ್ಡ್ ಹಿಮ್ ಸೋ ಮಚ್'

ಹಾಗೇ ಆದಿನ ಅವನಲ್ಲಿ ಮತ್ತೊಂದು ಗುಣವನ್ನು ಕಂಡುಕೊಂಡೆ.

ರೋಗಿಗಳಿಗೆ ಸಾಧಾರಣವಾಗಿ 'ವಿದ್ಯಾರ್ಥಿ–ವೈದ್ಯ'ನನ್ನು ಕಂಡರೆ ಸ್ವಲ್ಪ ಗಾಬರಿಯೇ. ನಮ್ಮಿಂದ ಏನೂ ಉಪಯೋಗವಿಲ್ಲವೆಂದು ಅವರಿಗೆ ಗೊತ್ತು. ಹಾಗೇ 'ಖಾಲಿ ಸತಾಯಿಸು'ವವರು ಎಂದು ಸ್ವಲ್ಪ ಸಿಟ್ಟೂ ಉಂಟು. ಎಂತಲೇ ನಾವು ಅವರಿಂದ ವಿಷಯ ಸಂಗ್ರಹಿಸುವಾಗ ಬಾಯೇ ಬಿಡುವುದಿಲ್ಲ. ಅದರಲ್ಲೂ ಹೆಂಗಸರಿಗಂತೂ ಈ 'ಪಡ್ಡೆ ಹುಡುಗ'ರನ್ನು ಕಂಡರಂತೂ ಇದ್ದದ್ದೂ ಗಾಬರಿ. ಇವರು ಕೇಳಿದ ಪ್ರಶ್ನೆಗೆ ಉತ್ತರ ಹೇಳುವುದಿರಲಿ. ಇವರು ವಾರ್ಡಿನೊಳಗೆ ಕಾಲಿಡುತ್ತಿದ್ದ ಹಾಗೇ ರಗ್ಗು ಎಳೆದುಕೊಂಡು ಮುಖ ಮುಚ್ಚಿ ಬಿಡುತ್ತಾರೆ. ಸ್ತ್ರೀ ರೋಗಿಗಳ ಈ ರೀತಿ 'ಫೇಸ್ ಅಪೀಯರೆನ್ಸ್' 'ಬ್ರೀಚ್ ಅಪೀಯರೆನ್ಸ್' ಎಂಬ ಹಾಸ್ಯಕ್ಕೆ ಕಾರಣವಾಗಿದೆ. ಆದರೆ ಅಂಥ ಹೆಂಗಸರೂ, ಅವರಲ್ಲಿಯೂ 'ಮುಖ ಹೇಡಿ'ಗಳೂ ಈತನೊಂದಿಗೆ ಸಲೀಸಾಗಿ ಮಾತನಾಡು ತ್ತಾರೆ. ಎಷ್ಟು ಸುಲಭವಾಗಿ ಅವರ ಬಾಯಿ ಬಿಡಿಸುತ್ತಾನೆ ಈತ. ನಯವಾಗಿ 'ಅಮ್ಮ' ಎಂದರೆ ಆ ಮಾತು ಕೇಳಿದವಳ ಮುಖ ಅರಳುತ್ತದೆ. ಆಕೆಯ ಮಗುವನ್ನು ಹೊಗಳಿ, ಜಾಣತನವನ್ನು, ಮುಂಜಾಗರೂಕತೆಯನ್ನು ಪ್ರಶಂಶಿಸಿ ಹೇಗೋ ಮಾಡಿ ತನಗೆ ಬೇಕಾದ ವಿವರಗಳನ್ನೆಲ್ಲಾ ತಿಳಿದುಕೊಳ್ಳುತ್ತಾನೆ. ಅದೊಂದು ಕಲೆ.

ಡಾ ಕಮಲಾ ಶ್ರೀನಾಥ್ ಹೇಳಿದ ಹಾಗೆ – 'ಹಿ ಈಸ್ ಬಾರ್ನ್ ಟು ಬಿ ಎ ಡಾಕ್ಟರ್ !'

ಅಷ್ಟೇ ಅಲ್ಲ, ಆ ರೋಗಿಗಳನ್ನು ಕಂಡರೆ ಅವನಿಗೆ ಎಷ್ಟು ಪ್ರೀತಿ, ಅಭಿಮಾನ. ಅವರ ನರಳುವಿಕೆ ತನ್ನದೇ ಏನೋ ಎಂಬಷ್ಟು ಕಕ್ಕುಲಾತಿ ತೋರುತ್ತಾನೆ. ರೋಗಿ ಎನ್ನಿಸಿಕೊಂಡರೆ ಸಾಕು–ಯಾರಾದರೇನು, ಅವರು ಅವನವರೇ ಆಗಿ ಹೋಗುತ್ತಾರೆ. ರೋಗಿಗಳ ವಿಷಯದಲ್ಲಿ ನಮಗೆ ಸಹಾ ನುಭೂತಿ ಇಲ್ಲವೆಂದಲ್ಲ, ಅದಿಲ್ಲದಿದ್ದರೆ ಈ ವೃತ್ತಿ ಶಿಕ್ಷಣಕ್ಕೆ ಬರುತ್ತಲೇ ಇರ ಲಿಲ್ಲ. ಆದರೆ ಅವನಷ್ಟು ನಮಗಾರಿಗೂ ಇಲ್ಲ. ನಮ್ಮಲ್ಲಿ ಕೆಲವರಿಗೆ, ಕೆಲ ಕೆಲ ಬಗೆಯ ರೋಗಿಗಳನ್ನು ಕಂಡರೆ ತಾತ್ಸಾರ. ನನಗೆ ಶ್ರೀಮಂತ ರೋಗಿ

ಗಳನ್ನು ಕಂಡರೆ ಆಗುವುದಿಲ್ಲ. ಅವರಲ್ಲಿ ರೋಗ ಒಂದಾದರೆ ತೋರಿಕೆ ಹತ್ತು. ಅಲ್ಲದೆ ಅವರು ನಮ್ಮಿಂದ ಸೇವೆಯನ್ನು ಬೇಡುವುದಿಲ್ಲ, ನಿರೀಕ್ಷಿಸುತ್ತಾರೆ. ಅದನ್ನು ಕಂಡಾಗ ನನ್ನ ಮೈ ಸಿಟ್ಟಿನಿಂದ ಉರಿದುಹೋಗುತ್ತದೆ. ಅವರು ತಮ್ಮ ಶುಶ್ರೂಷೆಗೆ ಖಾಸಗಿ ಡಾಕ್ಟರುಗಳನ್ನು ನೇಮಿಸದೆ, ಬಡಬಗ್ಗರಿಗೆಂದು ತೆರೆದ ಈ ಸಾರ್ವಜನಿಕ ಆಸ್ಪತ್ರೆಗಳಿಗೇಕೆ ಬರುತ್ತಾರೆ ಎಂದು ಸಿಟ್ಟೊ ಬರುತ್ತದೆ. ನನಗೇನಾದರೂ ಅಧಿಕಾರವಿದ್ದಿದ್ದರೆ ಖಂಡಿತ ಈ ಶ್ರೀಮಂತ ರನ್ನು ಸಾರ್ವಜನಿಕ ಆಸ್ಪತ್ರೆಗಳಿಗೆ ಬಿಡುತ್ತಿರಲಿಲ್ಲ. ಕೆಲವು ಹೋಟೆಲು ಗಳಲ್ಲಿ 'ನಾಯಿಗಳಿಗೂ ಸೊಂಕುರೋಗ ಇರುವವರಿಗೂ ಪ್ರವೇಶವಿಲ್ಲ' ಎಂದು ಬೋರ್ಡು ಹಾಕಿದಂತೆ 'ಶ್ರೀಮಂತರಿಗೆ ಪ್ರವೇಶವಿಲ್ಲ, ಎಂದು ಬೋರ್ಡೇ ಹಾಕಿಸುತ್ತಿದ್ದೆ. ಆ ಜಾತಿ ಇದ್ದರೆಷ್ಟು ; ಹೋದರೆಷ್ಟು ಇರುವುದಕ್ಕಿಂತ ಹೋದರೇ ಮೇಲು ಜಗತ್ತಿನ ಎಲ್ಲ ದುಃಖದ ಮೂಲ ಅವರು. ಅವರು ತೊಲಗಿದಂದೇ ಜಗತ್ತಿಗೆ ಮುಕ್ತಿ.

ನನ್ನ ದೃಷ್ಟಿ ಹೀಗೆ. ಯಾರು ಒಪ್ಪಲಿ, ಬಿಡಲಿ—ಇದು ನನ್ನ ದೃಷ್ಟಿ. ಆದರೆ ರಾಜಶೇಖರನಿಗೆ ಹಾಗಲ್ಲ ಯಾರಾದರೇನು, ರೋಗಿ, ರೋಗಿಯೇ

ಒಮ್ಮೆ ಕಾಂತರಾಜ ವಾರ್ಡಿಗೆ ಒಬ್ಬ ಪಾರ್ಸಿ ಹುಡುಗಿ ಬಂದಿದ್ದಳು— ರೋಗಿಯಾಗಿ. ೧೭-೧೮ ವರ್ಷ ವಯಸ್ಸಿರಬೇಕು. ನಿಜವಾಗಿಯೂ ಸುಂದರಿ ರಿಟಾ ಹೇವರ್ತಳ ಹಾಗಿತ್ತು ಅವಳ ಮುಖ. ಆದರೆ ಜೊತೆಗೆ ಎಷ್ಟು ಗಾಂಭೀರ್ಯ ಹಾಸಿಗೆಯಲ್ಲಿ ರೋಗಿಯಾಗಿ ಮಲಗಿದ್ದರೂ, ತಾನು ಮಲಗಿರುವುದು ಹಾಸಿಗೆ ಯಲ್ಲ, ಅದೊಂದು ಸಾಮ್ರಾಜ್ಯ ; ತಾನು ರೋಗಿಯಲ್ಲ, ಆ ಸಾಮ್ರಾಜ್ಯದ ರಾಣಿ ಎನ್ನುವಂಥ ರೀವಿಯಿತ್ತು. ಅವಳು ತನ್ನ ಕಣ್ಣರಳಿಸಿ ನಮ್ಮ ಕಡೆ ನೋಡಿ ದರೆ ಸಾಕು-ಏನೋ ಮಹೋಪಕಾರ ಮಾಡಿದಂತಾಗುತ್ತಿತ್ತು.

ರಾಣಿ—ನಿಜವಾಗಿಯೂ ಅವಳು ರಾಣಿ.

ಬರೀ ನೋಟದಲ್ಲಷ್ಟೇ ಅಲ್ಲ, ಬೇಕೆಂದರೆ ಅವಳು ತನ್ನದೇ ಒಂದು ಸಣ್ಣ ರಾಜ್ಯ ಕಟ್ಟಿಕೊಂಡು ಆಳುವಷ್ಟು ಹಣವಿತ್ತು ಅವಳ ತಂದೆಯ ಬಳಿ.

ಅವಳಿಗೆ ' ಹಿಪ್ ಬೋನ್ ' (ಸೊಂಟದ ಎಲುಬು) ನ ಕ್ಷಯ. ಅದಕ್ಕೆ ಪ್ಲಾಸ್ಟರ್ ಕ್ಯಾಸ್ಟ್ ಹಾಕಿ ಮಲಗಿಸಿದ್ದರು ಡಾಕ್ಟರು.

ಡಾಕ್ಟರಿಂದ ಅವಳ ರೋಗ ಅರಿತು ಅವಳು ಸಾಯುವವರೆಗೂ ಅಂಗ ವಿಕಲಳಾಗಿಯೇ ಇರಬೇಕೆಬುಂದು ತಿಳಿದಾಗ, ನಮ್ಮೆಲ್ಲರಿಗೂ ಕರುಳಿಗೆ ಬೆಂಕಿ ಹೊತ್ತಿಸಿದಂತಾಯಿತು. ಆದರೆ ನಮ್ಮೆಲ್ಲರಿಗಿಂತಲೂ ರಾಜಶೇಖರನಿಗೆ ಹೆಚ್ಚು ವ್ಯಥೆಯಾಗಿದ್ದುದು ಅವನ ಕಣ್ಣಂಚಿನಲ್ಲಿ ನಿಂತ ಹನಿಯಿಂದ ಅರ್ಥವಾಯಿತು.

' ಸೆಂಟಿಮೆಂಟಲ್ ಫೂಲ್ ' ಎಂದು ನನಗೆ ನಾನೇ ಹೇಳಿಕೊಂಡೆ. ಡಾಕ್ಟರು ಹೋದಮೇಲೆ ನಮ್ಮ ಜೊತೆಯಲ್ಲಿದ್ದ ವಿದ್ಯಾರ್ಥಿಯೊಬ್ಬ ಆಕೆಯನ್ನು ನೋಡಿ—

" ಷಿ ಸೀಮ್ಸ್ ಟು ರೂಲ್ ದಿ ವರ್ಲ್ಡ್ ಫ್ರಂ ಹರ್ ಬೆಡ್ " (ಹಾಸಿಗೆಯಿಂದ ಜಗತ್ತನ್ನೇ ಆಳುವ ಹಾಗಿದ್ದಾಳೆ)

—ಎಂದ ಸಹಾನುಭೂತಿಯ ಧ್ವನಿಯಲ್ಲಿ.

" ಷಿ ಕೆನ್ ಅಫೋರ್ಡ್ ಟು ಡೂ ಇಟ್ ಲೈಫ್ ಲಾಂಗ್ " (ಸಾಯುವವರೆಗೂ ಹಾಗೆ ಆಳುವ ಶಕ್ತಿ ಅವಳಿಗಿದೆ)

—ಎಂದೆ ನಾನು.

ನನ್ನ ಮಾತು ಆಕೆಗೆ ಕೇಳಿಸಿತೋ ಏನೋ. ಮುಖದ ಮೇಲೆ ಅಪಾರ ಯಾತನೆ ಸುಳಿದು ಮಾಯವಾಯಿತು. ಮುಖವನ್ನು ಒಂದು ಪಕ್ಕಕ್ಕೆ ಹೊರಳಿಸಿದಳು. ಅದನ್ನು ನೋಡಿ ನನಗೂ ಆ ಮಾತು ಆಡಬಾರದಾಗಿತ್ತೇನೋ ಅನಿಸಿತು. ಎಂತಲೇ ಮತ್ತೆ ಆಕೆಯ ಮುಖ ನೋಡಲಾಗದೆ ದೂರ ಸರಿದೆ. ಹಾಗೆ ಸರಿಯುವಾಗ ರಾಜಶೇಖರ ತನಗೆ ತಾನೇ ಗೊಣಗಿಕೊಂಡುದು ಕೇಳಿಸಿತು.

" ಹಾರ್ಟ್‌ಲೆಸ್ ಬ್ರೂಟ್—ಅಂಡ್ ಎ ವುಮನ್ ಟೂ ! " (ಹೃದಯಹೀನ ಪಶು – ತಾನೂ ಹೆಣ್ಣು)

ಅವನಾಡಿದ ಮಾತನ್ನು ಕೇಳಿ ನನಗೆ, ಅವನ ಕಪಾಳಕ್ಕೆ ಹೊಡೆಯಬೇಕೆನ್ನುವಷ್ಟು ಸಿಟ್ಟು ಬಂತು. ಕಷ್ಟಪಟ್ಟು ಅದನ್ನು ನುಂಗಿಕೊಂಡು ದೂರ ಸರಿದೆ. ರಾಜಶೇಖರ ಒಬ್ಬನೇ ರೋಗಿಯ ಬಳಿ ಹೋಗಿ, ಸ್ಟೂಲ್ ಎಳೆದುಕೊಂಡು ಕುಳಿತು, ಬಹಳ ಮೃದುವಾದ ಧ್ವನಿಯಲ್ಲಿ ಏನೋ ಮಾತನಾಡಿಸಿದ.

ಎರಡು ನಿಮಿಷ ಬಿಟ್ಟುಕೊಂಡು ನಾನು ಅತ್ತ ತಿರುಗಿದಾಗ ಆ ಹುಡುಗಿಯ ಮುಖದ ಮೇಲೆ ಮಂದಹಾಸ ಮಿನುಗುತ್ತಿತ್ತು. ರಾಜಶೇಖರನೂ ನಗುತ್ತಿದ್ದ.

ಆ ಗಳಿಗೆಯಲ್ಲಿ ರಾಜಶೇಖರನ ಮೇಲಿದ್ದ ನನ್ನ ಸಿಟ್ಟೆಲ್ಲಾ ಮಾಯವಾಗಿ, ಏಕೋ ಆ ಹುಡುಗಿಯನ್ನು ಕಂಡು ಅಸೂಯೆಯಾಯಿತು.

ಆಗಲೇನು—ಎಷ್ಟೋ ಬಾರಿ ನನಗೆ ಹಾಗನಿಸಿತ್ತು—

" ಅವನಿಂದ ನಿಜವಾದ ಪ್ರೀತಿಯನ್ನು ಪಡೆಯಲು ಅವನ ಬಳಿ ರೋಗಿಯಾಗಿ ಹೋಗಬೇಕು."

ಅವನು ನನ್ನಿಂದ ತಪ್ಪಿಸಿಕೊಂಡು ತಿರುಗುವುದನ್ನು ಕಂಡಾಗ, ಹಾಗೆ ಮಾಡಿದರಾದರೂ ಹತ್ತಿರ ಬಂದಾನು, ಎಂದಾದರೊಂದು ದಿನ ಹಾಗೂ ಮಾಡಿ ನೋಡಬೇಕು ಎಂತಲೂ ನನಗೆ ಅನಿಸುತ್ತಿತ್ತು.

ಒಮ್ಮೆ ಹಾಗೆ ಮಾಡಿದರೆ ಎಂಥ ಸೊಗಸಾದ ವಿನೋದವಾದೀತು.

ಆದರೆ ಆತ ರೋಗಿಗಳನ್ನು ಅರ್ಥಮಾಡಿಕೊಳ್ಳಬಲ್ಲಂತೆ, ವಿನೋದವನ್ನು ಅರ್ಥಮಾಡಿಕೊಳ್ಳಬಲ್ಲನೇ ?

ಏನೋ ನನಗೆ ಅದೇ ಅನುಮಾನ. ಆತ ಹೆಚ್ಚಾಗಿ ಯಾರೊಂದಿಗೂ ನಕ್ಕುದನ್ನು ನಾನು ನೋಡಿರಲಿಲ್ಲ. ತುಂಬಾ ಸೀರಿಯಸ್ ಟೈಪ್.

ನಿಜ—ಅದು.

ಒಮ್ಮೆ ಏನೋ ಮಾತಿಗೆ ಮಾತು ಬಂದಾಗ ಡಾಕ್ಟರ್ ನಂಬಿಯಾರ್ ಆತ ಮೆಡಿಕಲ್ ಕಾಲೇಜಿಗೆ ಬಂದ ಕಾರಣವನ್ನು ಹೇಳಿದರು. ಅದನ್ನು ಕೇಳಿದಮೇಲೆ ಆತನ ಬಗ್ಗೆ ನನ್ನಲ್ಲಿ ಗೌರವ ಹೆಚ್ಚಿತು. ಆತನ ಪರಿಚಯ ಮಾಡಿಕೊಳ್ಳಬೇಕೆಂಬ ಬಯಕೆ ಬಲಿಯಿತು. ಎಲ್ಲ ಹುಡುಗರ ಹಾಗೆ ಆತ ನಲ್ಲ ಎಂದರಿತು ಏಕೋ ಮನಸ್ಸಿಗೆ ಸಮಾಧಾನವಾಯಿತು.

ಡಾ. ನಂಬಿಯಾರ್ ಒಬ್ಬರೇ ಏನು, ಡಾ. ಶ್ರೀನಿವಾಸುಲು, ಡಾ. ರಾಜ್, ಡಾ. ಕಮಲಾ ಶ್ರೀನಾಥ್—ಎಲ್ಲರೂ ಆತ ಒಳ್ಳೆಯ ವಿದ್ಯಾರ್ಥಿ ಎಂದೇ ಹೇಳುತ್ತಾರೆ.

ಇರಬಹುದು. ಒಳ್ಳೆಯ ವಿದ್ಯಾರ್ಥಿಗಳನ್ನು ನಾನು ಎಷ್ಟೋ ಜನ ರನ್ನು ನೋಡಿದ್ದೆ , ಎಷ್ಟೋ ಜನರ ವಿಷಯ ಕೇಳಿದ್ದೆ, ಆದರೆ ರಾಜಶೇಖರನ ವಿಷಯವಾಗಿ ಅವರಿಂದ ಹೊಗಳಿಕೆ ಕೇಳಿದಾಗ, ಏನೋ ನನ್ನ ಮನಸ್ಸಿಗೆ ಒಂದು ಬಗೆಯ ವಿಚಿತ್ರ ಸಂತೋಷವಾಯಿತು. ಹೀಗೇಕೆ, ಅವನು ಹೊಗ ಳಿಕೆಗೆ ಪಾತ್ರನಾದರೆ ನನಗೆ ಸಂತೋಷವೇಕಾಗಬೇಕು ಎಂದು ನನ್ನನ್ನೇ ನಾನು ಹತ್ತಾರು ಬಾರಿ ಪ್ರಶ್ನಿಸಿಕೊಂಡೆ. ಊಹೂ– ಉತ್ತರ ಬರಲಿಲ್ಲ. ನನ್ನ ಮನ ಸ್ಸಿನ ರೀತಿ ನನಗೇ ಅರ್ಥವಾಗಲಿಲ್ಲ.

ಆದರೂ ನಮ್ಮಿಬ್ಬರ ನಡುವಿನ ದೂರವನ್ನು ಆದಷ್ಟು ಕಡಿಮೆ ಮಾಡಿ ಕೊಳ್ಳಬೇಕೆಂಬ ಬಯಕೆ ಮಾತ್ರ ದಿನದಿನಕ್ಕೆ ಬಲಿಯುತ್ತಿತ್ತು. ಆದರೆ ಆತ, ನನ್ನಲ್ಲಿ ಈ ಬಯಕೆ ಬೆಳೆದಂತೆ ದಿನದಿನಕ್ಕೆ ನನ್ನಿಂದ ದೂರವಾಗುತ್ತಿದ್ದ.

ಏಕೆ ಏಕೆ. ಏಕೆ....

ನನ್ನಲ್ಲಿ ಅಷ್ಟೊಂದು ವ್ಯಾಮೋಹವಿತ್ತು ಆತನಿಗೆ—ಆತನ ಹುಚ್ಚಿಗೆ ಕಾತ್ಯಾಯನೀಯ ಎಂದು ಹುಡುಗರು ಹೆಸರಿಟ್ಟಿದ್ದೂ ನನಗೆ ಗೊತ್ತಿತ್ತು. ಅಷ್ಟು ಆಕಾಂಕ್ಷೆ ಇದ್ದವನು, ಈಗ ಇಷ್ಟು ದೂರವಾಗುತ್ತಿರುವುದೇಕೆ ?

ಈ ಚಿಂತೆ ಬಂದಾಗ ಏಕೋ ನನ್ನ ಮನಸ್ಸಿಗೆ ಅಪಾರ ನೋವಾಗು ತ್ತಿತ್ತು.

ಕಡೆಗೊಂದು ದಿನ ಹಳೆಯ ಕಾತುರತೆಯ ಕುರುಹಾದರೂ ಆತನಲ್ಲಿ

ಉಳಿದಿದೆಯೋ ಇಲ್ಲವೋ ನೋಡಿಯೇ ಬಿಡಬೇಕೆಂದು, ನಿಶ್ಚಯಮಾಡಿ ಕೊಂಡೇ ಹೋದೆ.

ನಾನೇ ಏನೋ ನೆಪಮಾಡಿಕೊಂಡು ಆತನಿದ್ದ ಬೆಡ್ ಬಳಿ ಹೋಗಿ, ಅವನ ಜೊತೆಗಿದ್ದ ವಿದ್ಯಾರ್ಥಿಯೊಂದಿಗೆ ಏನೇನೋ ಮಾತು ತೆಗೆದು, ಮಾತ ನಾಡುತ್ತಾ ಆಡುತ್ತಾ ಅವನು ಧರಿಸಿದ ಟೈಯನ್ನು ಪ್ರಶಂಸಿಸಿ, ಹಾಗೆ ರಾಜ ಶೇಖರನ ಮುಖ ನೋಡಿದೆ. ಏಕೋ ಅವನ ಮುಖ ಕೆಂಪೇರಿ, ಕಣ್ಣಲ್ಲಿ ಬೆಂಕಿ ಉರಿಯುತ್ತಿತ್ತು. ಅದನ್ನು ಕಂಡು ನನ್ನ ಹೃದಯಕ್ಕೆ ವಿಚಿತ್ರ ಸಂತೋ ಷವಾಗಿ, ಏನೋ ಮಾದಕತೆ ನನ್ನನ್ನು ಆವರಿಸಿತು. ನೆಪವಿಲ್ಲದೆ ಏನೋ ಕಥೆ ಹೇಳುತ್ತಾ ನಗಲಾರಂಭಿಸಿದೆ. ಅವನಿಗೆ ಎಷ್ಟು ಸಿಟ್ಟು ಬಂದಿತೋ ಏನೋ.

" ನೋಡಿ, ರೋಗಿ ಮಲಗಿದ್ದಾನೆ. ನಿಮ್ಮ ಸರಸ-ಸಲ್ಲಾಪ ದೂರಕ್ಕೆ ಹೋಗಿ ಮಾಡಿ " ಎಂದ.

" ಡೋನ್ಟ್ ಬಿ ಎ ಡಾಗ್ ಇನ್ ದಿ ಮಾನ್‌ಜರ್ ಅಂಡ್ ಆಲ್‌ಸೋ ಡೋನ್ಟ್ ಟ್ರೈ ಟು ಟೀಚ್ ಯುವರ್ ಸೀನಿಯರ್ಸ್ " (ಗೋದಲಿಯಲ್ಲಿನ ನಾಯಾಗಬೇಡ, ನಿನ್ನ ಹಿರಿಯರಿಗೆ ಪಾಠ ಕಲಿಸಲೂ ಯತ್ನಿಸಬೇಡ) ಎಂದೆ.

ಅವನ ಮುಖ ಕಾಸಿನ ತಾಮ್ರದ ಹಾಗಾಗಿ, ಕೈಯ ನರಗಳು ಬಿಗಿದವು. ಅವನ ಮುಖದಲ್ಲಿನ ವಿಚಿತ್ರಯಾತನೆ ತಾನೇ ನನಗೆ ಬೇಕಾಗಿದ್ದ ಮಾತನ್ನು ಹೇಳಿತು ನಗುತ್ತಾ ಅಲ್ಲಿಂದ ಸರಿದೆ

ಸಂತೋಷವಾಗಿತ್ತು ನನಗೆ - ನಿಜವಾಗಿಯೂ ಸಂತೋಷವಾಗಿತ್ತು. ವಿಚಿತ್ರ ಸಂತೋಷವಾಗಿತ್ತು, ನಾನಿದ್ದುದು ವಾರ್ಡೆಂಬುದನ್ನು ಮರೆತು ಕುಣಿ ಯುವಷ್ಟು ಸಂತೋಷವಾಗಿತ್ತು ನನ್ನ ಹೃದಯ ನನಗೆ ಹೇಳುತ್ತಿದ್ದ ಮಾತನ್ನು ಜಗತ್ತಿಗೇ ಸಾರಿ ಹೇಳಬೇಕೆಂಬಷ್ಟು ಹರ್ಷವಾಗಿತ್ತು—

ನನ್ನ ಹೃದಯ ಸಾರಿ ಸಾರಿ ಹೇಳುತ್ತಿತ್ತು—

'ಕಾತ್ಯಾಯನಿ, ಯೂ ಲಕ್ಕಿ ಡಾಗ್-ಅವನ ಮನೋಭಿತ್ತಿಯ ಮೇಲೆ ನಿನ್ನ ಚಿತ್ರವಿನ್ನೂ ಉಳಿದಿದೆ.'

ಆ ಮಾತನ್ನು ಕೇಳಿ ನನ್ನ ಬದುಕು ಸಾರ್ಥಕವಾದಷ್ಟು ಸಂತೋಷವಾ ಗಿತ್ತು ನನಗೆ.

ಆದರೆ ನಾನೆಂಥ ತಪ್ಪು ಮಾಡಿದೆ. ಆ ದಿನವೇ ಆತನಿಗೆ ಆ ಮಾತನ್ನು ಹೇಳಿದ್ದರೆ ಎಷ್ಟು ಚೆನ್ನಾಗಿತ್ತು. ಬಹಳ ತಪ್ಪುಮಾಡಿದೆ.

ಈಗ ಒಂದು ವಾರದಿಂದ ಅವನ ಮುಖದಲ್ಲಿ ಗೆಲುವಿರಲಿಲ್ಲ. ಏನೋ ಅಶಾಂತಿ ಕುದಿಯುತ್ತಿತ್ತು. ಬೇರೆಯವರು ಅದನ್ನು ಗಮನಿಸಿದರೋ ಇಲ್ಲವೋ

ನಾನರಿಯೆ. ಆದರೆ ಆತನ ಚಲನ – ವಲನವನ್ನು ಸೂಕ್ಷ್ಮವಾಗಿ ದೃಷ್ಟಿಸು ತ್ತಿದ್ದ ನನ್ನ ಕಣ್ಣುಗಳಿಗದು ಕಾಣದೆ ಹೋಗಲಿಲ್ಲ.

ಆದರೆ ನಾನೆಂಥ ಮೂರ್ಖ. ಅದಕ್ಕೆಲ್ಲಾ ನಾನು ಊಹಿಸಿದ ಕಾರ ಣವೇ ಬೇರೆ, ಆದರೆ ಅದರ ನಿಜವಾದ ಕಾರಣವೇ ಬೇರೆ.

ಈ ದಿನ ಬೆಳಗ್ಗೆ ನಾವು ವಾರ್ಡಿನಲ್ಲಿ ಗುಂಪಾಗಿ ಕಲೆತು, ಪ್ರೊಫೇಸರು ಹೇಳುತ್ತಿದ್ದ ಯಾವುದೋ ಒಂದು ವಿಚಿತ್ರವಾದ 'ಕೇಸಿ'ನ ವಿಷಯ ಕೇಳುತ್ತಾ ನಿಂತಿದ್ದೆವು. ನಾನು ಬೇಕೆಂದೇ ಆದಷ್ಟು ರಾಜಶೇಖರನಿಗೆ ಹತ್ತಿರವಾಗಿ ನಿಂತಿದ್ದೆ. ಹಾಗೆ ಕೇಳುತ್ತಾ ಇರುವಾಗ ವಾರ್ಡ್‌ಬಾಯ್ ಬಂದು....

"ಸರ್. ರಾಜಶೇಖರ್ ಎನ್ನುವವರಿಗೆ ಈ ಟೆಲಿಗ್ರಾಂ ಬಂದಿದೆ" ಎಂದು ಡಾಕ್ಟರಿಗೆ ಹೇಳಿದ ಆ ಮಾತು ಕೇಳಿದವನೇ ರಾಜಶೇಖರ ಅವಸರವಾಗಿ ವಾರ್ಡ್‌ಬಾಯ್‌ನಿಂದ ಟೆಲಿಗ್ರಾಂ ತೆಗೆದುಕೊಂಡು, ಪೋಸ್ಟಲ್ ಫಾರಂಗೆ ರುಜು ಹಾಕಿ ಕಳಿಸಿ, ಟೆಲಿಗ್ರಾಂ ಕವರನ್ನು ಒಡೆದು ಓದಿದ. ಅದನ್ನು ಓದು ತ್ತಿದ್ದಂತೆಯೇ ಒಂದು ಗಳಿಗೆ ಇದ್ದಕ್ಕಿದ್ದ ಹಾಗೆ ಗುಂಡು ತಗಲಿದವನಂತೆ ಸೆದರಿ ಸುತ್ತಲೂ ನೋಡಿ, ಹಾಗೇ ನೆಲಕ್ಕೆ ಕುಸಿದ. ಅವನ ಕೈಯಲ್ಲಿದ್ದ ಟೆಲಿಗ್ರಾಂ ತೆಗೆದು ನೋಡಿದೆ ಅದರಲ್ಲಿ ಇದ್ದುದಿಷ್ಟೆ—

'ಮದರ್ ಪಾಸ್ಡ್ ಎವೇ. ಸ್ಟಾರ್ಟ್ ಇಮ್ಮೀಡಿಯೆಟ್ಲೀ.– ಚಿನ್ನಸ್ವಾಮಿ ಶೆಟ್ಟಿ'

ಅದನ್ನು ಓದಿ ನನಗೂ ಸಿಡಿಲು ಬಡಿದ ಹಾಗಾಯಿತು.

ಡಾಕ್ಟರು ಕೆಳಗೆ ಬಿದ್ದ ರಾಜಶೇಖರನನ್ನು ವಿದ್ಯಾರ್ಥಿಗಳ ಬೆಂಬಲ ದಿಂದ ತಮ್ಮ ಕೋಣೆಗೆ ಕರೆದುಕೊಂಡು ಹೋಗಿ ಶೈತ್ಯೋಪಚಾರ ಮಾಡಿ—

' ಇಷ್ಟರಲ್ಲೇ ಪ್ರಜ್ಞೆ ಬರುತ್ತದೆ. ಪ್ರಜ್ಞೆ ಬರುವಾಗ ಯಾರಾದರೂ ಬಳಿಯಲ್ಲಿರುವುದು ಮೇಲು. ಇಟ್ ಈಸ್ ಎ ಟೆರಿಬಲ್ ಷಾಕ್. ಸ್ವಲ್ಪ ಬ್ರಾಂದಿ ನೀರಿಗೆ ಹಾಕಿ ಕಳಿಸುತ್ತೇನೆ, ಕೊಡಿ. ಹೆಚ್ಚು ಜನವಿದ್ದು ಗದ್ದಲ ಮಾಡಬೇಡಿ.'

—ಎಂದರು. ರಾಜಶೇಖರನ ಬಳಿ ಇರಲು ಬೇರೆಯವರು ಒಪ್ಪಿಕೊಳ್ಳುವ ಮುನ್ನ ನಾನೇ ಇರುವುದಾಗಿ ಒಪ್ಪಿಕೊಂಡೆ. ನಿಜವಾಗಿಯೂ ಆ ಗಳಿಗೆಯಲ್ಲಿ, ನನಗೆ ಅವನ ಪಕ್ಕಬಿಟ್ಟು ಸರಿಯಲು ಮನಸ್ಸಿರಲಿಲ್ಲ. ಬೇರೆಯವರು ಇರುವುದೂ ನನಗೆ ಬೇಕಿರಲಿಲ್ಲ. ಏಕೋ ಏಕೋ ಆ ದುರಂತ ಕೇವಲ ನಮ್ಮಿಬ್ಬರಿಗೇ ಸಂಬಂಧಿಸಿದುದು, ಬೇರೆ ಯಾರಿಗೂ ಅದು ಸಂಬಂಧವಿಲ್ಲದ್ದು ಎನಿಸಿತು.

ನಾನು ಅಲ್ಲಿರಲು ಒಪ್ಪಿದುದನ್ನು ಕಂಡು ನಮ್ಮೊಂದಿಗೆ ಬಂದಿದ್ದ ವಿದ್ಯಾರ್ಥಿ

ಗಳು ಏನೋ ಒಂದು ವಿಧವಾಗಿ ನಗುತ್ತಾ ಹೊರಟುಹೋದರು.

ನಕ್ಕರೆ ನಗಲಿ – ಯಾರು ನಕ್ಕರೆ ನನಗಾಗಬೇಕಾದುದೇನು ಎನಿಸಿತು ನನಗೆ. ರಾಜಶೇಖರನೊಂದಿಗೆ ನಾನೊಬ್ಬಳೇ ಉಳಿದೆ.

ಪ್ರಜ್ಞೆತಪ್ಪಿ ಮಲಗಿದ್ದ ರಾಜಶೇಖರ. ನಾನು ಅವನಿಗೆ ಅಲ್ಲಿದ್ದ ಪುಸ್ತಕ ವೊಂದರಿಂದ,ಗಾಳಿ ಹಾಕುತ್ತಾ ನಿಂತಿದ್ದೆ. ಎರಡು ನಿಮಿಷದಲ್ಲೇ ನರ್ಸ್ ಒಂದು ಗ್ಲಾಸಿನಲ್ಲಿ ಬ್ರಾಂದಿ ತಂದಿಟ್ಟು ಹೋದಳು. ಹತ್ತು ನಿಮಿಷಗಳ ವೇಳೆಗೆ ರಾಜ ಶೇಖರನಿಗೆ ಮತ್ತೆ ಪ್ರಜ್ಞೆ ಬಂತು.

ಎಚ್ಚರವಾಗಿ ಎದ್ದು ಕುಳಿತು ' ನಾನೆಲ್ಲಿದ್ದೇನೆ, ಇಲ್ಲಿಗೆ ಏಕೆ ಬಂದೆ ' ಎಂಬ ಚಿಂತೆಗೊಳಗಾದಂತೆ ಸುತ್ತಲೂ ನೋಡಿದ. ನಾನು ಅವನ ಪಕ್ಕದಲ್ಲಿ ನಿಂತಿದ್ದುದೂ ಅವನ ಕಣ್ಣಿಗೆ ಬಿದ್ದಂತಿರಲಿಲ್ಲ. ಒಂದು ಗಳಿಗೆ ಹಾಗೆ ನೋಡಿದ. ಮರುಗಳಿಗೆಯೇ ಆ ದಾರುಣ ನೆನಪು ಮರುಕಳಿಸಿ ತೋಳಲ್ಲಿ ಮುಖ ಮುಚ್ಚಿ ಕೊಂಡ.

ನನ್ನ ನಾಲ್ಕು ವರ್ಷಗಳ ವೈದ್ಯ ಶಿಕ್ಷಣದಲ್ಲಿ ಸಾಕಷ್ಟು ದುಃಖಪಡುವವ ರನ್ನೂ, ನೋವು ಅನುಭವಿಸುವವರನ್ನೂ, ವ್ಯಥೆಗೊಳಗಾದವರನ್ನೂ ನೋಡಿ ದೇನೆ. ಆದರೆ ಅಂದಿನ ಕಣ್ಣೆದುರಿನ ದೃಶ್ಯದಷ್ಟು ಮತ್ತಾವುದೂ ನನ್ನ ಪರಿಣಾಮ ವನ್ನು ಮಾಡಿರಲಿಲ್ಲ ಸುಮ್ಮನೆ ನಿಂತು ಅದನ್ನು ನೋಡುವುದೂ ನನಗೆ ಸಾಧ್ಯ ವಾಗಲಿಲ್ಲ. ಮೃದುವಾಗಿ ಆತನ ಬೆನ್ನು ಸವರಿ—

" ಏಳಿ ರಾಜಶೇಖರ್. ಅಳುತ್ತಾ ಕೂಡುವುದರಿಂದ ಏನೂ ಆಗುವುದಿಲ್ಲ. ಧೈರ್ಯ ತಂದುಕೊಳ್ಳಿ. ಇದನ್ನು ಕುಡಿಯಿರಿ."

—ಎಂದೆ.

ನನ್ನ ಮಾತು ಕೇಳಿ ರಾಜಶೇಖರ ಧಿಗ್ಗನೆ ಎದ್ದು ಕುಳಿತು ನನ್ನ ಮುಖ ವನ್ನು ದುರುದುರು ನೋಡಿದ ಆ ನೋಟವನ್ನು ನೋಡಿದುದರಲ್ಲಿ ಏನೋ ಹಾಲಾಹಲ ಕಡೆಯುತ್ತಿತ್ತು.

" ದಯವಿಟ್ಟು ನನ್ನ ಪಾಡಿಗೆ ನನ್ನನ್ನು ಬಿಟ್ಟುಹೋಗಿ. ನಿಮ್ಮ ಸಹಾನು ಭೂತಿಯ ಅವಶ್ಯಕವಿಲ್ಲ ನನಗೆ."

—ತನಗಾದ ದುಃಖದ ಸಿಟ್ಟನ್ನೆಲ್ಲಾ ನನ್ನಮೇಲೆ ತೀರಿಸುವಂತೆ ಕಟು ವಾಗ ಸ್ವರದಲ್ಲಿ ಹೇಳಿದ. ಆ ಮಾತು ಕೇಳಿ ನನ್ನ ಮೈಯಲ್ಲಿದ್ದ ರಕ್ತವೆಲ್ಲವೂ ಸಟಕ್ಕನೆ ಹೆಪ್ಪುಗಟ್ಟಿದಂತಾಯಿತು ಮುಖದ ಬಣ್ಣವೂ ಕೆಟ್ಟುಹೋಗಿರಬೇಕು

" ನಿಮಗೆ ನಾನಿಲ್ಲಿರುವುದು ಬೇಡವಾದರೆ ಹೋಗುತ್ತೇನೆ. ಆದರೆ ಡಾಕ್ಟರು ನಿಮಗಿದನ್ನು ಕುಡಿಯಲು ಕೊಡುವಂತೆ ಹೇಳಿದಾರೆ. ತೆಗೆದುಕೊಳ್ಳಿ "

—ಎಂದೆ. ಆದರೆ ಅದು ನನ್ನ ಧ್ವನಿಯೆ ? ಯಾರಾದರೂ ' ಅದು ನಿನ್ನ ಧ್ವನಿಯೇ ' ಎಂದು ಆಣೆ ಇಟ್ಟು ಹೇಳಿದ್ದರೂ ನಾನೇ ನಂಬುತ್ತಿರಲಿಲ್ಲ. ಏಕೋ ನನ್ನ ಧ್ವನಿ ಅಷ್ಟು ವಿಚಿತ್ರವಾಗಿತ್ತು.

ನನ್ನ ಮಾತನ್ನು ಕೇಳಿ ರಾಜಶೇಖರ, ನಾನು ಕೊಟ್ಟ ಗ್ಲಾಸನ್ನು ಕೈಗೆ ತೆಗೆದುಕೊಂಡು, ನನ್ನ ಮುಖವನ್ನೇ ನೋಡಿದ. ಅವನ ಕಣ್ಣುಗಳಲ್ಲಿ ಎಲ್ಲೋ ಮೋಡದಾಳದಲ್ಲಿ ಬೆಳಗುವ ಸೂರ್ಯನ ಬೆಳಕಿನಂಥ ಏನೋ ಬೆಳಕು ಒಂದು ಗಳಿಗೆ ಹೊಳೆದು ಮರೆಯಾಗಿಹೋಯಿತು. ಗ್ಲಾಸಿನಲ್ಲಿದ್ದ ಬ್ರಾಂದಿಯನ್ನು ಕುಡಿಯದೆ ಹಾಗೇ ಇಟ್ಟುಬಿಟ್ಟ.

" ಥ್ಯಾಂಕ್ ಯೂ ಕಾತ್ಯಾಯನಿ ನನಗೀಗ ಇದರ ಆವಶ್ಯಕತೆಯಿಲ್ಲ. ಬ್ರಾಂದಿಯ ನೆರವಿಲ್ಲದೆ ಎಂಥ ದುಃಖವನ್ನಾದರೂ ಭರಿಸಬಲ್ಲೆ."

—ಎಂದು ಹೇಳಿ, ಅವನ ಬಳಿಯಿದ್ದ ನನ್ನ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಮೃದುವಾಗಿ ಒತ್ತಿ, ಮತ್ತೊಮ್ಮೆ ನನ್ನ ಮುಖವನ್ನು ನೋಡಿ, ಮೇಲೆದ್ದು, ಬಾಗಿಲ ಬಳಿ ಹೊರಟ. ಅವನ ಹೆಜ್ಜೆಗಳು ದೃಢವಾಗಿರಲಿಲ್ಲ. ಹಾಗೇ ಬಾಗಿಲವರೆಗೂ ಹೋಗಿ—

" ನಾನು ಉದ್ವೇಗದಲ್ಲಾಡಿದ ಮಾತನ್ನು ಕ್ಷಮಿಸಿ."

—ಎಂದು ಹೇಳಿ ಹೊರಗೆ ಹೋದ.

ನಾನು ಕಡೆದ ವಿಗ್ರಹದಂತೆ ನಿಂತಲ್ಲಿಯೇ ನಿಂತಿದ್ದೆ. ಏನಾಯಿತೆಂಬುದೇ ನನಗರಿವಾಗಲಿಲ್ಲ. ಒಂದು ಗಳಿಗೆ ನನ್ನ ಸುತ್ತಿನ ಜಗತ್ತೆಲ್ಲವೂ ಸ್ತಂಭಿತವಾದಂತಿತ್ತು. ಮರುಗಳಿಗೆಯೇ ಯಾವುದೋ ಬಿಸಿಸೀರಿನ ಹೊಳೆ ನನ್ನ ಮೈಯಲ್ಲಿ ಉಕ್ಕಿಹರಿಯಿತು ರಾಜಶೇಖರ ಮೃದುವಾಗಿ ಹಿಸುಕಿದ ನನ್ನ ಕೈಯನ್ನು ತೆಗೆದು ಕೆನ್ನೆಗೊತ್ತಿಕೊಂಡೆ ಇದ್ದಕ್ಕಿದ್ದಂತೆಯೇ ನನ್ನ ಸುತ್ತಲೂ ಕೋಟಿ ಕಾಮನಬಿಲ್ಲುಗಳು ಕುಣಿದಂತಾಯಿತು ನನಗರಿವಾಗದಂತೆಯೇ ನನ್ನ ಕಣ್ಣಿನಿಂದ ಒಂದು ಹನಿಯುದುರಿತು. ನನಗೆ ನಾನೇ ಪಿಸುದನಿಯಲ್ಲಿ ಹೇಳಿಕೊಂಡೆ—

' ಐ ಲೌವ್ ಯು, ರಾಜಶೇಖರ್, ಐ ಲೌವ್ ಯು '

ನನ್ನ ಮಾತು ಬೇರೆ ಯಾರೋ ನನ್ನ ಕಿವಿಯಲ್ಲಿ ಹೇಳಿದಂತೆ ನನ್ನ ಕಿವಿಗೆ ಬಿತ್ತು. ನನ್ನ ಜೀವನದಲ್ಲಿ ಎಂದೆಂದೂ ಕೇಳದ ಆ ಮಾತನ್ನು ಕೇಳಿ ನನಗೆ ದಿಗ್ಭ್ರಾಂತಿಯಾದಂತಾಯಿತು. ನಿಜವೇ, ನಿಜವೇ, ನಾನು ಕೇಳಿದ ಈ ಮಾತು ನಿಜವೇ ಎಂದು ನನ್ನನ್ನೇ ನಾನು ನೂರು ಬಾರಿ ಕೇಳಿಕೊಂಡೆ.

' ನಿಜ, ನಿಜ, ನಿಜ, ನಾನು ರಾಜಶೇಖರನನ್ನು ಪ್ರೀತಿಸುತ್ತೇನೆ '

—ಎಂದು ನೂರು ಬಾರಿಯೂ ನನಗೆ ಉತ್ತರ ಕೊಟ್ಟಿತು ನನ್ನ ಮನಸ್ಸು.

ನನ್ನ ಮನಸ್ಸು ಹೇಳಿದ ಮಾತು ಕೇಳಿ ನನ್ನ ಬಾಳಿಗೆ ಏನೋ ಒಂದು ಹೊಸ ಅರ್ಥ ಬಂದಂತಾಯಿತು. ಸುತ್ತಲಿದ್ದುದೆಲ್ಲವೂ ಏನೋ ಒಂದು ವಿಧವಾಗಿ ಪರಿವರ್ತನೆಯಾದಂತಾಯಿತು

ಸಿಂಕ್‌ನ ಬಳಿಯಲ್ಲಿದ್ದ ಕನ್ನಡಿಯಲ್ಲಿ ನನ್ನ ಮುಖವನ್ನೇ ನಾನು ನೋಡಿಕೊಂಡೆ.

ನನ್ನ ಮುಖ ಸುಂದರವಾದುದೆಂದು ನನಗೆ ಗೊತ್ತಿತ್ತು. ಆದರೆ ಅದು ಅಷ್ಟು ಸುಂದರವಾಗಿದ್ದುದನ್ನು ನಾನೆಂದೂ ನೋಡಿರಲಿಲ್ಲ.

ಕನ್ನಡಿಯಲ್ಲಿ ಮುಖ ನೋಡಿಕೊಂಡಾಗ ನನಗೆ ನಾನೆಲ್ಲಿರುವೆ ನೆಂಬುದರ ನೆನಪು ಬಂದಿತು. ಹೆಚ್ಚುಹೊತ್ತು ಅಲ್ಲಿರುವುದು ಅನುಚಿತವೆಂದು ಅರಿವಾಗಿ, ನನ್ನ ಈ ತಡವನ್ನು ಬೇರೆಯವರು ಅಪಾರ್ಥ ಮಾಡಬಹುದೆಂದು ಹೆದರಿ, ಹೊರಗೆ ಹೊರಡಲು ಸಿದ್ಧವಾದೆ. ಆದರೆ ನನ್ನ ಎದೆ ದಡದಡಿಸುತ್ತಿತ್ತು. ಕಾಲೇಕೋ ಕಂಪಿಸುತ್ತಿತ್ತು.

ಏನು ಮಾಡಲಿ ಎಂದು ನೋಡಿದೆ. ರಾಜಶೇಖರ್ ಕುಡಿಯದೆ ಬಿಟ್ಟು ಹೋದ ಬ್ರಾಂದಿ ಕಣ್ಣಿಗೆ ಬಿತ್ತು ತೆಗೆದು ಒಂದೇ ಗುಟುಕಿಗೆ ಗಂಟಲಿಗೆ ಬಗ್ಗಿಸಿಕೊಂಡೆ. ನನ್ನ ಮೈಯಲ್ಲಿ ನಿಧಾನವಾಗಿ ಬೆಂಕಿಯ ಹೊಳೆ ಹರಡಿತು. ದೂರವಾಗಿದ್ದ ಧೈರ್ಯ ಬಳಿಸಾರಿತು ಯಾರೇನೆಂದುಕೊಂಡರೆ ನನಗೇನು ? ಎಂದುಕೊಂಡು ಹೊರಟೆ

ಏಕೋ . ಏಕೋ. ನನ್ನ ಸಮಾನ ಭಾಗ್ಯಶಾಲಿಗಳು ಜಗತ್ತಿನಲ್ಲಿ ಯಾರೂ ಇಲ್ಲ ಎನಿಸಿತು ಹಾಗನಿಸಿದಾಗ ರಾಜಶೇಖರ ಹಿಸುಕಿದ ಕೈಯು ನೆನಪಾಯಿತು ಅದನ್ನು ಮೇಲೆತ್ತಿ ನೋಡಿ, ಹೇಳಿದೆ:

' ನಾನೇ ಭಾಗ್ಯಶಾಲಿ ಎಂದುಕೊಂಡಿದ್ದೆ. ಊಹೂ, ನನಗಿಂತ ನೀನು ಭಾಗ್ಯಶಾಲಿ.'

*

# ' ಒಲವೋ ಹಗೆಯೋ - ಯಾವುದಿದು ? '

## (ಆತ್ಮವೃತ್ತದ ಒಂದು ಖಂಡ)

೧

ತಾಯಿಯ ಅಂತ್ಯಕ್ರಿಯೆಗಳನ್ನು ಮುಗಿಸಿಕೊಂಡು ಚಿಂತಾಮಣಿಯಿಂದ ಮೈಸೂರಿಗೆ ಹಿಂದಿರುಗಿದೆ. ಹಿಂದಿರುಗಿದೆ - ಆದರೆ ನನ್ನ ಹೃದಯ ಬಾಳಿನಲ್ಲಿ ಒಂಟಿಯಾದ ನನ್ನ ತಂದೆಯ ಬಳಿ ಇತ್ತು. ಕರಾಳ ವಿಧಿ ನಮ್ಮ ಬಾಳಿನಲ್ಲಿ ಇಷ್ಟು ಬೇಗ, ಈ ಬಗೆಯ ದುರಂತದ ಬಿರುಗಾಳಿಯನ್ನು ಕಲಕುವನು ಎಂದು ನಾನು ಕನಸು ಮನಸಿನಲ್ಲಿಯೂ ನಿರೀಕ್ಷಿಸಿರಲಿಲ್ಲ. ಇಷ್ಟು ಬೇಗ ಅವಳು ನಮ್ಮನ್ನು ಬಿಟ್ಟುಹೋಗುವಳು ಎಂದು ನಾನೆಂದೂ ಬಗೆದಿರಲಿಲ್ಲ. ಹೋದಳು-ಹೋದಳು-ಎಂದೆಂದೂ ತಿರುಗಿ ಬರದಂತೆ ಹೋದಳು.

ಹೋದಳೇ ? - ಏಕೋ ಆ ಮಾತನ್ನು ನಂಬುವುದೇ ನನಗೆ ಕಷ್ಟ ವಾಗಿದೆ.

ಅಮ್ಮ ಬದುಕಿದ್ದಾಗ ನಾನು ಹೆಚ್ಚು ಕಡಮೆ ಅವಳು ಇರುವುದನ್ನೇ ಮರೆತಿದ್ದೆ. ಆದರೆ ಈಗ ಎಲ್ಲೆಲ್ಲಿಯೂ ಅವಳೇ ಕಾಣುತ್ತಾಳೆ. ಅವಳನ್ನು ನಾನು ಇಷ್ಟು ಪ್ರೀತಿಸುತ್ತಿದ್ದೆ, ಅವಳಿಲ್ಲವಾದರೆ ನನ್ನ ಬಾಳು ಈ ಪರಿಯ ಮರುಭೂಮಿಯಾಗಬಹುದು ಎಂದು ನನಗೆಂದೂ ಅನಿಸಿರಲಿಲ್ಲ.

ಈಗ ಎಲ್ಲಿ ಆ ಅಮ್ಮ ?

ಅಮ್ಮಾ ಎಂದು ಹಂಬಲಿಸಿದಾಗ ಬರುವುದೊಂದೇ - ಬೇಡವೆಂದರೂ ಬರುವ ಕಂಬನಿ. ಆ ಕಂಬನಿಯೇ ನನ್ನ ತಾಯಿಯಾಗಿದೆ. ನಿಜ-ತಾಯಿಯಗಲಿದ ನಾನಿಂದು ಕಂಬನಿಯ ಕೂಸು.

ಆ ಕೆಲಸಕಾರ್ಯಗಳನ್ನೆಲ್ಲಾ ಹೇಗೆ ಮುಗಿಸಿದೆನೋ ನಾನರಿಯೆ. ಅಂತೂ ಹೇಗೋ ಮುಗಿಸಿದೆ.

ಅಲ್ಲ - ಆ ಸಾವಿನ ರುದ್ರ ನಿರಾಶೆ ನನ್ನೆದೆಯನ್ನು ಕವಿದಾಗ, ಎಲ್ಲಿಯದೋ ಒಂದು ಬೆಳಕಿನ ಕಿರಣ ನನ್ನ ಜೊತೆಗಿತ್ತು.

ಅಮ್ಮನ ಸಾವಿನ ಸುದ್ದಿ ಬಂದ ದಿನ, ಕಾತ್ಯಾಯನಿಯ ಕಣ್ಣಲ್ಲಿ ಕಂಡ ಬೆಳಕು ಉದ್ದಕ್ಕೂ ನನ್ನ ಬೆಂಗಾವಲಾಗಿತ್ತು. ಆ ಬೆಳಕೇ ನನ್ನ ಕೈ ಹಿಡಿದು ನಡೆಸಿತು. ಅದೇ ಮತ್ತೆ ನನ್ನನ್ನು ಮೈಸೂರಿಗೆ ಕರೆತಂದಿತು.

ಆದರೆ ಆ ದಿನ ನಾನು ಕಾತ್ಯಾಯನಿಯ ಕಣ್ಣಲ್ಲಿ ಕಂಡ ಬೆಳಕು ನಿಜವೇ ? ಆ ಬೆಳಕಿಗೆ ನಾನು ಊಹಿಸಿದ ಅರ್ಥವೇ ಇರಬಹುದೇ ? ಅಥವಾ ಅದೂ ನನ್ನ ಕಾತ್ಯಾಯನೀಯದ ಭ್ರಾಂತಿಯೋ ?

ಅಂಥ ಹೊತ್ತಿನಲ್ಲಿ ಯಾರ ಹೃದಯದಲ್ಲಾದರೂ ಮೂಡುವ ಸಹಾನುಭೂತಿಯನ್ನು ನಾನು ಅಪಾರ್ಥ ಮಾಡಿಕೊಂಡಿರುವೆನೇ ?

ಅದರ ನಿಜವಾದ ಅರ್ಥವೇನು ? ಅದರ ಸತ್ಯವೇನು ? ಯಾರನ್ನು ಕೇಳುವುದು, ಹೇಗೆ ತಿಳಿದುಕೊಳ್ಳುವುದು ?

ಅವಳನ್ನೇ ಕೇಳಿದರೆ ಹೇಗೆ ? ಕೇಳಿ ಮತ್ತೆ 'ಲೋಫರ್' ಅನ್ನಿಸಿಕೊಳ್ಳುವಂತಾದರೆ....

ಆ ಮಾತು ನೆನಪಾದರೆ ಎದೆ ಹೆದರಿ ನಡುಗುತ್ತಿತ್ತು.

ಆದರೆ ಮರುಗಳಿಗೆಯೇ ಆ ಕಣ್ಣ ಬೆಳಕು ಬಂದು 'ನಿನಗೆ ನಂಬಿಕೆ ಇಲ್ಲವಾದರೆ ಕೇಳು, ಹೆದರಬೇಡ' ಎಂದು ಅಭಯ ನೀಡುತ್ತಿತ್ತು.

ಈ ಹೋರಾಟದಲ್ಲೇ ನಾಲ್ಕಾರು ದಿನ ಕಳೆಯಿತು.

ಆ ಹೋರಾಟ ಎಷ್ಟು ದಾರುಣವಾಗಿತ್ತೋ, ಅಷ್ಟೇ ಮಟ್ಟಿಗೆ ಅದರಲ್ಲಿ ಒಂದು ಬಗೆಯ ಸುಖವೂ ಇತ್ತು. ಆ ಹೋರಾಟ ನನ್ನ ಓದಿಗೆ ಅಡ್ಡವಾಗಿದ್ದುದರಿಂದ, ಅದನ್ನು ಮುಂದುವರಿಸಲು ಧೈರ್ಯ ಸಾಲದೆ ಕಡೆಗೊಂದು ದಿನ ಏನಾದರಾಗಲಿ ಕೇಳೇಬಿಟ್ಟು, ಹಾಗಾದರೂ ಸರಿ, ಹೀಗಾದರೂ ಸರಿ ನಿಶ್ಚಯ ಮಾಡಿಕೊಂಡು ಮುಂದಿನ ದಾರಿ ಹಿಡಿಯುವುದು ಎಂದು ನಿರ್ಧಾರ ಮಾಡಿದೆ.

ಅದು ನಾನು ನನ್ನ ಜೀವನದಲ್ಲಿ ಆಡಿದ ಮೊದಲನೆಯ ಭಾರಿ ಜೂಜು. ಗೆದ್ದರೆ – ಸ್ವರ್ಗವೇ ಪಣವಾಗಿತ್ತು ; ಸೋತರೆ–ಆ ನರಕವೇನೂ ಹೊಸದಲ್ಲ.

ಏನಾದರಾಗಲಿ ದಾಳ ಉರುಳಿಸುವುದೇ ಸರಿ ಎಂದು ನಿಶ್ಚಯಮಾಡಿದೆ, ಅದನ್ನು ಕಾರ್ಯರೂಪಕ್ಕೆ ತರಲು ಸರಿಯಾದ ಹೊತ್ತನ್ನು ಕಾಯುತ್ತಿದ್ದೆ.

೨

ಒಂದು ಭಾನುವಾರ ಬಹಳ ಬೇಸರವಾಗಿ, ಹೊತ್ತು ಕಳೆಯಲೆಂದು ಕನ್ನಂಬಾಡಿ ಕಟ್ಟೆಗೆ ಹೋದೆ. ಬಸ್ಸಿನಲ್ಲಿ ಕಟ್ಟೆಯ ಮಹಾದ್ವಾರದ ಬಳಿ ಇಳಿದು, ಕಟ್ಟೆಯುದ್ದಕ್ಕೂ ನಡೆದುಕೊಂಡುಹೋಗಿ, ಹೋಟಲಿನಲ್ಲಿ ಕಾಫಿ ಕುಡಿದು, ದೀಪ ಹೊತ್ತಿಸಿದ ಬಳಿಕ ಕಾರಂಜಿ ಉದ್ಯಾನದ ಕಡೆ ಇಳಿಯುವುದೆಂದು, ಮಹಾರಾಜರ ವಿಗ್ರಹವಿರುವ ಮಂಟಪದ ಬಳಿಯ ಕಲ್ಲುಬೆಂಚಿನ ಮೇಲೆ ಕುಳಿತೆ.

ಹೆಚ್ಚು ಕಡಮೆ ನಾನು ಕಳೆದ ಎರಡು ಮೂರು ವರ್ಷಗಳಿಂದ ಮೈಸೂರಿನಲ್ಲೇ ಇದ್ದರೂ ಕನ್ನಂಬಾಡಿಗೆ ಬಂದುದು ಅದು ಎರಡನೆಯ ಸಲವೋ ಮೂರನೆಯ ಸಲವೇ. ಆದುದರಿಂದ ನನ್ನ ಪಾಲಿಗೆ ಅದರ ನಾವೀನ್ಯತೆ ಕಳೆಗುಂದಿರಲಿಲ್ಲ ದಿನಚರಿಯ ಬೇಸರದ ಜಡಜಗತ್ತಿನಿಂದ, ಯಾವುದೋ ಹೊಸ ಲೋಕಕ್ಕೆ, ಹರ್ಷದ ಜಗತ್ತಿಗೆ ಬಂದಂತಿತ್ತು ನನ್ನ ಪಾಲಿಗೆ. ನನ್ನ ಸುತ್ತ ಮುತ್ತ ಓಡಾಡುತ್ತಿದ್ದವರೆಲ್ಲರೂ ಮನುಷ್ಯರೇ ಆದರೂ, ಅವರು, ಆ ಹಳೆಯ ಆ ಬಳಕೆಯ ಲೋಕದವರಿದ್ದಂತಿರಲಿಲ್ಲ. ಕನ್ನಂಬಾಡಿಯ ಉದ್ಯಾನದ ರಮ್ಯ ವಾತಾವರಣ ಅವರಿಗೂ ಏನೋ ಬಗೆಯ ಹೊಸತನವನ್ನು ಕಲ್ಪಿಸಿತ್ತು. ಗಾಳಿಯು ತುಂಬಾ ಹರ್ಷವಿತ್ತು, ನಗೆಯಿತ್ತು, ಹೊಸತನವಿತ್ತು, ಅಲ್ಲಿ ನೆರೆದ ಜನರೆಲ್ಲರ ಹರ್ಷದಂತೆ. ಕಾಲಕೆಳಗೆ ವಿವಿಧಾಕಾರದ ಕಾರಂಜಿಗಳು ಪುಟಿಯುತ್ತಿದ್ದವು.

ಹಾಗೇ ಮೈಮರೆತು ಅದನ್ನು ನೋಡುತ್ತಾ ಕುಳಿತಿದ್ದೆ. ನೋಡ ನೋಡುತ್ತಾ ಮೂಕವೇದನೆಯೊಂದು ನಿಧಾನವಾಗಿ ನನ್ನೆದೆಯಲ್ಲಿ ಹರಡಲಾರಂಭಿಸಿತು. ಏನು ವೇದನೆ ಎಂದು ನನ್ನನ್ನು ನಾನೇ ಪ್ರಶ್ನಿಸಿಕೊಂಡೆ. ಉತ್ತರ ಬಂದಾಗ ಆ ಜಗತ್ತು ಏಕೋ ಇದ್ದಕ್ಕಿದ್ದ ಹಾಗೆಯೇ ನೀರಸವಾದಂತಾಯಿತು. ಆ ಘಳಿಗೆಯಲ್ಲಿ ಹಾಗೇ ವಾಪಸು ಹೊರಟುಬಿಡಲೇ ಎನಿಸಿತು. ಮರುಗಳಿಗೆಯೇ ನನ್ನ ಮೂರ್ಖತನವನ್ನು ನಾನೇ ಹಳಿದುಕೊಂಡು, ಮನದಲ್ಲಿ ಕೊರೆಯುತ್ತಿದ್ದ ಯಾತನೆಯನ್ನು ಮರೆಯಲು, ಸುತ್ತ ಓಡಾಡುತ್ತಿದ್ದ ಜನಗಳನ್ನು, ವೇಗವಾಗಿ ನುಗ್ಗಿ ಬಂದು ನಿಲ್ಲುತ್ತಿದ್ದ ಕಾರುಗಳನ್ನು ನೋಡುತ್ತಿದ್ದೆ. ಆ ಹೊತ್ತಿನಲ್ಲಿ—

"ಷ್. ಲೀಲಾ, ಹೂವಿನ ಪಾತಿಯನ್ನು ತುಳಿಯಬಾರದು. ದಾರಿಯಲ್ಲಿ ನಡೆಯಬೇಕು"

—ಎಂದ ಹೆಣ್ಣು ದನಿಯ ಮಾತು ಕೇಳಿಸಿತು.

ಇದ್ದಕ್ಕಿದ್ದ ಹಾಗೇ ಕಾರಂಜಿಗಳಲ್ಲಿ ನೂರು ಬಣ್ಣದ ಬೆಳಕು ಚಿಮ್ಮಿದಂತಾಯಿತು. ಇಷ್ಟು ಬೇಗ ಎಂದು ನೋಡಿದೆ. ಇಲ್ಲ – ಕಾರಂಜಿಯ ದೀಪಗಳಿನ್ನೂ ಹೊತ್ತಿರಲಿಲ್ಲ.

ಆ ಧ್ವನಿ ನನ್ನ ಹೃದಯದಲ್ಲಷ್ಟು ದೀಪಗಳನ್ನು ಹೊತ್ತಿಸಿತ್ತು – ಕಾತ್ಯಾಯನಿಯ ಧ್ವನಿ.

ತಟಕ್ಕನೆ ಆ ಧ್ವನಿ ಬಂದತ್ತ ತಿರುಗಿ ನೋಡಿದೆ – ಕಾತ್ಯಾಯನಿಯೇ. ನನ್ನ ಕಾತ್ಯಾಯನಿ !

ಎರಡೂ ಕೈಗಳಲ್ಲಿ ಇಬ್ಬರು ಹುಡುಗರನ್ನು – ಒಬ್ಬ ಆರು ವರ್ಷದ

ಹೆಣ್ಣು ಮಗು – ಹಿಡಿದುಕೊಂಡು ಬರುತ್ತಿದ್ದಳು.

ಕಪ್ಪು ರೇಶಿಮೆಯ ಸೀರೆಯುಟ್ಟು, ಅಚ್ಚ ಬಿಳುಪು ಸ್ಯಾಟಿನ್ ರವಿಕೆ ತೊಟ್ಟಿದ್ದಳು ಕಾತ್ಯಾಯನಿ. ಯಾವ ಜರಿಯ ಆಡಂಬರವೂ ಇಲ್ಲದ ಆ ಉಡುಪಿಗೆ, ಅವಳ ಮೈ ಸೋಂಕಿನಿಂದ ಏನೋ ವೈಭವ ಬಂದಂತಿತ್ತು. ಕೋಲುಮುಖ, ನೀಳವಾದ ನಾಸಿಕ, ಗುಲಾಬಿಯ ಬಣ್ಣದ ನಸು ಅರಳಿದ ಮಾಟವಾದ ತುಟಿ, ಕೊಂಚ ಉಬ್ಬಿದ ಗಲ್ಲ, ಸಣ್ಣ ಕುಂಕುಮದ ಅಲಂಕಾರ ಪಡೆದ ಅಗಲವಾದ ಹಣೆ, ಮಂದವಾಗಿ ಬೀಸುವ ತಂಗಾಳಿಯಲ್ಲಿರಳುವ ಕೂದಲುಗಳು—

ತೆಳುವಾಗಿ, ಎತ್ತರವಾಗಿದ್ದ ಕಾತ್ಯಾಯನಿ, ಮೋಡದ ಮೇಲೆ ಜಾರುವ ದೇವಕನ್ನಿಕೆಯಂತೆ ನಡೆದು ಬರುತ್ತಿದ್ದಳು. ಅವಳಿಗಾಗಿಯೇ ಆ ಉದ್ಯಾನ ಅರಳಿದಂತಿತ್ತು.

ಎಷ್ಟು ಹೊತ್ತು ಹಾಗೆ ನೋಡುತ್ತಿದ್ದೆನೊ, ಬಳಿಕ ನನ್ನ ನೋಟದ ಅನಾಗರೀಕತನ ನನಗೇ ಅರಿವಾಗಿ, ತಲೆ ತಗ್ಗಿಸಿದೆ.

ನಾನು, ಬಿಟ್ಟ ಕಣ್ಣು ಬಿಟ್ಟ ಹಾಗೇ ಪವಾಡವನ್ನು ಕಂಡ ಮುಗ್ಧ ಶಿಶುವಿನಂತೆ ಅವಳತ್ತ ನೋಡುತ್ತಿದ್ದಾಗಲೇ ಅವಳೂ ನನ್ನನ್ನು ನೋಡಿರಬೇಕು. ಎಂತಲೇ ಅವಳು ನನ್ನ ಬಳಿ ಬಂದಾಗ ಮಂದಹಾಸದ ಮಂದಾರಕುಸುಮ ಅವಳ ತುಟಿಯಂಚಿನಲ್ಲಿ ಅರಳಿತ್ತು.

" ಹಲೋ ರಾಜಶೇಖರ್, ಬಹಳ ಅನಿರೀಕ್ಷಿತವಾದ ಭೇಟಿ ಇದು."

—ಎಂದು ಕಾತ್ಯಾಯನೀಯೇ ಮೊದಲು ಮಾತನಾಡಿಸಿದಳು.

ಅನಿರೀಕ್ಷಿತ, ನಿಜ, ಅನಿರೀಕ್ಷಿತ. ಸ್ವರ್ಗವೇ ಬಳಿಗಿಳಿದು ಬರಬಹುದೆಂದು ಯಾರುತಾನೇ ನಿರೀಕ್ಷಿಸಲು ಸಾಧ್ಯ? ಅವಳು ಆ ಮಾತನ್ನು ಹೇಳಿದ ಹೊತ್ತಿನಲ್ಲಿಯೇ, ತಟಕ್ಕನೆ ಹಿಂದೊಂದು ದಿನ ಸದಾಶಿವಪ್ಪ ಹೇಳಿದ ಮಾತು ನೆನಪಾಯಿತು—

' ಕಾತ್ಯಾಯನಿ – ದೂರದಿಂದ ಬೆಂಕಿಯುರಿ, ಹತ್ತಿರ ಹೋದರೆ ಹಿಮ ಗಡ್ಡೆ.'

ಸ್ವರ್ಗ ಬಳಿಸಾರಿದೆಯೆಂದು ತಡೆದರೆ ಜ್ವಾಲಾಮುಖಿಯ ಬಾಯಲ್ಲೇ ಕಾಲಿಟ್ಟಂತಾದರೆ—

ಆ ಭಯ ನನ್ನೆದೆಯಲ್ಲಿ ಹುಚ್ಚಾಗಿ ಕುಣಿಯುತ್ತಿದ್ದ ಉತ್ಸಾಹಕ್ಕೆ ಕಡಿವಾಣ ಬಿಗಿಯಿತು. ಎಂತಲೇ ಹೆಚ್ಚಿನ ಉತ್ಸಾಹವನ್ನೂ ತೋರಗೊಡದೆ—

" ಏಕೋ ತುಂಬಾ ಬೇಸರವಾಯಿತು. ಬಂದೆ " ಎಂದೆ.

" ಒಂಟಿಯಾಗಿ ಬೃಂದಾವನದ ಆನಂದವನ್ನು ಅನುಭವಿಸಲೆಂದೇನೊ ?"

" ಹೂ, ಹಾಗೇ ಎನ್ನಬಹುದು."

ಊಹೂ—ಆ ಮಾತಾಡಬಾರದಾಗಿತ್ತು. ಆದರೆ ಆಡಿಬಿಟ್ಟಿದ್ದೆ.

" ನಾನು ಕಣ್ಣಿಗೆ ಬಿದ್ದುದು ಹಾಗಾದರೆ ನಿಮ್ಮ ಆನಂದಕ್ಕೆ ಭಂಗ ಬಂದಿತೇನೋ ? "

—ಕಾತ್ಯಾಯನಿ ಕೇಳಿದಳು, ಎಲ್ಲೋ ನೋಡುತ್ತಾ.

' ಕಾತ್ಯಾಯನಿ, ಕಾತ್ಯಾಯಿನಿ, ನೀನು ಈ ಮಾತು ಕೇಳುವುದೇ ? ಆನಂದವೇ — ನೀನೇ ನಾನು ಆನಂದಕ್ಕೆ ಭಂಗವೆಂದು ಕೇಳುವುದೇ ? ಏಕೆ ಈ ಎದೆ ಇರಿವ ಮಾತು ? ' ಎಂದು ನನ್ನ ಹೃದಯ ಹಲುಬಿತು.

ನನ್ನ ಹೃದಯದ ಮಾತು ಕಣ್ಣ ನೋಟದ ಮೂಲಕ ಕಾತ್ಯಾಯನಿಗೆ ಅರಿವಾಗಿರಬೇಕು. ಏನೋ ತುಂಟತನದ ನಗು ಅವಳ ಕಣ್ಣಲ್ಲಿ ಸುಳಿಯಿತು.

"ನೋಡಿ—ನಿರ್ಭಯವಾಗಿ ಹೇಳಿ. ನಮ್ಮಿಂದ ನಿಮ್ಮ ಆನಂದಕ್ಕೆ ಭಂಗ ಬರುವುದಾದರೆ ನಮ್ಮ ದಾರಿ ಹಿಡಿದು ಹೋಗುತ್ತೇವೆ. ಲೀಲಾ - ನಡಿ ಹೋಗೋಣ. ಶೇಖರ್ - ಅವರಿಗೆ ' ಗುಡ್ ಈವಿನಿಂಗ್ ' ಹೇಳು "

—ಎಂದು ಅಲ್ಲಿಂದ ಹೊರಡಲು ಅನುವಾದಂತೆಯೇ ಹೇಳಿದಳು ಕಾತ್ಯಾಯನಿ.

'ಕಾತ್ಯಾಯನಿ, ಹೋಗಬೇಡ, ಹೋಗಬೇಡ' ಎಂದು ನನ್ನೆದೆ ಚೀರಿತು. ಆದರೆ ನಾಲಗೆ ಆ ಮಾತನ್ನು ನುಡಿಯಲು ನಿರಾಕರಿಸಿತು ಏನೂ ಮಾತನಾಡದಿದ್ದರೆ ಹೋಗಿಯೇಬಿಡುವಳೇನೋ ಎಂದು ಹೆದರಿ, ಎಲ್ಲೋ ಅವಿತುಕೊಳ್ಳಲೆತ್ನಿಸುತ್ತಿದ್ದ ಧೈರ್ಯವನ್ನು ಎಳತಂದು—

" ನೀವಿದ್ದರೆ ನನ್ನ ಆನಂದಕ್ಕೆ ಭಂಗವೇ? ಊಹೂ. ಆ ಆನಂದ ಮತ್ತಷ್ಟು ಸವಿಯಾಗುತ್ತದೆ. ಆದರೆ ನಿಮಗೆ ಮತ್ತಾರಾದರೂ ಕಾದಿರಬಹುದು "—ಎಂದೆ.

ನಾನು ಆಡಿದ ಆ ಮಾತು ಕೇಳಿ ಅವಳ ಮುಖದಲ್ಲಿ ಎಲ್ಲಿ ಸಿಡಿಗೆದರುವುದೋ ಎಂದು ಹೆದರಿದ್ದೆ ನಾನು. ಹಾಗಾಗಲಿಲ್ಲ. ಅದಕ್ಕೆ ಪ್ರತಿಯಾಗಿ ಏನೋ ಭಾವನೆ ಹರಿದು ಅವಳ ಮುಖ ಮೃದುವಾಯಿತು. ಸೊಬಗುಳಿದು, ಕಾವು ಮಾತ್ರ ಅಳಿದ ಸಂಜೆಯಂತಿತ್ತು ಅವಳ ಮೊಗ.

" ನನಗಾಗಿ ಯಾರೂ ಕಾಯುತ್ತಿಲ್ಲ. ನನಗೂ ಬೇಸರವಾಗಿ ಅಣ್ಣನ ಮಕ್ಕಳನ್ನು ಕರೆದುಕೊಂಡು ಬಂದೆ. ನೀವೂ ಯಾರಿಗಾದರೂ ಕಾಯುತ್ತಿಲ್ಲವಾದರೆ, ಬನ್ನಿ ಹಾಗೇ ಕೆಳಗಿಳಿದು ನದಿಯ ದಂಡೆಯ ಬಳಿಗೆ ಹೋಗೋಣ "

—ಕಾತ್ಯಾಯನಿ ಹೇಳಿದಳು.

ಕಾರಂಜಿಯ ಬದಿಯ ತುರಾಯಿ ಹೂವಿನ ಮರಗಳ ಸಾಲು ದಾರಿಯಲ್ಲಿ

ಳಿದು ನದಿಯ ದಂಡೆಯತ್ತ ನಡೆದವು. ನನಗೆ ಅವಳೊಂದಿಗೆ ಮಾತಾಡ ಬೇಕೆಂದಿತ್ತು. ಆದರೆ ಏನು ಮಾತಾಡುವುದು ? ಆಕೆಯೂ ಮಾತಿಗೆ ಹುಡುಕು ತ್ತಿದ್ದಂತಿತ್ತು. ಅಷ್ಟು ದೂರ ಸುಮ್ಮನೆ ನಡೆದ ಮೇಲೆ, ಕಾತ್ಯಾಯನಿಯೇ ಕೇಳಿದಳು—

" ನಿಮ್ಮ ಊರಿನಿಂದ ಎಂದು ಬಂದಿರಿ ? "

" ಬಂದು ನಾಲ್ಕೈದು ದಿನವಾಯಿತು. ನಿಮ್ಮ ಕಣ್ಣಿಗೆ ಬೀಳಲಿಲ್ಲ ವೇನೋ ? "

" ಕಂಡಿರಿ "

" ಮತ್ತೆ ? "

" ನೀವು, ಅಂದರೆ ನಿಮ್ಮ ದೇಹ ಬಂದಿದ್ದರೂ ಹೃದಯವನ್ನು ಮಾತ್ರ ಅಲ್ಲೇ ಬಿಟ್ಟು ಬಂದಿತ್ತು. ಏನೋ ಒಂದು ತರಹಾ ಇದ್ದಿರಿ. ಜೀವನದಲ್ಲಿ ಅದು ಬಹಳ ದೊಡ್ಡ ಆಘಾತ. ಎಂಥಾ ಆಘಾತವೆಂದು ನಾನೂ ಬಲ್ಲೆ. ನಿಮ್ಮ ದುಃಖವನ್ನು ನಾನೂ ಅನುಭವಿಸಿದೇನೆ. ಆದರೆ ಇದು ಒಂದು ದೊಡ್ಡ ವಿಚಿತ್ರ ರಾಜಶೇಖರ್—"

ಕಾತ್ಯಾಯನಿ ಎತ್ತಲೋ ನೋಡುತ್ತಾ ಹೇಳಿದಳು.

" ಅತ್ಯಂತ ಆನಂದದ ಸಮಯದಲ್ಲಿ ಅತ್ಯಂತ ದುಃಖದ ಮಾತನ್ನು ನೆನಸಿಕೊಳ್ಳುವುದೇ ? ಈ ಸುಖದ ಹೊತ್ತಿನಲ್ಲಿ ಆ ಮಾತನ್ನೇಕೆ ನೆನಪಿಸುತ್ತಿ. ಬಿಡು ಅದನ್ನು "

ಎಂದು ಹೇಳಬೇಕೆನಿಸಿತ್ತು ನನಗೆ. ಆದರೆ ಅದೇ ನಮ್ಮಿಬ್ಬರ ಮಾತಿನ ನಡುವಿನ ಕೊಂಡಿಯಾದುದರಿಂದ, ಅದನ್ನು ಕಡಿಯಲಾರದೆ ಅದೇ ಮಾತನ್ನೇ ಮುಂದುವರಿಸಿ ಕೇಳಿದೆ—

" ಯಾವುದು ವಿಚಿತ್ರ ?"

" ಒಮ್ಮೊಮ್ಮೆ ಯಾರನ್ನಾದರೂ ನಾವು ತುಂಬಾ ಪ್ರೀತಿಸಿದಾಗ, ಆ ಜೀವ ನಮ್ಮ ಪಾಲಿಗೆ ಇಲ್ಲವಾದರೆ, ನಾವು ಉಳಿಯುವುದೇ ಇಲ್ಲ ನಾವೇನು, ಜಗತ್ತೇ ಉಳಿಯುವುದಿಲ್ಲ ಎಂದುಕೊಳ್ಳುತ್ತಿರುತ್ತೇವೆ. ಆದರೆ ಆಗಬಾರದುದು ಆದಾಗ, ಬರಬಾರದ ಅಗಲಿಕೆ ಬಂದಾಗ, ಅಷ್ಟು ಹೊತ್ತು ಒದ್ದಾಡುತ್ತೇವೆ. ಆಯಿತು – ಬಳಿಕ, ಮೇಲಿನಿಂದ ಬಿದ್ದ ಕಲ್ಲನ್ನು ನುಂಗಿದ ನೀರಿನಂತೆ ಎಂದಿ ನಂತೆಯೇ ನಮ್ಮ ಜೀವನ ಹರಿಯಲಾರಂಭಿಸುತ್ತದೆ. ನಮ್ಮ ಭಾವನೆ-ಜೀವ ನಗಳ ನಡುವೆ ವಾಸ್ತವತೆ ಸೃಷ್ಟಿಸುವ ಈ ಅಂತರ ವಿಚಿತ್ರವೆನಿಸುವುದಿಲ್ಲವೆ ನಿಮಗೆ ? ಕಳೆದುಕೊಂಡ ನನ್ನ ತಂದೆಯನ್ನು ನೆನೆಸಿಕೊಂಡಾಗ, ಮತ್ತೆ

ಮತ್ತೆ ನನ್ನಲ್ಲಿ ಇದೇ ಭಾವನೆ ಮೂಡುತ್ತದೆ. ಈ ಮರವೇ ನಮ್ಮ ಜೀವನದ ಆಧಾರ ಶಕ್ತಿಯೇನೋ ಅನಿಸುತ್ತದೆ. ಅಲ್ಲವೇ ?"

ಮೌನವಾಗಿ ನಾನು ಆಕೆಯಾಡಿದ ಮಾತುಗಳನ್ನು ಆಲಿಸಿದೆ. ಎಷ್ಟು ಕಠೋರವಾದ ಮಾತು. ಎಷ್ಟು ಕಠೋರವೋ ಅಷ್ಟೇ ಸತ್ಯ ನಾನು ತಾಯಿಯನ್ನು ಕಳೆದುಕೊಂಡವನು ಮಾತ್ರ. ಆದರೆ ಕಾತ್ಯಾಯನಿ ತಾಯಿತಂದೆಗಳಿಬ್ಬರನ್ನೂ ಕಳೆದುಕೊಂಡವಳು. ಆ ಮಾತನ್ನರಿತು ನನ್ನದೆಯನ್ನು ಇರಿದಂತಾಯಿತು. ಅವಳ ಮಾತುಗಳನ್ನೇ ಮೆಲುಕು ಹಾಕುತ್ತಾ ಹೆಜ್ಜೆ ಹಾಕಿದೆ. ನಾನು ಸುಮ್ಮನಿದ್ದುದನ್ನು ಕಂಡು ಆಕೆಯೇ ಮತ್ತೆ ಕೇಳಿದಳು :

" ಏಕೆ ? ನನ್ನ ಮಾತು ಸರಿ ಎಂದು ತೋರುವುದಿಲ್ಲವೇ ನಿಮಗೆ ?"

" ನಿಜ ಹೇಳಲೇ ? "

" ಹೇಳಿ – ನಿಜಹೇಳಲು ಹಿಂಜರಿಯುವುದೇಕೆ ? "

" ನಿಜ ಹೇಳುವುದಾದರೆ – ನಾನು ಯಾವ ವಿಷಯದ ಬಗ್ಗೆಯೂ ಅಷ್ಟು ಯೋಚಿಸಿಲ್ಲ "

" ಯಾವುದರ ವಿಷಯವಾಗಿಯೂ ಯೋಚಿಸಿಯೇ ಇಲ್ಲವೇ ?"

ನನ್ನ ಮಾತನ್ನು ನಂಬಲಾರದವಳಂತೆ ಕೇಳಿದಳು ಕಾತ್ಯಾಯನಿ.

" ಯೋಚಿಸದೆಯೇ ಇರುವುದು ಸಾಧ್ಯವೇ ? ಯೋಚಿಸಿದ್ದೇನೆ. ಆದರೆ ನಿಮ್ಮಷ್ಟು ಆಳವಾಗಿ ಯೋಚಿಸಿಲ್ಲ ! "

" ಹಾಗಾದರೆ ಉಳಿದೆಲ್ಲ ಯೋಚನೆಗಳನ್ನೂ ಮುಳುಗಿಸುವಂತಹ ಮತ್ತಾವುದೋ ನಿಮ್ಮ ಮನಸ್ಸನ್ನು ಆವರಿಸಿರಬೇಕು. ಯಾವುದೋ ಅಥವಾ ಯಾರೋ ?"

ಆ ಮಾತಿನ ಕಡೆಯನ್ನು ಮುಟ್ಟುವಾಗ, ತಟಕ್ಕನೆ ಮಂದಹಾಸ ಅರಳಿತು ಅವಳ ಮೊಗದಲ್ಲಿ ಮಂದಹಾಸ ಮೂಡಿದಾಗ ಅವಳ ಮುಖ ಎಷ್ಟು ಸುಂದರವಾಗಿ ಕಾಣುತ್ತದೆ ! ಆ ಮಾತಿಗೆ ಏನು ಉತ್ತರ ಹೇಳಲಿ ?

" ಏಕೆ ಮತ್ತೆ ಸುಮ್ಮನಾಗಿಬಿಟ್ಟಿರಿ ? ಈ ಬಾರಿಯ ಪ್ರಶ್ನೆಗೆ ಸತ್ಯವಾದ ಉತ್ತರ ಹೇಳಲು ನಿಜವಾಗಿಯೂ ನಿಮಗೆ ಹೆದರಿಕೆಯಾಗುತ್ತಿರಬೇಕು "

—ಕೆಣಕಿ ಕೇಳಿದಳು ಕಾತ್ಯಾಯನಿ. ಅವಳ ಮಾತಿನಲ್ಲಿ ಕೆಣಕುವ ಕೊಂಕುತನವಿರುವಷ್ಟೇ ಉತ್ತರ ಅರಿಯುವ ಆತುರವೂ ಇದ್ದಂತೆ ಇತ್ತು.

ಹೇಳಲೇ, ಉತ್ತರವನ್ನು ಹೇಳಿಯೇಬಿಡಲೇ – ಅವಳ ಪ್ರಶ್ನೆಗೆ ? ಯೋಚಿಸಿ, ಯೋಚಿಸಿ ಹೇಳಿದೆ—

" ಸತ್ಯ ಹೇಳಬೇಕೆಂದರೆ – ಹೆದರಿಕೆಯೇ ?

" ಏಕೆ ? "

" ಮತ್ತೆ ಎಲ್ಲಿ ನಿಮ್ಮ ಕೈಯಲ್ಲಿ ಬೈಸಿಕೊಳ್ಳಬೇಕೋ ಎಂದು ! "

" ಅಂದರೆ – ನನ್ನ ಕೈಲಿ ಬೈಸಿಕೊಳ್ಳಲು ಅಷ್ಟು ಹೆದರಿಕೆಯೇ ? "

" ಅಹುದು."

" ಏಕೆ ? "

" ನಿಮ್ಮ ಪ್ರಶ್ನೆಗೆ ಉತ್ತರ ಹೇಳುವ ಮೊದಲು ನನ್ನ ಪ್ರಶ್ನೆಯೊಂದಕ್ಕೆ ನೀವು ಉತ್ತರ ಕೊಡುತ್ತೀರಾ ? "

" ಕೇಳಿ ?"

" ನೀವು ನನಗೆ ಕೊಟ್ಟ ಹೆಸರು ನಿಮಗೇ ನೆನಪಿದೆ ತಾನೆ ?"

" ಯಾವುದು ?"

" ಆ ಮಾತನ್ನು ನನ್ನ ಬಾಯಲ್ಲೇ ಹೊರಡಿಸಬೇಕೇ "

" ನಿಜ. ಯಾವ ಮಾತು ಯಾರ ಬಾಯಲ್ಲಿ ಬರಬೇಕೋ ಅವರ ಬಾಯಲ್ಲಿ ಬಂದರೆ ಸೊಗಸು."

ನಗುತ್ತಾ ಹೇಳಿದಳು ಕಾತ್ಯಾಯನಿ. ಅವಳ ನಗೆ, ಅವಳ ಮುಡಿಯಲ್ಲಿ ತೂಗುತ್ತಿದ್ದ ಜಾಜಿಯ ಹೂವಿನ ನವಿರಾದ ವಾಸನೆಯಂತಿತ್ತು.

" ಒಂದು ದಿನ....ಒಂದು ದಿನ....ನೀವು....ನನ್ನನ್ನು....ಲೋ ೯ ಫ ರ್ ಎಂದು ಕರೆದಿದ್ದಿ ರಿ."

ನನ್ನ ಮಾತು ಕೇಳಿದವಳೇ ಕಾತ್ಯಾಯನಿ ಗಟ್ಟಿಯಾಗಿ ನಗಲಾರಂಭಿಸಿದಳು. ಸ್ವಲ್ಪಹೊತ್ತು ನಗುತ್ತಿದ್ದು ಬಳಿಕ ನಗುವನ್ನು ತಡೆದು, ತೋರಿಕೆಯ ಗಂಭೀರತೆಯನ್ನು ನಟಿಸುತ್ತಾ—

" ಮಾತು ಬಹಳ ಅಪಾಯದ ಹಾದಿಯಲ್ಲಿ ಮುಂದುವರಿಯುತ್ತಿದೆ. ಅದರ ಚರ್ಚೆಯನ್ನು ಕೊಂಚ ಮುಂದಕ್ಕೆ ಹಾಕುವುದು ಮೇಲಲ್ಲವೇ ?"

—ಎಂದಳು ನನ್ನತ್ತ ಚುರುಕಾಗಿ ನೋಡಿ.

" ನೋಡಿ – ಶೇಖರನ ಕೈ ನೀವು ಹಿಡಿದುಕೊಳ್ಳಿ. ಇಬ್ಬರ ಎಳೆತವನ್ನು ನಾನು ಸಹಿಸಲಾರೆ ಜಾರಿಬಿದ್ದು ನಗೆಗೀಡಾಗಬೇಕಾದೀತು "

—ಎಂದಳು.

ನಿಜ. ನಮಗೇನೊ ನಿಧಾನವಾಗಿ ಮಾತಾಡಿಕೊಂಡು ಹೋಗುವುದು ಬೇಕಾಗಿತ್ತು. ಆದರೆ ಆ ಹುಡುಗರ ಉತ್ಸಾಹ, ಅವರ ಕಾಲಿಗೆ ರೆಕ್ಕೆ ಕಟ್ಟಿ ಓಡಿಸುತ್ತಿತ್ತು. ನಮ್ಮ ನಿಧಾನದ ನಡೆ, ಅವರಿಗೆ ತುಂಬಾ ಬೇಸರವಾಗಿರಬೇಕು. ಆದಕ್ಕೇ ಅವರಿಬ್ಬರೂ ಆಕೆಯ ಕೈ ಹಿಡಿದು ತಮ್ಮಷ್ಟೇ ವೇಗವಾಗಿ

ನಡೆಸಲು ಎಳೆಯುತ್ತಿದ್ದರು.

" ಶೇಖರ್ ನೀನು ಅವರ ಕೈ ಹಿಡಿದುಕೋ "

—ಎಂದು ಹೇಳಿದಳು. ಶೇಖರ್ ಅಪರಿಚಿತನಿಗೆ ತನ್ನ ಕೈ ಕೊಡಲು ಹಿಂದೆ ಮುಂದೆ ನೋಡಿದ.

" ಬಾ ಮಗು "

— ಎಂದು ಕರೆದೆ ನಾನು. ಶೇಖರ್ ನನ್ನ ಕರೆಯನ್ನು ನಂಬದೆ ಕಾತ್ಯಾಯನಿಯ ಮುಖ ನೋಡಿದ.

" ಹೋಗು. ಕರೆದರೆ ಹಾಗೆಲ್ಲಾ ಮಾಡಬಾರದು "

—ಎಂದು ಆಕೆಯೇ ಅವನ ಪುಟ್ಟ ಕೈಯನ್ನು ತೆಗೆದು ನನ್ನ ಕೈಯಲ್ಲಿಟ್ಟಳು. ಹಾಗೆ ಮಾಡುವಾಗ ಅವಳ ಕೈ ನನ್ನ ಕೈಗೆ ಸೋಕಿತು. ಅದು ನಿಜವೋ ಭ್ರಮೆಯೋ – ಅಂತು ಅಗತ್ಯವಾದುದಕ್ಕಿಂತ ಹೆಚ್ಚು ಹೊತ್ತು ಅವಳ ಕೈ ನನ್ನ ಕೈಯಲ್ಲಿತ್ತು. ಎಂಥ ಮಾದಕ ಸ್ಪರ್ಶ ಅದು ! ಕೈ ಸೋಕಿದಾಗ ನಾನವಳ ಮುಖ ನೋಡಲೆತ್ನಿಸಿದೆ. ಆದರೆ ಅವಳ ಮುಖ ಬೇರೆ ಕಡೆ ತಿರುಗಿತ್ತು.

ಆ ಕೈಸೋಂಕಿನ ಮಧುರ ಅನುಭವಕ್ಕೆ ಸೋತಂತೆ ಮಾತು ನಿಂತು ಹೋಯಿತು. ಮೌನವಾಗಿ ನಡೆದು, ನದಿ, ಕಾರಂಜಿಗಳ ನಡುವಿನ ದಂಡೆಯ ಮೇಲೆ, ಮರದ ಕೆಳಗಿನ ಹುಲ್ಲಿನಮೇಲೆ ಕುಳಿತುಕೊಂಡೆವು.

ಆಗತಾನೇ ಕತ್ತಲಾಗಿ, ಕಾರಂಜಿಯ ದೀಪಗಳು ಹೊತ್ತಿ ಬಣ್ಣ ಬಣ್ಣದ ನೀರು ಚಿಮ್ಮುತ್ತಿತ್ತು. ಅವುಗಳ ನಡುವೆ ನಡೆವ ಜನರ ಮೇಲೆ ಆ ಬಣ್ಣಗಳು ಬಿದ್ದು ಸ್ವಪ್ನಲೋಕದ ಯಾತ್ರಿಕರಂತಿದ್ದರು.

ಹುಡುಗರಿಬ್ಬರೂ ಹತ್ತಿರ ಚಿಲುಮೆಯ ಬಳಿ ನಿಂತು ಬೆಕ್ಕಸ ಬೆರಗಾಗಿ ನೋಡುತ್ತಿದ್ದರು. ನಾವಿಬ್ಬರೂ ಸುಮ್ಮನೆ ಕುಳಿತಿದ್ದೆವು. ನಮ್ಮಿಬ್ಬರ ನಡುವೆ ಎರಡು ಮೊಳದಷ್ಟು ಅಂತರವಿತ್ತು. ಆ ಅಲ್ಪ ಅಂತರವೇ ಧ್ರುವಗಳ ನಡುವಿನ ಅಂತರವಿದ್ದಂತಿತ್ತು ನನಗೆ. ನಮ್ಮೀರ್ವರ ನಡುವಿನ ಈ ಅಂತರ ಎಂದೂ ತೊಲಗುವುದೇ ಇಲ್ಲವೇ ? ಹಾಗೇ ಆ ಅರೆಗತ್ತಲಿನಲ್ಲಿ ಕುಳಿತ ಅವಳನ್ನು ನೋಡಿದೆ. ಹುಲ್ಲೆಸಳನ್ನು ಕಡಿಯುತ್ತಾ ಮೈಯನ್ನು ಕೊಂಚ ವಾಲಿಸಿ, ಏನನ್ನೋ ನೋಡುತ್ತಾ ಕುಳಿತಿದ್ದಳು ಕಾತ್ಯಾಯನಿ. ನನಗೂ, ಮಾತಿಗಿಂತಲೂ ಆ ನೋಟವೇ ಪ್ರಿಯವಾಗಿತ್ತು.

" ಏಕೆ – ನಿಮ್ಮ ಪ್ರಶ್ನೆಯನ್ನು ಕೇಳುವುದಿಲ್ಲವೇ ?"

—ಇದ್ದಕ್ಕಿದ್ದ ಹಾಗೇ ಕೇಳಿದಳು ಕಾತ್ಯಾಯನಿ, ಇದ್ದಕ್ಕಿದ್ದ ಹಾಗೆ

ಬಂದ ಆ ಪ್ರಶ್ನೆಯನ್ನು ಕೇಳಿ ನನಗೆ ಗಾಬರಿಯಾಯಿತು.

" ಯಾವ ಪ್ರಶ್ನೆ ?"

—ತಬ್ಬಿಬ್ಬಲಾಗಿ ಕೇಳಿದೆ ನಾನು.

" ಇಷ್ಟು ಬೇಗ ಮರೆತೇಹೋಯಿತೆ? ಏನೋ ಪ್ರಶ್ನೆ ಕೇಳಬೇಕು ಎಂದು ನೀವೇ ಹೇಳಿದಿರಲ್ಲಾ "

ಆಕೆ ನನಗೆ ನೆನಪಾಯಿತು — ನಾನವಳನ್ನು ಕೇಳಬೇಕೆಂದಿದ್ದ ಪ್ರಶ್ನೆ. ಆದರೆ ಕೇಳಬೇಕೇ ?

" ನಿಜ. ನೆನಪಾಯಿತು. ಆದರೆ ಎಷ್ಟೋಬಾರಿ ಉತ್ತರ ತಿಳಿದುಕೊಳ್ಳದಿರುವುದೂ ಮೇಲೆ ಎಂದು ತೋರುತ್ತದೆ."

" ಏಕೆ ?"

" ಸ್ವಪ್ನದ ಬೆಳದಿಂಗಳಿನಲ್ಲಿ ವಾಸ್ತವಿಕತೆಯ ಸಿಡಿಲು ಸಿಡಿದರೆ–ಹಾಗಾಗುವುದಕ್ಕಿಂತ ಸ್ವಪ್ನವೇ ಮೇಲಲ್ಲವೇ ?"

" ಹಾಗಾದರೆ ಬೇಡ. ಆದರೆ........"

" ಏನು ಆದರೆ. . .. "

" ವಾಸ್ತವಿಕತೆ ಸಿಡಿಲಾಗದೆ... .. ... ... ... ಬೆಳದಿಂಗಳಿನಲ್ಲಿ ಹರಿವ ಪರಿಮಳದ ಗಾಳಿಯಾದರೆ... "

—ಎತ್ತಲೋ ನೋಡುತ್ತಾ ಕಣ್ಣುಮುಚ್ಚಿ ಎಳೆದೆಳೆದು ಹೇಳಿದಳು ಕಾತ್ಯಾಯಿನಿ. ಆದೂ ಎಷ್ಟು ಮೃದುವಾಗಿ, ಎಷ್ಟು ಮಾದಕವಾಗಿ, ಏಕೋ . ಏಕೋ.. ಆ ಮಾತು ಕೇಳಿದ ಬಳಿಕ ನನ್ನೆಲೆಯಲ್ಲಿ ಭೋರ್ಗರೆಯುತ್ತಿದ್ದ ಭಾವನೆಯನ್ನು ಹತ್ತಿಡಲಾರದೆ ಹೋದೆ. ಆ ಉದ್ವೇಗದಲ್ಲಿ ಬೇರೇನೂ ಹೇಳಲು ತೋಚದೆ—

' ಕಾತ್ಯಾಯನೀ ' ಎಂದೆ, ಬಿಗಿದ ಪಿಸುದನಿಯಲ್ಲಿ.

ನನ್ನ ಕೂಗು ಕೇಳಿ ನಿಧಾನವಾಗಿ ಕಣ್ಣರಳಿಸಿ ನನ್ನತ್ತ ನೋಡಿದಳು ಕಾತ್ಯಾಯನಿ. ನನ್ನ ಕಾತ್ಯಾಯನಿ.

" ಈಗ ನೆನಪು ಬಂದಿತೇ ನನ್ನ ಹೆಸರು."

" ಊಹೂ – ಎಂದೆಂದೂ ನನ್ನ ಹೃದಯದಲ್ಲೇ ಇತ್ತು ಅದು."

" ಈಗಲೂ ನೆನಪಿದೆಯೇ ? "

" ಅದು ಎಂದೆಂದೂ ಮರೆಯಲಾಗದ ಹೆಸರು."

" ನೆನಪಿದ್ದರೆ ಮತ್ತೊಮ್ಮೆ ಹೇಳಿ ನೋಡೋಣ."

" ಕಾತ್ಯಾಯನೀ ! "

ನಾಲಗೆ ಒಂದು ಬಾರಿ ನುಡಿಯಿತು , ಹೃದಯ ಸಾವಿರ ಸಾವಿರ ಬಾರಿ. ಎದೆಯ ಮಿಡಿತಕ್ಕೊಂದು ಬಾರಿ ನುಡಿಯುತ್ತಿತ್ತು—

ಕಾತ್ಯಾಯನೀ, ಕಾತ್ಯಾಯನೀೀ, ಕಾತ್ಯಾಯನೀೀೀ ...

ಅವಳ ನೀಳವಾದ, ಮೃದುವಾದ ಕೈಬೆರಳುಗಳು ನನ್ನ ಮುಷ್ಟಿಯಲ್ಲಡಗಿ ಕಂಪಿಸುತ್ತಿದ್ದವು. ಅವಳ ಮುಡಿಯ ಜಾಜಿಯ ಕಂಪು ನನ್ನೆದೆಯಲ್ಲಿ ಉರಿಯನ್ನು ಕೆರಳಿಸುತ್ತಿತ್ತು.

ಹೀಗೇ ಹೀಗೇ ಕಾಲದ ಅಲೆಗಳ ಮೇಲೆ, ಗಾಳಿಯಲೆಯ ಮೇಲೆ ತೇಲುವ ಪರಿಮಳದಂತೆ, ತೇಲಿ, ತೇಲುತ್ತಲೇ ಕರಗಿಹೋಗಬಾರದೇಕೆ ?

ನದಿಯ ಹೃದಯದೊಲವಿನಂತೆ ಹತ್ತಾಳುದ್ದ ಚಿಮ್ಮುತ್ತಿತ್ತು ಗುಲಾಬಿಯ ಬಣ್ಣದ ನೀರು. ಅಲ್ಲೊಂದು ಕಡೆ ಹಸಿರು ಜಲಪಾತವಾಗಿ ಧುಮುಕಿ, ಇಲ್ಲಿ ಕೇಸರಿ ಬಣ್ಣದ ಹೂವಾಗಿ ಅರಳಿ, ಅಲ್ಲಿ ಬಣ್ಣ ಒಣ್ಣದ ಚಿಟ್ಟೆಯಂತೆ ಚಿಮ್ಮುತ್ತಿದೆ.

ಬಣ್ಣಬಣ್ಣದ ನೆರಳುಗಳಂತೆ ಚಲಿಸುತ್ತಿದ್ದಾರೆ ಜನರು.

" ಐಸ್ ಕ್ಯಾಂಡೀ ಐಸ್ ಕ್ಯಾಂಡೀೀ "

—ಮಿಠಾಯಿ ಮಾರಾಟಗಾರನ ಕೂಗು ಕನಸನ್ನು ಒಡೆಯಿತು.

" ನನಗೆ ಐಸ್ ಕ್ಯಾಂಡಿ ಅಂಟೀ "

—ಎನ್ನುತ್ತಾ ಆ ಕೂಗು ಕೇಳಿದ ಲೀಲಾ ಚಿಲುಮೆಯತ್ತಲಿಂದ ಓಡಿ ಬಂದಳು, ಅವಳ ಹಿಂದೆಯೇ ಶೇಖರನೂ ಅವರಿಗೆ ಐಸ್ ಕ್ಯಾಂಡಿ ಕೊಡಿಸಲೆಂದು ಕಾತ್ಯಾಯನಿ ನನ್ನ ಮುಷ್ಟಿಯಲ್ಲಿದ್ದ ಕೈಯನ್ನು ಎಳೆದುಕೊಂಡಳು.

" ಓ – ಎಷ್ಟು ಬೇಗ ಮುಗಿಯಿತು "

—ಎಂದೆ.

" ಮುಗಿಯಲಿಲ್ಲ – ಆರಂಭ. ಇದುವರೆಗೂ ನಿಮ್ಮ ಸರದಿಯಾಯಿತು, ಈಗ ಹುಡುಗರ ಸರದಿ. ಡೋನ್ಟ್ ಪುಲ್ ಎ ಲಾಂಗ್ ಫೇಸ್ (ಜೋಲುಮೋರೆ ಮಾಡಬೇಡ). ನಿಮಗೂ ಐಸ್ ಕ್ಯಾಂಡಿ ಬೇಕೇ ? "

—ಕೆಣಕುವಂತೆ ಕೇಳಿದಳು ಕಾತ್ಯಾಯನಿ.

" ಐಸ್ ಕ್ಯಾಂಡಿ ಮಕ್ಕಳಿಗೆ."

" ನಿಮಗೆ ? "

" ಲಿಪ್ ಕ್ಯಾಂಡಿ ! "

" ಅಬ್ಬಾ ! ಅಷ್ಟು ಧೈರ್ಯ ಬಂದುಬಿಟ್ಟಿತೆ ! ಹೋಗಿ – ಮಕ್ಕಳಿಗೆ ಎರಡು ಐಸ್ ಕ್ಯಾಂಡಿ ತಂದುಕೊಡಿ "

—ಎಂದು ಕಾತ್ಯಾಯನಿ ಕೈಚೀಲದಿಂದ ತೆಗೆದು ಎರಡಾಣೆಯನ್ನು ನನ್ನ ಕೈಯಲ್ಲಿಟ್ಟು, ಕೈಯನ್ನು ಮೃದುವಾಗಿ ಹಿಸುಕಿದಳು.

" ಎರಡಾಣೆಗೆ ಎರಡು ಹುಡುಗರಿಗಾಯಿತು. ನನಗೆ ? "

" ನಿಮಗೆ ! ಅಬ್ಬಾ ದುರಾಶೆಯೇ. ಎರಡಾಣೆ ಕೊಡುವಾಗಲೇ ಕೊಟ್ಟೆನಲ್ಲ. ಓಡಿ. ಈಗಲೇ ಅವನು ಬಹಳ ದೂರ ಹೋದ "

—ಎಂದಳು. ಐಸ್‌ಕ್ಯಾಂಡಿ ತರಲು ಹೋದೆ. ನಡೆಯುವುದಕ್ಕಿಂತ ಓಡಬೇಕು ಎನಿಸಿತ್ತು ನನಗೆ.

ನಾನು ಐಸ್‌ಕ್ಯಾಂಡಿಯನ್ನು ತರುವ ವೇಳೆಗೆ ಹುಡುಗರು ಕಾತ್ಯಾಯನಿಯನ್ನು ಸಂಪೂರ್ಣವಾಗಿ ಆಕ್ರಮಿಸಿಬಿಟ್ಟಿದ್ದರು. ಐಸ್‌ಕ್ಯಾಂಡಿ ತಿನ್ನುವಾಗಲೂ ಅವರ ಬಾಯಿಗೆ ಬಿಡುವಿರಲಿಲ್ಲ. ' ಆ ನೀರು ಆ ಬಣ್ಣವೇಕೆ, ಇದು ಈ ಬಣ್ಣವೇಕೆ ? ಅಲ್ಲಿ ನೀರು ಹಾಗೇಕೆ ಹಾರುತ್ತದೆ.'....ಹೀಗೇ....ಸಾವಿರ ಪ್ರಶ್ನೆ ಅವರದು.

ಅವರ ಪ್ರಶ್ನೆಗೆ ಸಮಾಧಾನವಾಗಿ ಉತ್ತರ ಹೇಳುತ್ತಿದ್ದಳು ಕಾತ್ಯಾಯನಿ. ಆದರೆ ಅವಳ ಕಣ್ಣು ನನ್ನನ್ನು ನೋಡಿ ನಗುತ್ತಿದ್ದವು.

ನಾನೇ 'ಹೊರಡೋಣವೇ' ಎಂದು ಕೇಳದಿದ್ದರೆ ಆ ಪ್ರಶ್ನೋತ್ತರ ಹಾಗೇ ನಡೆಯುತ್ತಿತ್ತೋ ಏನೋ.

" ಹೂ. ಹೋಗೋಣ. ಏಳು ಲೀಲಾ. ಶೇಖರ್ – ಅವರ ಕೈ ಹಿಡಿದುಕೊಂಡು ಬರಬೇಕು ನೀನು, ತಿಳಿಯಿತೆ."

—ಎಂದು ಮೇಲೆದ್ದಳು ಕಾತ್ಯಾಯನಿ.

ಎಲ್ಲರೂ ಮೇಲೆದ್ದು ಕಾರಂಜಿಗಳ ನಡುವೆ ನಡೆಯುತ್ತಾ ಹೊರಟೆವು. ಇಕ್ಕಟ್ಟಾದ ದಾರಿಯಲ್ಲಿ ನಡೆಯುವಾಗ ನಮ್ಮಿರ್ವರ ಮೈಗಳು ಸ್ಪರ್ಶವಾಗಿ ಆ ಬಣ್ಣದ ಕಾರಂಜಿ ನನ್ನ ಎದೆಯಲ್ಲೇ ಪುಟಿಯುತ್ತಿತ್ತು.

ಎಲ್ಲೋ ಕನಸಿನಲ್ಲಿದ್ದಂತೆ ನಡೆದು ಉದ್ಯಾನದ ಮೇಲು ಭಾಗವನ್ನು ಸೇರಿದೆವು. ಅಲ್ಲಿಗೆ ಬಂದ ಕೂಡಲೇ ಅಗಲಿಕೆಯ ಹೊತ್ತು ಬಂದುದರಿವಾಗಿ ನನ್ನ ಮುಖ ಪೆಚ್ಚಾಯಿತು.

ಓ – ಎಷ್ಟು ಬೇಗ ಅಗಲಿಕೆ. ಕರುಳಲ್ಲಿ ಅಗಲಿಕೆಯ ಭಾವನೆ ಗರಗಸವನ್ನಾಡಿಸಿತು. ಸುಮ್ಮನೆ ನಿಂತುಬಿಟ್ಟೆ.

" ಮೈಸೂರಿಗೆ ಹೇಗೆ ಹೋಗುತ್ತೀರಿ ?"

—ಕಾತ್ಯಾಯನಿಯೇ ಕೇಳಿದಳು.

" ಬಸ್ಸಿನಲ್ಲಿ. ಬರುವಾಗಲೂ ಹಾಗೇ ಬಂದೆ. ನೀವು ?"

" ಕಾರಿದೆ."

" ಸರಿ. ಹಾಗಾದರೆ ನಾನು ಹೊರಡಲೇ ?"

" ಏಕೆ ? ಕಾರಿನಲ್ಲೇ ಹೋಗೋಣ ಬನ್ನಿ....ಏಕೆ....ಅನುಮಾನಿಸುತ್ತೀರಲ್ಲಾ... ನಿಮ್ಮ ಯೋಚನೆ ನನಗೆ ಗೊತ್ತು ಬನ್ನಿ. ನಮ್ಮ ಅಣ್ಣನನ್ನು ಮೀಟ್ ಮಾಡುವಿರಂತೆ."

" ನಿಮಗೆ ತೊಂದರೆಯಾಗದಿದ್ದರೆ ಸರಿ."

" ತೊಂದರೆ ! ನೀವಾಗಲೇ ನನ್ನ ಬಹಳ ದೊಡ್ಡ ತಲೆ ನೋವಾಗಿದೀರ. ಇನ್ನು ಈ ತೊಂದರೆಯದೇನು ಲೆಕ್ಕ ?"

" ನಿಜವಾಗಿಯೂ – ನಾನಷ್ಟು ದೊಡ್ಡ ತಲೆನೋವೇ ?"

" ತಲೆನೋವು ಅಹುದೋ ಅಲ್ಲವೋ ಗೊತ್ತಿಲ್ಲ. ಅದು ಮುಂದೆ ನೋಡಬೇಕು. ಈಗಂತೂ ಕೈ ನೋವಾಯಿತು. ಬನ್ನಿ, ಹೋಗೋಣ. ಈಗೇಕೆ ಅದರ ಚರ್ಚೆ "

—ಎಂದಳು, ತನ್ನ ಕೈಬೆರಳುಗಳನ್ನು ನೀವಿಕೊಳ್ಳುತ್ತಾ.

ಮತ್ತೆ ಮರುಮಾತನಾಡದೆ ಹೋಗಿ, ಅವರೊಂದಿಗೆ ಕಾರಿನಲ್ಲಿ ಕುಳಿತೆ. ಕಾರು ಮೈಸೂರಿನತ್ತ ಹೊರಟಿತು.

ದಾರಿಯಲ್ಲಿ - ನನಗೆ ನೆನಪಿದ್ದುದೊಂದೇ—

ಕತ್ತಲು ಕವಿದ ಕಾರಿನಲ್ಲಿ ಅವಳ ಕೈ ನನ್ನ ತಲೆಗೂದಲನ್ನು ನೇವರಿಸುತ್ತಿತ್ತು. ಒಮ್ಮೆ, ನಿಜ, ಒಂದೇ ಒಂದು ಬಾರಿ, ಆ ಕೈಯನ್ನು ತೆಗೆದು ನನ್ನ ತುಟಿಗೊತ್ತಿಕೊಂಡೆ. ಆಗ ಕಾತ್ಯಾಯನಿ ಏಕೋ ನಕ್ಕು ಹೇಳಿದಳು—

" ನನಗಿಂತ ನನ್ನ ಕೈ ಭಾಗ್ಯಶಾಲಿ."

೩

ದಿನ ಕಳೆದಂತೆ ನನ್ನ ಕಾತ್ಯಾಯನಿಯ ಪರಿಚಯ ಬೆಳೆಯಿತು.

ಒಂದು ಜೀವನವನ್ನು ಅಪರಿಚಿತನಾಗಿ ದೂರದಿಂದ ನೋಡುವುದಕ್ಕೂ, ಪರಿಚಿತನಾಗಿ ಹತ್ತಿರದಿಂದ ನೋಡುವುದಕ್ಕೂ ಎಷ್ಟು ಅಂತರವಿದೆ. ಆ ಸಾಮೀಪ್ಯ ಬಂದಾಗ, ದೂರದಿಂದ ತೀರಾ ಸಾಮಾನ್ಯವೆಂದು ತೋರುವ ಜೀವನದಲ್ಲೂ ಎಷ್ಟು ವೈವಿಧ್ಯ ಕಾಣುತ್ತದೆ. ಗಂಡು ಹೆಣ್ಣಿನ ವಿಷಯದಲ್ಲಂತೂ ಇದು ಇದ್ದದ್ದೂ ಸತ್ಯ. ಅದರಲ್ಲಿಯೂ ಪ್ರೇಮದ ಸೂಕ್ಷ್ಮದರ್ಶಿನಿಯಿಂದ ನೋಡಿದಾಗ – ಶುದ್ಧ ಗಾಳಿಯ ವರ್ಣದ ಕಿರಣ 'ಪ್ರಿಸಂ' ನಮೂಲಕ ಹಾಯುವಾಗ ಕಾಮನಬಿಲ್ಲಾಗಿ ಒಡೆಯುವಂತಾಗುತ್ತದೆ. ಕೆಲವರು

ಪ್ರೇಮ ಕುರುಡು ಎನ್ನುತ್ತಾರೆ. ಅಲ್ಲ - ನಾನು ಹೇಳುತ್ತೇನೆ - ಪ್ರೇಮದ ದೃಷ್ಟಿ ತುಂಬಾ ಸೂಕ್ಷ್ಮ. ಅದು ಕಾಣಲಾಗದುದನ್ನು ಬೇರಾವುದೂ ಕಾಣಲು ಸಾಧ್ಯವಿಲ್ಲ. ವ್ಯಕ್ತಿಯ ಜೀವನದ ಅತ್ಯಂತ ಸೂಕ್ಷ್ಮ ವಿಚಾರ, ವಿಕಾರಗಳೂ ಕಣ್ಣಿಗೆ ಪ್ರೇಮದ ದೃಷ್ಟಿಬಲ ಬಂದಾಗ ಕಾಣುತ್ತದೆ ವಿಜ್ಞಾನದಿಂದಲೂ ಈ ಬಗೆಯ ಅರಿವು ಬರುವುದು ಸಾಧ್ಯವಿದೆ – ಆದರೆ ಅದು ಯಾಂತ್ರಿಕ ಅರಿವು ; ವೇದಾಂತದಿಂದಲೂ ಬರಬಹುದು — ಅದರವರಲ್ಲಿ ಆತ್ಮೀಯತೆ ಯಿಲ್ಲ. ಆದರೆ ಪ್ರೇಮದ ದೃಷ್ಟಿಯಿಂದ ನೋಡಿದಾಗ ಬರೀ ಒಳ್ಳೆಯದಷ್ಟೇ ಅಲ್ಲ, ಕೆಟ್ಟದೂ ಕಾಣುತ್ತದೆ. ಅಷ್ಟೇ ಅಲ್ಲ, ಒಳ್ಳೆಯದರಷ್ಟೇ ಕೆಟ್ಟದೂ ಮನಸ್ಸಿಗೆ ಪ್ರಿಯವಾಗುತ್ತದೆ. ನಿಜವಾಗಿಯೂ.

ಕಾತ್ಯಾಯನಿಯ ಮೊಗದಲ್ಲಿರುವ ಕೆನ್ನೆಯ ಮೇಲಿನ ಸಣ್ಣ ಕಪ್ಪು ಮಚ್ಚೆ ಸೌಂದರ್ಯ ಶಾಸ್ತ್ರಜ್ಞನ ದೃಷ್ಟಿಯಲ್ಲಿ ಅವಳ ರೂಪದ ದೋಷವೆಂದೇ ಕಾಣಬಹುದು. ಆದರೆ ನನ್ನ ದೃಷ್ಟಿಯಲ್ಲಿ ಅದು ಅವಳ ಸೌಂದರ್ಯದ ಕಲಶ ವೆಂದೇ ತೋರುತ್ತದೆ. ಅವಳ ಮೂಗು ಕೊಂಚ ಸೊಟ್ಟವಾಗಿದ್ದರೂ ಹಾಗೇ ಹೇಳುತ್ತಿದ್ದೆನೊ ಏನೋ. ಆದರೆ ನನ್ನ ಅದೃಷ್ಟ, ಅದರಲ್ಲಿ ಏನೊಂದು ಕಲಂಕವೂ ಇಲ್ಲ ಜಗತ್ತಿನ ಅತ್ಯಂತ ಸುಂದರವಾದ ನಾಸಿಕಗಳಲ್ಲಿ ಅಗ್ರ ಪಂಕ್ತಿಯ ನಾಸಿಕ ಅದು. ಅಲ್ಲವೆನ್ನುವ ಧೀರ ನನ್ನ ಮುಂದೆ ಬರಲಿ.

ಅವಳು ನನ್ನವಳು ಎನ್ನುವುದರಿಂದಲೇ ನನಗೆ ಅವಳ ಸೌಂದರ್ಯದಲ್ಲಿ ಅಷ್ಟು ಅಭಿಮಾನವೇನೋ. ಇರಬಹುದು–ಅವಳು ನನ್ನವಳಾಗದೆ ದೂರ ಇರುವವರೆಗೂ ಅವಳ ರೂಪು ನನ್ನ ಕಣ್ಣನ್ನು ಉರಿಸುವ ಉರಿಯಾಗಿತ್ತು, ಈ ಕಾಳ್ಗಿಚ್ಚು ನನ್ನ ಬಾಳ ಬೆಳದಿಂಗಳಾಗಿದೆ. ಕಾತ್ಯಾಯನಿ — ನನ್ನ ಕಾತ್ಯಾಯನಿ.

ಆದರೆ ಅವಳು ನನ್ನವಳೇ.

ನಾವೀರ್ವರೂ ಒಬ್ಬರನ್ನೊಬ್ಬರು ಪ್ರೀತಿಸುತ್ತೇವೆ–ನಿಜ ಒಬ್ಬರನ್ನೊಬ್ಬರು ಬಿಟ್ಟಿರುವುದು ಇಬ್ಬರಿಗೂ ಬೇಡವಾಗಿದೆ. ಆದರೂ ನಮ್ಮೀರ್ವರ ನಡುವೆ ಎಷ್ಟು ಅಂತರವಿದೆ. ಅಂತಸ್ತಿನಲ್ಲಿ, ವಿಚಾರದಲ್ಲಿ

ಜೀವನದ ವರ್ಗೀಕರಣದಲ್ಲಿ ನಾನು ಯಾವ ಸಾಲಿನಲ್ಲಿ ನಿಲ್ಲುತ್ತೇನೆ ಎನ್ನುವುದನ್ನು ನಾನು ಬಲ್ಲೆ. ಚಿಲ್ಲರೆ ಅಂಗಡಿಯವನ ಮಗ ನಾನು. ಮಧ್ಯಮ ದರ್ಜೆಯಲ್ಲೂ ಕೆಳದರ್ಜೆ ನನ್ನದು.

ಆದರೆ ಕಾತ್ಯಾಯನಿ–ಅವಳು ಹೇಗೋ ಏನೋ ನಾನು ಅರಿಯೆ. ಆದರೆ ಅವಳ ಅಣ್ಣ ಹೆಚ್ಚು ಕಡಮೆ ಮೇಲು ದರ್ಜೆಯ ಜನ.

ಕಾತ್ಯಾಯನಿಯ ಅಣ್ಣ ಭವಾನಿಶಂಕರರಾಯರು ಬೆಳಗೊಳದ ಕೆಮಿಕಲ್ ಅಂಡ್ ಫರ್ಟಿಲೈಸರ್ಸ್ ಕಂಪನಿಯಲ್ಲಿ ಸಾವಿರ ರೂಪಾಯಿ ಸಂಬಳದ ಅಧಿಕಾರಿಗಳು. ಸ್ವಂತ ಮನೆ, ಕಾರು ಇರುವವರು. ಅವರ ಜೀವನ ಶ್ರೀಮಂತಿಕೆಯದು. ಅದರಿದುರು ನಿಂತಾಗ. ನನ್ನ ಬಡತನ ಮತ್ತಷ್ಟು ಕರಾಳವಾಗಿ ಕಾಣುತ್ತದೆ.

ಜೀವನ ದೃಷ್ಟಿಯಲ್ಲೂ ಅಷ್ಟೇ–ಅಜಗಜಾಂತರ ವ್ಯತ್ಯಾಸ. ಕಾತ್ಯಾಯನಿ ಅವರ ಇದಿರು ನನ್ನ ಬುದ್ಧಿಯನ್ನು ಹೊಗಳಿದಾಗ ಅವರಿಗೆ ನನ್ನಲ್ಲಿ ಕೊಂಚ ಆಸಕ್ತಿ ಇದ್ದಂತ್ತಿತ್ತು 'ಇಲ್ಲಿಯ ಓದು ಮುಗಿದ ಮೇಲೆ ಮುಂದೆ ಏನು ಮಾಡುತ್ತೀರಿ' ಎಂದು ಕೇಳಿದರು. 'ಇಲ್ಲೇ ಎಲ್ಲಾದರೂ ಕೆಲಸ ಹುಡುಕುತ್ತೇನೆ.' ಎಂದೆ. 'ಏಕೆ ? ಇನ್ನೂ ಚಿಕ್ಕ ವಯಸ್ಸು. ಯೂರೋಪಿಗೋ ಅಮೆರಿಕಾಕ್ಕೋ ಹೋಗಿ ಹೆಚ್ಚಿನ ಓದು ಓದಿ ಬರಬಾರದೇಕೆ ? ಈಗೇನು ಎಂ. ಬಿ. ಬಿ. ಎಸ್‌ಗಳು ಕಾಸಿಗೊಂದು ಕೊಸರಿಗೊಂದು. ಸ್ಪೆಷಲಿಸ್ಟಾದರೇ, ಮರ್ಯಾದೆ' ಎಂದರು. 'ದೇವರು ನನಗಷ್ಟು ಶಕ್ತಿಯನ್ನು ಕೊಟ್ಟಿಲ್ಲ, ನಮ್ಮ ತಂದೆ ನನಗೆ ಈ ಓದು ಓದಿಸುತ್ತಿರುವುದೇ ಹೆಚ್ಚು' ಎಂದಾಗ, 'ಈಸ್ ಇಟ್ ಸೊ' ಎಂದರು ಭವಾನಿಶಂಕರರಾಯರು. ಆ ಬಳಿಕ ಅವರಿಗೇ ಏಕೋ ನನ್ನಲ್ಲಿ ಆಸಕ್ತಿಯೇ ತಪ್ಪಿ ಹೋದಂತಿತ್ತು.

ಕಾತ್ಯಾಯನಿಯ ಅತ್ತಿಗೆ ಸುಶೀಲಾದೇವಿಗೂ ಅಷ್ಟೆ ಹತ್ತಾರು ಬಾರಿ ಅವರ ಮನೆಗೆ ಹೋಗಿ ಬಂದಾಗಲೂ, ಆಕೆಯ ಮುಖದ ಬಿಗಿ ಸಡಲಿರಲಿಲ್ಲ ಏನೋ ಕಾತ್ಯಾಯನಿಯ ಕ್ಲಾಸ್‌ಮೇಟ್ ಬಂದು ಹೋಗಲಿ ಎಂಬಷ್ಟೇ ಭಾವನೆ ಇರುವಂತಿತ್ತು.

ಅವರಿಬ್ಬರಿಗಾಗಿಯೇ ಆಗಿದ್ದರೆ ನಾನು ಅಷ್ಟು ಬಾರಿ ಅವರ ಮನೆಗೆ ಹೋಗುತ್ತಿದ್ದೆನೋ ಇಲ್ಲವೋ. ಆದರೆ ಕಾತ್ಯಾಯನಿ ? ಅವಳಿಗಾಗಿ ನರಕಕ್ಕಾದರೂ ಹೋಗಲು ಸಿದ್ಧವಾಗಿದ್ದೆ

ಅವಳಿಗೆ ನನ್ನ ಬಡತನ–ಸಿರಿತನಗಳು ಬೇಕಿರಲಿಲ್ಲ ನಾನು ಬೇಕಾಗಿತ್ತು. ನನಗೆ ಅವಳು ಬೇಕಾಗಿತ್ತು. ಒಮ್ಮೆ ಅವಳ ಇದಿರು 'ನಾನು ಬರುವುದು ನಿಮ್ಮ ಅಣ್ಣ, ಅತ್ತಿಗೆಗೆ ಬೇಕಿಲ್ಲವೋ ಏನೋ ಎಂದಾಗ 'ನೀವು ಅವರಿಗಾಗಿ ಬರುತ್ತಿಲ್ಲ ಹಣ, ಅಂತಸ್ತನ್ನಲ್ಲದೆ ಬೇರಾವುದನ್ನೂ ಗೌರವಿಸುವುದು ಅವರಿಗೆ ತಿಳಿಯದು' ಎಂದಳು ಕಾತ್ಯಾಯನಿ.

"ಹೀಗೇಕೆ ?"

"ಏಕೆ ಅಂದರೆ, ಅದು ಹಾಗೆ. ಅದೊಂದು ಜಾತಿಯ ಲಕ್ಷಣ."

"ಅಂದರೆ—?"

" ನೋಡಿ ರಾಜಶೇಖರ್. ನಾವೇನೂ ಹುಟ್ಟಾ ಶ್ರೀಮಂತರಲ್ಲ, ಶ್ರೀಮಂತಿಗೆ ನಮ್ಮ ರಕ್ತಗತವಾಗಿಲ್ಲ. ನೀವು ಕಾಣುವ ಶ್ರೀಮಂತಿಕೆ ಯೆಲ್ಲಾ ಅಣ್ಣನಿಗೆ ಕೈ ತುಂಬ ಸಂಬಳ, ಸ್ವಂತ ಕಾರು ಬಂದಮೇಲೆ ಬಂದುದು. ಕೆಲವರು ತಾವು ಶ್ರೀಮಂತರಾದ ಮೇಲೆ ತಮ್ಮ ಬಡನೆಂಟರನ್ನು ತಾತ್ಸಾರದಿಂದ ಕಾಣುವುದಿಲ್ಲವೇ—ಹಾಗೇ ಇವರೂ. ಸಾಮಾನ್ಯವಾಗಿ ಹುಟ್ಟಿದ್ದರೂ, ಈಗ ತಾವು ಶ್ರೀಮಂತಿಕೆಯ ಆಜನ್ಮ ಬಂಧುಗಳು ಎಂದು ತೋರಿಸಿಕೊಳ್ಳಲು ಯತ್ನಿಸುತ್ತಾರೆ. ಬಡವರನ್ನು ತಾತ್ಸಾರವಾಗಿ ಕಾಣುವುದರ ಮೂಲಕವೇ ತಮ್ಮ ಶ್ರೀಮಂತಿಕೆಯನ್ನು ತೋರಿಸಿಕೊಳ್ಳಲೆತ್ನಿಸುತ್ತಾರೆ ಆ ಚಟ ಇವರಿಗೊಂದು 'ಕಾಂಪ್ಲೆಕ್ಸ್.' ಐ ಹೇಟ್ ದೀಸ್ ನಿಯೋ - ಅರಿಸ್ಟೊಕ್ರಾಟ್ಸ್. ಅಪ್‌ಸ್ಟಾರ್ಟ್ಸ್‌ಗೆ ಏನೇನು ಗುಣಾವಗುಣಗಳಿರಬೇಕೋ ಎಲ್ಲಾ ಇವರಿಗಿದೆ."

ಕಾತ್ಯಾಯನಿ ಆ ಮಾತಾಡಿದ ರೀತಿಯಲ್ಲಿ ಅವಳಿಗೆ ತನ್ನ ಅಣ್ಣ ಅತ್ತಿಗೆಯ ಬಗ್ಗೆಯೂ ಗೌರವವಿದ್ದಂತಿರಲಿಲ್ಲ. ನನ್ನ ಇದಿರು ಅವರ ಬಗ್ಗೆ ಮಾತನಾಡುವಾಗ ಇರಲಿ, ಅವರ ಇದುರು ಮಾತನಾಡುವಾಗಲೂ ಇದೇ ರೀತಿ ಮಾತನಾಡುತ್ತಿದ್ದಳು. ಅವಳ ನಾಲಿಗೆ ಡಾಕ್ಟರ ಚೂರಿಯಂತೆ. ಅದರಲ್ಲಿ ನೋಯಿಸುವ ಉದ್ದೇಶವಿರುತ್ತಿರಲಿಲ್ಲ; ಹಾಗೇ, ಮುಖ ಮರ್ಯಾದೆಗಾಗಿ ಸತ್ಯವನ್ನು ವಿಕೃತಗೊಳಿಸುವ ಸಂಪ್ರದಾಯವೂ ಇಲ್ಲ.

ಅವರಿವರ ವಿಚಾರದಲ್ಲಿ ನನ್ನ ವಿಚಾರದಲ್ಲೂ ಮಾತನಾಡುವಾಗ ಅಂಥ ದಾಕ್ಷಿಣ್ಯವೇನೂ ಇರುತ್ತಿರಲಿಲ್ಲ. ಒಲವಿನಲ್ಲಿ ಅವಳ ಹೃದಯ ನನದಾಗಿತ್ತು. ಆದರೆ ವಿಚಾರ ಸ್ವಾತಂತ್ರ್ಯ ನನ್ನದಾಗಿರಲಿಲ್ಲ

ನಮ್ಮಿರ್ವರ ಪರಿಚಯವಾದ ಹೊಸದರಲ್ಲಿ ಒಂದು ದಿನ ಮೊದಲಬಾರಿಗೆ ಅವಳ ಅಭ್ಯಾಸದ ಕೋಣೆಯನ್ನು ನೋಡಿದಾಗ, ಅವಳ ಪುಸ್ತಕದ ಬೀರೂವಿನಲ್ಲಿ ಅನಾಟಮಿ, ಮೆಟೀರಿಯಾ ಮೆಡಿಕಾ, ಸರ್ಜರಿ, ಗೈನೆಕಾಲಜಿಯ ಪುಸ್ತಕಗಳ ನಡುವೆ ಕಾರ್ಲ್‌ಮಾರ್ಕ್ಸ್, ಎಂಜಲ್ಸ್, ಲೆನಿನ್, ಬರ್ನಾಲ್, ಲೈಸೆಂಕೊ ಕ್ರಿಸ್ಟೋಫರ್ ಕಾಡ್ವೆಲ್ ಮೊದಲಾದವರ ಪುಸ್ತಕಗಳಿದ್ದುದನ್ನು ನೋಡಿ ಆಶ್ಚರ್ಯವಾಯಿತು. ಮೆಡಿಕಲ್ ಕಾಲೇಜಿನ ವಿದ್ಯಾರ್ಥಿನಿಗೂ ಇದಕ್ಕೂ ಏನು ಸಂಬಂಧ ? ಹಾಗೇ ಅವನ್ನು ನೋಡುತ್ತಾ ಕುಳಿತಿದ್ದು, ಕಾಫಿ ತರಲು ಹೋದ ಕಾತ್ಯಾಯನಿ, ಒಳಗೆ ಬಂದಾಗ—

" ಇದನ್ನೆಲ್ಲಾ ನೀವು ಓದುತ್ತೀರಾ ? "

—ಎಂದು ಕೇಳಿದೆ.

" ಹೌದು. ಓದುತ್ತೇನೆ. ಏಕೆ ಓದಬಾರದೇ ? "

—ಎಂದು ಚುರುಕಾಗಿ ಕೇಳಿದಳು.

“ ಓದಬಾರದು ಎಂದಲ್ಲ. ನಮ್ಮ ಪಠ್ಯಪುಸ್ತಕಗಳನ್ನು ಓದಲೇ ಸಾಕಷ್ಟು ಬಿಡುವು ಸಿಗುವುದಿಲ್ಲ. ಇನ್ನು ಇದನ್ನೆಲ್ಲಾ ಓದಲು ಬಿಡುವೆಲ್ಲಿ ತರುತ್ತಿರಾ?”

“ ಬಿಡುವಿಲ್ಲ ನಿಜ, ಆದರೆ ಹೇಗಾದರೂ ಬಿಡುವು ಮಾಡಿಕೊಂಡು ಓದುತ್ತೇನೆ.”

“ಬಿಡುವು ಎಂದರೆ ನಿದ್ರೆಯ ಹೊತ್ತನ್ನೇ ಮೀಸಲಾಗಿಡಬೇಕು ಅಲ್ಲವೇ?”

“ ನಿಜ. ಹಾಗೇ ಓದಬೇಕಾಗುತ್ತದೆ. ಅದು ತಪ್ಪೇ ?

“ ಊಹೂ, ನೀವು ಏನು ಓದಿದರೂ ಅದರಲ್ಲಿ ನನಗೇನೂ ತಪ್ಪು ಕಾಣುವುದಿಲ್ಲ.”

“ ಮತ್ತೆ ”

“ ನಿದ್ರೆ ಕೆಡುವುದಲ್ಲಾ ಎಂದು ದುಃಖ ; ಆ ಹೂವಿನಂಥ ಕಣ್ಣು ಬಾಡುವುದಲ್ಲಾ ಎಂದು ಭಯ.”

“ ಅದು ಹುಡುಗಾಟಿಕೆಯ ಮಾತಾಯಿತು. ನಿಜವಾಗಿ ನಿಮ್ಮ ಅಭಿಪ್ರಾಯ ಹೇಳಿ. ಈ ಬಗೆಯ ಪುಸ್ತಕಗಳನ್ನು ಓದುವುದು ತಪ್ಪೆ ? ”

ತಪ್ಪೋ ನೆಪ್ಪೋ ನನಗದು ತಿಳಿಯುವುದಿಲ್ಲ. ಆದರೆ ಇದಕ್ಕಾಗಿ ನಿದ್ರೆ ಕೆಡಿಸಿಕೊಳ್ಳಬೇಕಾದ ಅಗತ್ಯವಿಲ್ಲ.”

“ ಅಂದರೆ ?”

“ ನಮಗೆ ಸಾಧಾರಣವಾಗಿ ನಿದ್ರೆಗೆ ಅವಕಾಶ ಸಿಗುವುದೇ ಕಡಮೆ. ಹಾಗೂ ಇರುವ ಅವಕಾಶವನ್ನು ಕಡಿಮೆ ಮಾಡಿಕೊಂಡು ಓದಬೇಕು ಎಂದರೆ, ನಮ್ಮ ಓದಿಗೆ ಅನುಕೂಲವಾಗುವ ಪುಸ್ತಕಗಳನ್ನಾದರೂ ಓದಿದರೆ ಸಾರ್ಥಕ... ....”

“ ಅಂದರೆ ಇಂಥ ಪುಸ್ತಕಗಳನ್ನು ಓದುವುದರಿಂದ ಏನೂ ಉಪಯೋಗವಿಲ್ಲವೆಂದೇ ನಿಮ್ಮ ಅಭಿಪ್ರಾಯವೇ ?”

“ ಹೆಚ್ಚು ಕಡಿಮೆ ಹಾಗೇ.”

“ ಏಕೆ ?”

“ ಈ ಬರಡು ರಾಜಕೀಯಕ್ಕೂ ನಮಗೂ ಎಲ್ಲಿಯ ಸಂಬಂಧ ಹೇಳಿ. ಗೋಕುಲಾಷ್ಟಮಿಗೂ ಇಮಾಂ ಸಾಬಿಗೂ ಸಂಬಂಧ ಇದ್ದ ಹಾಗೆ.”

“ ಅಂದರೆ ನಿಮ್ಮ ದೃಷ್ಟಿಯಲ್ಲಿ ವೈದ್ಯ ವಿದ್ಯಾರ್ಥಿಗೂ ರಾಜಕೀಯಕ್ಕೂ ಏನು ಸಂಬಂಧವೇ ಇಲ್ಲ.”

“ ನಿಜ.”

" ಎಂಥ ಪ್ರಿಮಿಟೀವ್ (ಪುರಾಣಕಾಲದ) ಮನಸ್ಸು ನಿಮ್ಮದು. ನೀವು ತಿಳಿದುಕೊಂಡಿರುವುದು ಶುದ್ಧ ತಪ್ಪು. ವೈದ್ಯ ವಿದ್ಯಾರ್ಥಿ ಲೋಕಾತೀತನಾದ ಮನುಷ್ಯನಲ್ಲ. ಸಮಾಜದ ಮೇಲೆ ಪರಿಣಾಮ ಮಾಡುವ ಪ್ರತಿಯೊಂದು ವಿಷಯವನ್ನೂ ಸಮಾಜಜೀವಿಯಾದವನು ಅರಿತುಕೊಳ್ಳಬೇಕು. ಅದರಲ್ಲೂ ರಾಜಕೀಯವನ್ನು ಬಿಟ್ಟಂತೂ ಬದುಕುವುದು ಸಾಧ್ಯವೇ ಇಲ್ಲ. ಅರಿಸ್ಟಾಟಲ್ ಹೇಳಿದ ಹಾಗೆ ಮನುಷ್ಯ ಪೊಲಿಟಿಕಲ್ ಎನಿಮಲ್ (ರಾಜಕೀಯ ಪ್ರಾಣಿ). ಅದರ ಅಜ್ಞಾನವೇ ಶೋಷಣೆಯ ತಳಹದಿ."

—ಗಂಭೀರವಾಗಿ, ತನ್ನ ಹೃದಯವನ್ನೇ ಆ ಮಾತಿನಲ್ಲಿ ಎರಕ ಹೊಯ್ದು ಹೇಳಿದಳು ಕಾತ್ಯಾಯನಿ. ಆದರೆ ಆ ವಿಷಯದ ಬಗ್ಗೆ ಯೋಚನೆಯನ್ನೇ ಮಾಡದಿದ್ದ ನನ್ನಮೇಲೆ ಆ ಮಾತಿನ ಪರಿಣಾಮ ಏನೂ ಆಗಲಿಲ್ಲ. ಸುಮ್ಮನೆ ಕೇಳಿದೆ. ಬಹಿರಂಗ ಸಭೆಯ ಭಾಷಣಕಾರಳಂತೆ ಅವಳು ಆಡಿದ ಮಾತನ್ನು ಕೇಳಿ ನನಗೆ ನಗು ಬಂತು. ನಕ್ಕುಬಿಟ್ಟೆ.

ನನ್ನ ನಗುವನ್ನು ಕೇಳಿ ಕಾತ್ಯಾಯನಿಗೆ ಅಪಾರ ಯಾತನೆಯಾಗಿರ ಬೇಕು. ಆ ನೋವು ಅವಳ ಮುಖದಲ್ಲಿ ಸ್ಪಷ್ಟವಾಗಿತ್ತು. ಆ ಮುಖವನ್ನು ನೋಡಿ ನಕ್ಕುದಕ್ಕಾಗಿ ನನಗೆ ಪಶ್ಚಾತ್ತಾಪವಾಯಿತು.

"ನನ್ನನ್ನು ಕ್ಷಮಿಸು ಕಾತ್ಯಾಯನಿ. ನಾನು ನಗಬಾರದಿತ್ತು" ಎಂದೆ

" ನಗು–ರಾಜಶೇಖರ್, ನನ್ನ ಭಾಷಣದ ರೀತಿಯನ್ನು ಕಂಡು ಬೇಕಾ ದರೆ ನಗು. ಆದರೆ ಸತ್ಯವನ್ನು ಕಂಡು ನಗಬೇಡ. ಅದಕ್ಕೆ ಬಾಳಿನಲ್ಲಿ ಬಹಳ ಭಯಂಕರವಾದ ಬೆಲೆ ಕೊಡಬೇಕಾಗುತ್ತದೆ. ಹಾಗೆ ಬೆಲೆ ಕೊಡುವವರು ಬೇಕಾದಷ್ಟು ಮಂದಿ ಇದಾರೆ. ಆದರೆ....ಆದರೆ... ....ಅವರಲ್ಲಿ ನೀನೂ ಒಬ್ಬ ರಾಗಬಾರದು."

—ಎಷ್ಟು ಕಕ್ಕುಲತೆಯಿಂದ ಹೇಳಿದಳು, ಆ ಮಾತುಗಳನ್ನು ಕಾತ್ಯಾ ಯನಿ.

" ಹಾಗಾದರೆ ನಾನು ಇದನ್ನು ಓದಲೇಬೇಕೆ ಕಾತ್ಯಾಯನಿ ?"

" ನಿಜ. ಓದಬೇಕು."

" ನೀನು ಹೇಳಿದರೆ ಸರಿ – ಓದುತ್ತೇನೆ."

" ನಾನು ಹೇಳಿದೆ ಎಂದು ಓದುತ್ತೀಯಾ ?"

" ಹೂ. ನೀನು ಹೇಳಿದರೆ ರಾಜಕಾರಣವನ್ನು ಓದುವುದೇನು, ನರ ಕಕ್ಕಾದರೂ ಹಾರುತ್ತೇನೆ."

" ನನಗಾಗಿ ಓದಬೇಡ ರಾಜಶೇಖರ್ ; ನಿನಗಾಗಿಯೇ ಓದು. ಓದ

ದಿದ್ದರೆ ನಿನ್ನ ಬಾಳು ಅಸಾರ್ಥಕವಾಗುತ್ತದೆ."

"ನೀನು ಇದ್ದೂ, ಇದನ್ನು ಓದದಿದ್ದರೆ ಬದುಕು ಅಸಾರ್ಥಕವಾಗುತ್ತದೆಯೇ ಕಾತ್ಯಾಯನಿ. ಊಹೂ. ಆ ಮಾತನ್ನು ನಾನು ನಂಬಲಾರೆ. ರಾಜಕೀಯ ಇದ್ದರೆ ಇರಲಿ, ಸತ್ತರೆ ಸಾಯಲಿ–ನನ್ನ ಪಾಲಿಗೆ ನೀನೊಬ್ಬಳಿದ್ದರೆ ಸಾಕು."

"ಸಾಕೇ.... ಸಾಕೇ ?"

"ಸಾಕು."

"ಯೂ ಆರ್ ಎನ್ ಇಂಪಾಸಿಬಲ್ ಫೂಲ್" (ತಿದ್ದಲಸಾಧ್ಯವಾದಂಥ ಮೂರ್ಖ ನೀನು).

"ನನ್ನ ಬಗ್ಗೆ ಅದೇ ನಿನ್ನ ಅಂತಿಮ ತೀರ್ಮಾನವೇ ?"

"ಏನೋ – ನಾನು ಇವತ್ತೇ ಏನೂ ಹೇಳಲಾರೆ ಆರಂಭದಲ್ಲೇ ಈ ಶನಿ ಮಾತು ಆರಂಭಿಸಿದಿಯೇಕೆ? ಬಿಡು ಬೇರೇನಾದರೂ ಮಾತನಾಡೋಣ."

—ಎಂದಳು ಕಾತ್ಯಾಯನಿ. ಆದರೆ ಆ ವಾದ ಅಲ್ಲಿಗೆ ಮುಗಿದಂತಿರಲಿಲ್ಲ. ಮುಂದೊಂದು ದಿನಕ್ಕೆ ಇರಲಿ ಎಂದು ಮುಂದೆ ಹಾಕಿದಂತೆ ಇತ್ತು ಅವಳ ಮಾತಿನ ರೀತಿ. ಆದರೂ... ಆದರೂ........ಅವಳಿಗೆ ಏನೋ ನಿರಾಶೆಯಾದಂತಿತ್ತು. ಅವಳ ಮಂಕಾದ ಕಣ್ಣುಗಳು ಆ ನಿರಾಶೆಯ ವ್ಯಥೆಯನ್ನು ಸಾರಿಸಾರಿ ಹೇಳಿದವು. ಅದನ್ನು ನೋಡಿ ಅವಳ ಸಾಮೀಪ್ಯದಿಂದ ನನ್ನಲ್ಲಿ ಮೂಡಿದ್ದ ಉತ್ಸಾಹವೆಲ್ಲಾ ಪಾತಾಳಕ್ಕಿಳಿದುಹೋಯಿತು. ಸಪ್ಪೆಯಾದ ಸ್ವರದಲ್ಲಿ ಕೇಳಿದೆ—

"ನಾನು ಆಡಿದ ಮಾತಿನಿಂದ ನಿನಗೆ ವ್ಯಥೆಯಾಯಿತೇ ಕಾತ್ಯಾಯನಿ ?"

"ವ್ಯಥೆಯಾಯಿತು ನಿಜ. ನಿನ್ನ ಮಾತಿನಿಂದಲ್ಲ, ಅಜ್ಞಾನದಿಂದ. ನಿನ್ನ ಅಜ್ಞಾನದಿಂದ ನನಗೆ ಅಸಹ್ಯ ಯಾತನೆಯಾಗುತ್ತದೆ ರಾಜಶೇಖರ್. ಬಾಳಿನಲ್ಲಿ ಎಷ್ಟು ತಪ್ಪು ದಾರಿಯಲ್ಲಿ ಹೊರಟಿದ್ದೀ"

"ನನ್ನ ಬಾಳು ತಪ್ಪು ದಾರಿಯಲ್ಲಿ ಹೋಗುತ್ತಿದೆಯೇ ಕಾತ್ಯಾಯನಿ."

"ಹೂ."

"ಹಾಗಾದರೆ ಅದನ್ನು ನಿನಗೇ ಒಪ್ಪಿಸಿದೀನಿ. ಹೇಗೆಬೇಕೋ ಹಾಗೆ ತಿದ್ದು, ನಾನು ನಿನ್ನವನು, ಕಾತ್ಯಾಯನಿ."

"ಸದ್ಯಕ್ಕೆ ನನಗಿರುವ ಬಹುದೊಡ್ಡ ಸಂತೋಷ ಅದೊಂದೇ ರಾಜಶೇಖರ್."

—ಎಂದಳು ಕಾತ್ಯಾಯನಿ ಒಲವು ತುಳುಕುವ ನೋಟವನ್ನು ನನ್ನತ್ತ ಬೀರಿ. ಪಾತಾಳಕ್ಕಿಳಿದಿದ್ದ ನನ್ನ ಹೃದಯ ಆ ನೋಟದ ಏಣಿಯನ್ನೇರಿ ಸ್ವರ್ಗದ ಬಳಿ ಸಾರಿತು.

೪

ಕಾತ್ಯಾಯನಿಯ ಒಲವು ನನ್ನ ಬಾಳನ್ನು ಯಾವುದೋ ಸ್ವಪ್ನ ನಂದನದ ದಾರಿಯಲ್ಲಿ ನಡೆಸುತ್ತಿದ್ದರೂ, ಸುತ್ತಲ ಜಗತ್ತು ನನಗೆ ಆಗಾಗ ವಾಸ್ತವ ಜಗತ್ತಿನ ಅರಿವು ಮಾಡಿಕೊಡುತ್ತಿತ್ತು. ಅವಳ ಸ್ನೇಹದ ಮಾದಕ ವಾತಾವರಣ ದಲ್ಲಿ ದಿನಗಳು ಗಳಿಗೆಗಳಂತೆ ಕಳೆದು ಮೂರನೆಯ ವರ್ಷದ ಪರೀಕ್ಷೆ ಮುಗಿದು ಕ್ರಿಸ್‌ಮಸ್ ರಜಾಕ್ಕೆ ಊರಿಗೆ ಹೋದೆ. ಹೋದಾಗ ಇದ್ದ ಉತ್ಸಾಹ ಬರು ವಾಗ ಇರಲಿಲ್ಲ.

ತಾಯಿಯ ಸಾವು ನನ್ನ ತಂದೆಯ ಬಾಳಿನಲ್ಲಿ ವಿಪರೀತ ಪರಿಣಾಮ ವನ್ನುಂಟುಮಾಡಿದಂತಿತ್ತು. ಆಕೆ ಜೀವಂತಳಾಗಿದ್ದಾಗ, ಆಕೆಯನ್ನು ತಂದೆ ಯಾವ ಲೆಕ್ಕಕ್ಕೂ ಇಟ್ಟಿರಲಿಲ್ಲ. ಸಂಸಾರದ ಯಾವುದೋ ಮೂಲೆಯಲ್ಲಿ ಹುದುಗಿ ಕೊಂಡಿದ್ದಳು ಆಕೆ. ಆದರೆ ಆಕೆ ತೀರಿಕೊಂಡಮೇಲೆ ತಂದೆಯವರಿಗೆ ತಮ್ಮ ಬಾಳು ಎಷ್ಟರ ಮಟ್ಟಿಗೆ ಆಕೆಯನ್ನು ಅವಲಂಬಿಸಿತ್ತು, ಎಂದು ಅರಿವಾದಂತಿತ್ತು. ಆಕೆಯ ಸಾವಿನೊಂದಿಗೇ ಅವರ ಜೀವನದ ಉತ್ಸಾಹವೆಲ್ಲಾ ಬತ್ತಿಹೋದಂತಿತ್ತು. ಅಂಗಡಿಯಲ್ಲಾಗಲಿ, ತಮ್ಮ ಜೀವನದಲ್ಲಾಗಲಿ ಅವರಿಗೆ ಆಸಕ್ತಿ ಉಳಿದಂತಿರ ಲಿಲ್ಲ. ಜೀವನದಲ್ಲಿ ಮೂಡಿದ ನಿರುತ್ಸಾಹ ಅವರ ಮಾತಿನಲ್ಲಿ ತಾನೇ ತಾನಾಗಿ ತೇಲುತ್ತಿತ್ತು. ಈ ನಿರುತ್ಸಾಹದ ಫಲವಾಗಿಯೋ ಏನೋ ಅಂಗಡಿಯೂ ಮೊದಲಿನಷ್ಟು ಚೆನ್ನಾಗಿ ನಡೆಯುತ್ತಿರಲಿಲ್ಲ. ಆಳುಕಾಳುಗಳನ್ನೇ ಅವಲಂಬಿಸಿದ ಅಂಗಡಿಯೂ ಬಡವಾದಂತಿತ್ತು. 'ಹೀಗೇಕೆ ?' ಎಂದು ಕೇಳಿದಾಗ—

"ಇನ್ನೆಷ್ಟು ದಿನ ಇವರ ಚಿಂತೆ ರಾಜಣ್ಣ. ಆಯಿತು. ಈ ಅಂಗಡಿ ತಾನೇ ಎಷ್ಟು ದಿನ ನಡೆಯಬೇಕಾಗಿದೆ. ಅಬ್ಬಬ್ಬಾ ಎಂದರೆ ಇನ್ನು ಎರಡು ವರ್ಷ. ಅಷ್ಟೇ ತಾನೇ. ಅಲ್ಲಿಗೆ ನಿನ್ನ ಓದು ಮುಗಿದು, ನಿನಗೊಂದು ಕೆಲಸ ವಾದರೆ, ನಿನಗೊಂದು ಮದುವೆ ಮಾಡಿ, ಈ ಅಂಗಡಿ ಬಾಗಿಲು ಹಾಕಿಬಿಟ್ಟು, ನೀನು ಎಲ್ಲಿದ್ದರೆ ಅಲ್ಲಿ ಇದ್ದುಬಿಡೋದು. ಅಷ್ಟೇ ತಾನೇ – ಅದುವರೆಗೂ ಹೇಗೋ ನಡೆದುಕೊಂಡುಹೋಗುತ್ತೆ."

—ಎಂದರು.

ನಾನು ಎಂದೂ ಅವರ ಬಾಯಲ್ಲಿ ಅಂಥ ನಿರುತ್ಸಾಹದ ಮಾತುಗಳನ್ನು ಕೇಳಿರಲಿಲ್ಲ. ಎಂತಲೇ ಆ ಮಾತು ಕೇಳಿದಾಗ ತುಂಬಾ ಗಾಬರಿಯಾಯಿತು.

" ನೀವು ಹೀಗೆ ಮಾತನಾಡಬಾರದು. ಕಳೆದುಹೋದುದರ ಚಿಂತೆ ಇಷ್ಟು ಹಚ್ಚಿಕೊಳ್ಳಬಾರದು " ಎಂದೆ.

" ಚಿಂತೆ – ನನಗೆ ಯಾವ ಚಿಂತೆ ರಾಜಣ್ಣ, ನನಗಿರುವುದೆಲ್ಲಾ ಈಗ ನಿನ್ನ ಚಿಂತೆಯೊಂದೇ. ನೀನು ಓದು ಮುಗಿದು, ಒಬ್ಬ ಮನುಷ್ಯನಾಗಿ, ಮದುವೆಯಾಗಿ ಒಬ್ಬ ಸಂಸಾರಿಯಾದುದನ್ನು ನೋಡಿದರೆ – ಅಲ್ಲಿಗೆ ನಾನು ಈ ಲೋಕದಲ್ಲಿ ಬಯಸಿದುದೆಲ್ಲಾ ತೀರಿದಂತಾಗುತ್ತದೆ. ಆ ದಿನ ಎಂದು ಬಂದೀತೋ ಅಂತ ಕಾಯುತ್ತಿದ್ದೇನೆ. ನೀನು ಮಾತ್ರ ಕಷ್ಟಪಟ್ಟು ಓದ ಬೇಕು. ಬೇರೆ ಯಾವ ಹವ್ಯಾಸಕ್ಕೂ ಬೀಳಬೇಡ. ನೀನೇನೋ ಅಲ್ಲಿ, ದೊಡ್ಡ ಊರು, ನಾನಾ ಜನ ಸ್ನೇಹಿತರು ಹೇಗೋ ಇದ್ದುಬಿಡುತ್ತೀಯ. ನನಗೆ, ಇಲ್ಲಿ ಜೀವ ಹೊಡೆದುಕೊಳ್ಳುತ್ತಾ ಇರುತ್ತೆ. ಅವಳು ಇರುವಷ್ಟು ದಿನವೂ ಒದ್ದುಕೊಳ್ಳುತ್ತಿದ್ದಳು. ಹಬ್ಬ ಹರಿದಿನ ಬಂದರೆ 'ರಾಜಣ್ಣ ಇಲ್ಲ. ದೂರದ ಊರಿಗೆ ಕಳಿಸಿಬಿಟ್ಟಿರಿ, ಎಂದು ಮಾಡಿದ ಸೀ ಅಡಿಗೆ ತಿನ್ನುತ್ತಿರಲಿಲ್ಲ. ಕಡಿಯವರೆಗೂ 'ರಾಜ, ರಾಜ' ಎಂದು ಹಂಬಲಿಸಿ ನೋಡದೇ ಕಣ್ಣು ಮುಚ್ಚಿಕೊಂಡಳು. ಹೋಗಲಿ – ಇಲ್ಲಿಲ್ಲವಾದರೆ ಸ್ವರ್ಗದಿಂದಲಾದರೂ ನಿನ್ನ ನೋಡುತ್ತಾ ಇರುತ್ತಾಳೆ. ಅವಳ ಜೀವಕ್ಕೆ ತೃಪ್ತಿ ಆಗೋ ಹಾಗೆ ಇರ ಬೇಕಪ್ಪಾ "

—ಎಂದರು.

ರಜಾ ಮುಗಿದು ಮೈಸೂರಿಗೆ ಹೊರಡುವ ಹೊತ್ತು ಬಂದಾಗ ನನ್ನ ಮುಖ ನೋಡುವ ಶಕ್ತಿಯೂ ಇದ್ದಂತಿರಲಿಲ್ಲ. ಕಣ್ಣಲ್ಲಿ ಏನೋ ಧೂಳು ಬಿದ್ದಂತೆ ಒರಸಿಕೊಳ್ಳುತ್ತಾ—

" ಏನಾದರಾಗಲಿ, ಎಷ್ಟಾದರೂ ಕೆಲಸವಿರಲಿ, ಮೂರು ದಿನಕ್ಕೊಂದು ಬಾರಿ ಕಾಗದ ಬರಿಯೋದನ್ನ ಮಾತ್ರ ತಪ್ಪಿಸಬೇಡ ರಾಜಣ್ಣ. ನಿನ್ನಿಂದ ಕಾಗದ ಬಂದರೆ, ನೀನೇ ಬಂದಹಾಗಿರುತ್ತೆ."

—ಎಂದರು. ಅವರ ಮಾತು ಕೇಳಿ ನನ್ನ ಕರುಳು ಕತ್ತರಿಸಿದಂತಾಯಿತು. ಹಾಗೇ ಇದ್ದಕ್ಕಿದ್ದಹಾಗೇ ಮುಪ್ಪಡರಿದ ಅವರ ಮೊಗವನ್ನು ನೋಡಿದೆ. ನೋಡಲು ಸಾಧ್ಯವಾಗಲಿಲ್ಲ. ಅವಸರವಾಗಿ ನಮಸ್ಕರಿಸಿ ಹೊರಟು ಬಂದೆ.

ನನ್ನ ತಂದೆ ಇದ್ದ ರೀತಿ, ಅವರಾಡಿದ ಮಾತು ನನ್ನ ಹೆಗಲಮೇಲೆ ಹೊಸ ಜವಾಬ್ದಾರಿಯನ್ನು ಹೊರಸಿತ್ತು. ನನ್ನ ಓದಿನ ಭವಿಷ್ಯದ ಮೇಲೆ ನನ್ನ ಬಾಳೇಅಲ್ಲ, ಅವರ ಬಾಳೂ ನಿಂತಿತ್ತು. ಬಾಳಿನಲ್ಲಿ ಚೆಲ್ಲಾಟವಾಡಲು ನನಗೆ ಅವಕಾಶವೇ ಇಲ್ಲ ಎನಿಸಿತು. ಊರಿನಿಂದ ಹಿಂದಿರುಗಿದವನೇ ಪಾರ

ಪ್ರವಚನಗಳ ಚಕ್ರತೀರ್ಥದಲ್ಲಿ ಧುಮುಕಿವೆ. ಬಾಳಿನಲ್ಲಿ ಮೂಡಿದ ಜವಾಬ ದಾರಿಯ ಅರಿವು, ಓದಿನಲ್ಲಿ ಮತ್ತಷ್ಟು ಆಸಕ್ತಿಯನ್ನು ಮೂಡಿಸಿತ್ತು.

ಅಲ್ಲದೆ ಓದುವುದೂ ಕಡಮೆ ಇರಲಿಲ್ಲ. ಹಾಸ್ಪಿಟಲ್‌ವರ್ಕ್, ಪೋಸ್ಟ್ ಮಾರ್ಟೆಂ, ದಿನದ ಕ್ಲಾಸು, ವಿಶೇಷ ಉಪನ್ಯಾಸಗಳು — ದಿನದ ಇಪ್ಪತ್ತು ನಾಲ್ಕು ಗಂಟೆಯೂ ಸಾಲದು ಎನಿಸುವಂತಿತ್ತು. ಬೆಳಗ್ಗೆ ಆರು ಗಂಟೆಗೆ ಎದ್ದರೆ ರಾತ್ರಿ ಎರಡು ಗಂಟೆಗೆ ಓದುಮುಗಿಸಿ ಮಲಗುವವರೆಗೂ ದುಡಿತಕ್ಕೆ ಬಿಡುವಿಲ್ಲ. ಇದರಲ್ಲಿ ಬೇರಾವ ಚಿಂತೆಗೂ ಅವಕಾಶವಿರುತ್ತಿರಲಿಲ್ಲ. ಒಮ್ಮೊಮ್ಮೆ ಓದಿನ ಜಡಭಾರ ಬೇಸರವಾಗಿ ನನ್ನೆದೆ ಕಾತ್ಯಾಯನಿಯನ್ನು ಅರಸಿ ಕೊಂಡು ಹೋಗುತ್ತಿತ್ತು. ಅವಳ ಬಳಿ ಹೋಗಬೇಕೆಂದು ತವಕಿಸುತ್ತಿತ್ತು ಆದರೆ ಅವಳು ಕಡೆಯ ವರ್ಷಕ್ಕೆ ಬಂದಿದ್ದಳು. ನನಗಿಂತ ಹೆಚ್ಚು ಓದು ಅವಳಿಗೆ. ನನಗೆ ಬೇಸರವೆಂದು ಅಲ್ಲಿಗೆ ಹೋಗಿ ಹರಟೆ ಹೊಡೆಯುತ್ತಾ ಕುಳಿತರೆ ಅವಳ ಓದಿಗೆ ಎಲ್ಲಿ ವಿಘ್ನ ಬಂದೀತೋ ಎಂದು ಹೆದರಿಕೆಯಾಗುತ್ತಿತ್ತು.

ಒಂದು ರೀತಿಯಲ್ಲಿ ನಮ್ಮಿಬ್ಬರ ಬಾಳೂ ಒಂದೇ ರೀತಿಯ ಹಳಿಯ ಮೇಲೆ ಹರಿಯುತ್ತಿತ್ತು. ನಮ್ಮೀರ್ವರ ಭವಿಷ್ಯವೂ ನಮ್ಮ ಪರೀಕ್ಷೆಯ ಯಶಸ್ವೀ ಫಲಿತಾಂಶವನ್ನೇ ಅವಲಂಬಿಸಿತ್ತು. ಬಾಳಿನ ಹೊಣೆಗಾರಿಕೆಯ ಅರಿವು ನನ್ನನ್ನು ದುಡಿಸುವ ಮೇಸ್ತ್ರಿಯಾಗಿಸಿದ್ದರೆ, ತಾನಿದ್ದ ಬಾಳಪಂಜರ ದಿಂದ ಬಿಡುಗಡೆಯಾಗಬೇಕೆಂಬ ಬಯಕೆ, ಅವಳನ್ನು ದುಡಿಸುವ ಚಾವಟಿ ಯಾಗಿತ್ತು.

ಪಂಜರದಿಂದ ಬಿಡುಗಡೆ ? – ನಿಜ – ಪಂಜರದಿಂದ ಬಿಡುಗಡೆ.

ಕಾತ್ಯಾಯನಿಯೇ ಒಮ್ಮೆ ಹೇಳಿದ್ದಳು – ತಾನಿದ್ದುದು ಸುವರ್ಣ ಪಂಜರವೆಂದು.

" ನಿನಗೆ ಗೊತ್ತಿಲ್ಲ ರಾಜಶೇಖರ – ಈ ಜನ ನನ್ನವರು, ನನ್ನ ಅಣ್ಣ, ಅತ್ತಿಗೆ, ನಿಜ. ಇಲ್ಲಿ ನನಗೆ ಬೇಕಾದ ಸುಖಸಂಪದವೆಲ್ಲಾ ಸಿಗುತ್ತದೆ. ಆದರೆ ನನ್ನ ಪಾಲಿಗೆ ಇದು ಪಂಜರ, ಸುವರ್ಣ ಪಂಜರ. ಈ ಜನ, ಇವರ ಕೃತ್ರಿಮ ಜೀವನ ವಿಧಾನ ಇವು ನನಗೆ ಸ್ವಲ್ಪವೂ ಹಿಡಿಸುವುದಿಲ್ಲ. ನಾನೂ, ನನ್ನ ವಿಚಾರಗಳೂ ಇವರಿಗೆ ಹಿಡಿಸುವುದಿಲ್ಲ. ನಾನು ಒಪ್ಪಿದ್ದರೆ ಎಂದೋ ಯಾರಿಗೋ ನನ್ನ ಮದುವೆ ಮಾಡಿ ಕೈತೊಳೆದುಕೊಳ್ಳುತ್ತಿದ್ದರು. ಆದರೆ ಅದಕ್ಕೆ ನಾನು ಒಪ್ಪದಿದ್ದುದು ಇವರ ಪಾಲಿಗೆ ಬಿಸಿತುಪ್ಪದಂತಾಗಿದೆ. ನುಂಗಲೂ ಸಾಧ್ಯವಿಲ್ಲ, ಉಗುಳಲೂ ಸಾಧ್ಯವಿಲ್ಲ. ಸಹಿಸುತ್ತಾ ಬಂದಿದ್ದಾರೆ. ನಾನೂ ಸ್ವತಂತ್ರ ಜೀವನೋಪಾಯವನ್ನು ಕಲ್ಪಿಸಿಕೊಳ್ಳುವವರೆಗೆ ಈ ಅಸಹ್ಯ ಸುಖವನ್ನು

ಅನುಭವಿಸಬೇಕಾಗಿದೆ. ಎಂದಿಗೆ ಈ ಪರೀಕ್ಷೆಯು ಗಡವು ಮುಗಿದು, ಈ ಪಂಜರದಿಂದ ವಿಮೋಚನೆಯಾದೀತೋ ಎಂದು ನನ್ನ ಜೀವ ದಿನವೂ ತುಡಿಯುತ್ತಿದೆ. ಆದಷ್ಟು ಬೇಗ ಈ ಜಗತ್ತಿನಿಂದ ಪಾರಾಗಿ ನನ್ನ ಜಗತ್ತಿಗೆ ಹೋಗಬೇಕು "

—ಉದ್ವಿಗ್ನಳಾಗಿ ಹೇಳಿದ್ದಳು ಕಾತ್ಯಾಯನಿ ಈ ಮಾತನ್ನು ಆ ಮಾತನ್ನು ಕೇಳಿ ನನಗೆ ಆಶ್ಚರ್ಯವಾಗಿತ್ತು.

" ನಿನ್ನ ಜಗತ್ತಿಗೆ ? ಹಾಗಾದರೆ ನಿನ್ನದೆ ಒಂದು ಪ್ರತ್ಯೇಕವಾದ ಜಗತ್ತಿದೆಯೇ ಕಾತ್ಯಾಯನಿ ?"

" ಇದೆ."

" ಯಾವುದು ?"

" ಅದೊಂದು ಹೋರಾಟಗಾರರ ಜಗತ್ತು."

" ಅಂದರೆ—"

" ನೂತನ ಜಗತ್ತಿನ ಶಿಲ್ಪಿಗಳ ಜಗತ್ತು."

" ಊಹೂ – ಅದೂ ಅರ್ಥವಾಗುತ್ತಿಲ್ಲ ನನಗೆ."

" ಹುಚ್ಚು ಸಂಪ್ರದಾಯ, ಅಸಮತೆ, ಶೋಷಣೆಗಳ ಜವುಗಿನಲ್ಲಿ ಬೆಳೆದ ಜಿಗಣೆಯಂಥ ಈ ಜಗತ್ತನ್ನು ಸುಟ್ಟು, ಇದರ ಸ್ಥಾನದಲ್ಲಿ ಸರ್ವಸಮಾನತೆಯ ಹೊಸ ಲೋಕವೊಂದನ್ನು ನಿರ್ಮಿಸಲು ಶ್ರಮಿಸುತ್ತಿರುವ ಆಶಾವಾದಿಗಳ ಗುಂಪು ಒಂದಿದೆ ರಾಜಶೇಖರ. ಅದು ನನ್ನ ಜಗತ್ತು, ಈ ಹಂಗಿನರಮನೆಯಲ್ಲಿ, ಇಲ್ಲಿ ನಾನು ಉಣ್ಣುವ ಒಂದೊಂದು ತುತ್ತೂ ವಿಷ. ಆದರೆ ನನಗೆ ಸ್ವತಹ ದುಡಿಯುವ ಶಕ್ತಿ ಬರದೆ, ಇಲ್ಲಿಂದ ಅಲ್ಲಿಗೆ ಹಾರಲಾರೆ. ಅದಕ್ಕಾಗಿ ಇದನ್ನು ಸಹಿಸುತ್ತಿದ್ದೇನೆ. ಆದಕ್ಕಾಗಿಯೇ ನಾನು ಪರೀಕ್ಷೆಯಲ್ಲಿ ಫೇಲಾಗಲಾರೆ. ನೀನು ಅರಿಯಲಾರೆ ರಾಜಶೇಖರ್, ಆ ಜಗತ್ತಿನ ಕರೆ ನನ್ನೆದೆಯಲ್ಲಿ ಎಷ್ಟು ತೀವ್ರವಾಗಿ ಮೊಳಗುತ್ತಿದೆ ಎಂದು."

" ನನ್ನನ್ನು ನಿನ್ನ ಆ ಜಗತ್ತಿಗೆ ಕರೆದೊಯ್ಯುತ್ತೀಯಾ ಕಾತ್ಯಾಯನಿ ?"

—ಅವಳ ಮಾತುಗಳಿಂದ ಸ್ಫೂರ್ತಿಗೊಂಡು ಕೇಳಿದೆ ನಾನು.

" ನಿನ್ನನ್ನು ಬಿಟ್ಟು ಒಂಟಿಯಾಗಿ ಹೋಗುವ ಬಯಕೆ ನನಗಿಲ್ಲ ರಾಜಶೇಖರ. ಆದರೆ....ಆದರೆ....ನೀನು ನನ್ನ ಜೊತೆಗೆ ಬರುತ್ತೀಯಾ ? ನೀನೆಲ್ಲಿ ಕಡೆಯ ಗಳಿಗೆಯಲ್ಲಿ ಕೈ ಬಿಡುತ್ತೀಯೋ ಎಂದೇ ನನಗೆ ಹೆದರಿಕೆ."

" ನಾನು .... ನಾನೇ ನಿನ್ನ ಕೈ ಬಿಡುವುದು ಕಾತ್ಯಾಯನಿ. ಸಾವೊಂದು ವಿನಾ ಬೇರಾವುದಕ್ಕೂ ನಮ್ಮನ್ನು ಅಗಲಿಸುವ ಶಕ್ತಿ ಇಲ್ಲ."

"ಆ ಜಗತ್ತಿಗೆ ಹೋಗುವ ದಾರಿ ಬಹಳ ಕಡಿದು ರಾಜಶೇಖರ್. ಆದರೆ ಆ ಜಗತ್ತು, ಓ–ಎಷ್ಟು ಸುಂದರ."

—ಯಾವುದೋ ಕನಸು ಕಾಣುತ್ತ ಉತ್ಸಾಹದಿಂದ ಉಬ್ಬಿ ಹೇಳಿದಳು ಕಾತ್ಯಾಯನಿ.

"ನನಗೂ ನಂಬಿಕೆಯಿದೆ. ಆ ಜಗತ್ತು ಸುಂದರವಾಗಿಯೇ ಇರಬೇಕು."

"ಹೌದೇ. ನಿನಗೆ ಹೇಗೆ ತಿಳಿಯಿತು."

"ಹೇಗೆ – ನನ್ನ ಹೃದಯ ಹೇಳುತ್ತಿದೆ."

"ಅಂದರೆ ?"

"ನೀನು ಕಾಲಿಟ್ಟ ಎಡೆಯಲ್ಲಿ ಅಸುಂದರವಾದುದು ಯಾವುದೂ ಇರಲು ಸಾಧ್ಯವಿಲ್ಲ ಕಾತ್ಯಾಯನಿ."

"ರಾಜಾ....ರಾಜಾ....ನಿನಗೆ ನನ್ನಲ್ಲಿ ಎಷ್ಟು ಅಭಿಮಾನ. ಇದಕ್ಕಾಗಿ ನಿನಗೆ ನಾನೇನು ಕೊಡಲಿ ಹೇಳು."

"ಕೇಳಿದುದನ್ನು ಕೊಡುತ್ತೀಯಾ ?"

"ಹೂ."

"ಮತ್ತೆ ಇಲ್ಲವೆನ್ನಬಾರದು."

"ಇಲ್ಲ."

"ನಿನ್ನ ಹೃದಯದಲ್ಲಿ ಅಷ್ಟು ಸ್ಥಾನ ! ಅಷ್ಟೇ – ಅಷ್ಟು ಸಾಕು."

"ಅದು ಎಂದೆಂದಿಗೂ ನಿನ್ನದೇ ರಾಜಾ."

"ಒಪ್ಪಿದೆಯಾ ?"

"ಹೂ."

"ಹಾಗಾದರೆ ಈಗ ಅದರ ಮೊದಲ ಕಂತನ್ನು ಕೊಡುತ್ತೀಯಾ ?"

"ಕೆಟ್ಟ ಹುಡುಗ , ಹಾಗೆಲ್ಲಾ ಮಾತನಾಡಿದರೆ ನೀನು ಬಯಸುವ ಮೊದಲ ಕಂತು, ಕೈಯಿಂದ ಕೆನ್ನೆಗೆ ಸಂದಾಯವಾದೀತು. ಹುಷಾರ್"

ಎಂದು ಹತ್ತಿರ ಬಳುಕಿ ದೂರ ಸರಿದಿದ್ದಳು ಕಾತ್ಯಾಯನಿ. ಅವಳ ಮೈ ಎಷ್ಟು ದೂರವಿದ್ದರೇನು–ಅವಳ ಹೃದಯ ನನ್ನ ಎದೆಯಲ್ಲೇ ಮಿಡಿಯುತ್ತಿತ್ತು.

ಪರೀಕ್ಷೆಯಲ್ಲಿ ತೇರ್ಗಡೆಯಾಗುವುದು ಕಾತ್ಯಾಯನಿ ಹೋಗಬಯಸುತ್ತಿದ್ದ ನೂತನ ಜಗತ್ತಿನ ಸೇತುವೆ ಎಂಬುದನ್ನು ನಾನು ಅರಿತಿದ್ದುದರಿಂದಲೇ ಅವಳ ಅಭ್ಯಾಸಕ್ಕೆ ಭಂಗ ತರಲು ನನಗೆ ಮನಸ್ಸಿರಲಿಲ್ಲ.

ಆದರೂ ಹೋಗದೆ ದಾರಿಯೇ ಇರಲಿಲ್ಲ ಎಷ್ಟೋ ಬಾರಿ ನನಗರಿವಿಲ್ಲದಂತೆಯೇ ನನ್ನ ಕಾಲು ಅವಳ ಮನೆಯತ್ತ ನಡೆಸುತ್ತಿತ್ತು. ಮೊದಮೊದಲು

ಅವರ ಮನೆಗೆ ಹೆಚ್ಚಾಗಿ ಹೋಗಲು ನನಗೆ ಸಂಕೋಚವಾಗುತ್ತಿತ್ತು. ಏನಂದುಕೊಂಡಾರೊ ಎಂದು ಭಯವಾಗುತ್ತಿತ್ತು. ಒಮ್ಮೆ ಕಾತ್ಯಾಯನಿಯ ಮುಂದೆ ಈ ಮಾತು ಹೇಳಿದಾಗ ಅವಳು ನಕ್ಕಿದಳು. 'ಏನೂ ಅಂಥ ಹೆದರಿಕೆ ಇಲ್ಲ' ಎಂದಿದ್ದಳು.

" ಹಾಗಲ್ಲ. ಅವರಿಗೆ ಪರಿಚಯವಿರದ ಗಂಡು ಹುಡುಗನೊಬ್ಬನೊಂದಿಗೆ ನೀನು ಇಷ್ಟು ಸಲಿಗೆಯಾಗಿರುವುದನ್ನು ನೋಡಿದರೆ ಅವರು ಏನೂ ಅಂದುಕೊಳ್ಳುವುದಿಲ್ಲವೇ ಕಾತ್ಯಾಯನಿ ?"

" ಊಹೂ. ಅವರಿಗೆ ಅದಕ್ಕಿಂತಲೂ ಭಯಂಕರವಾದ ವಸ್ತುವೊಂದಿದೆ."

" ಏನದು ?"

" ನನ್ನ ಕಮ್ಯುನಿಸಂ."

" ಅಂದರೆ—?"

" ಕಮ್ಯುನಿಸಂ ಅಂದರೆ ಗೊತ್ತಿಲ್ಲವೇ ?"

" ಗೊತ್ತು. ಅದೂ ಒಂದು ರಾಜಕೀಯ ಮಾತು."

" ಅದೂ ಒಂದು, ಒಂದೇನು, ಅದು ಒಂದೇ ಒಂದು ರಾಜಕೀಯವಾದ; ಉಳಿದುದೆಲ್ಲಾ ಶೋಷಣೆಯ ಸಹಸ್ರನಾಮ "

" ಏನೋ ಇರಬಹುದು. ಆದರೆ ಇವರು ಅದಕ್ಕೆ ಅಷ್ಟು ಬೆದರುವುದೇಕೆ?"

" ಏಕೇ ? ಅಷ್ಟು ಅರ್ಥವಾಗುವುದಿಲ್ಲವೇ ನಿನಗೆ – ಕಮ್ಯುನಿಸಂ ಇವರ ಬುಡಕ್ಕೇ ಸಿಡಿಲ ಪೆಟ್ಟು. ಅದಕ್ಕೇ ಏನಾದರೂ ಮಾಡಿಕೊಳ್ಳಲಿ, ಆ ದಾರಿ ತುಳಿಯದಿದ್ದರಾಯಿತು ಎಂದು ಇದಾರೆ. ನಿನ್ನೊಂದಿಗೆ ನಾನು ಸಲಿಗೆಯಾಗಿದ್ದರೆ ಏನಾದೀತು ಹೆಚ್ಚಾದರೆ ನಮ್ಮಿಬ್ಬರ ಮದುವೆಯಾದೀತು ಅಲ್ಲವೇ? ಆದರೆ ಅದರಿಂದ ಅವರಿಗೇನೂ ಭಯವಿಲ್ಲ. ನಾನು ನೀನು ಮದುವೆಯಾಗುವುದೂ ಇವರ ಕಿರೀಟದ ತುರಾಯಿ ಆಗುತ್ತದೆ."

" ಅಂದರೆ—"

" ಅಂತರ್ಜಾತೀಯ ವಿವಾಹವನ್ನು ಪುರಸ್ಕರಿಸಿದ ನಾವೇ ಪ್ರಗತಿ ಮಾರ್ಗದ ಕೈದೀವಿಗೆಗಳು ಎಂದು ಮೆರೆಯುತ್ತಾರೆ. ಆದ್ದರಿಂದ ಅವರಿಗಿಲ್ಲದ ಹೆದರಿಕೆ ನಿನಗೇಕೆ ? "

" ಅಂದರೆ–ಕಮ್ಯುನಿಸಂ ಅಷ್ಟು ಭಯಂಕರ ವಸ್ತುವೇ ? "

" ಇವರ ದೃಷ್ಟಿಯಲ್ಲಿ ಅದು ಭಯಂಕರ ವಸ್ತು. ನೀನೂ ಕಮ್ಯುನಿಸ್ಟ್ ಆಗಿ ನೋಡು, ಇವರು ಆಗ ನಿನ್ನನ್ನು ಕಂಡರೆ ಎಷ್ಟು ಹೆದರುತ್ತಾರೆ. ನನ್ನ

ಅತ್ತಿಗೆಯೋನಾದರೂ ' ಇದೇನು ಹಗಲೆಲ್ಲಾ ಹೀಗೆ ಬರುತ್ತೀರಿ ' ಎಂದರೆ, ನಾನು ಕಮ್ಯುನಿಸ್ಟ್ ಎನ್ನು. ಈ ಬಾಗಿಲುಗಳು ತೆರೆಯುವುದು ಇರಲಿ, ಚೌಕಟ್ಟು ಸಹಾ ಕಳಚಿ ಬಿದ್ದುಹೋಗುತ್ತದೆ. ....ನಿಜವಾಗಿಯೂ ರಾಜಶೇಖರ್, ನೀನು ಕಮ್ಯುನಿಸ್ಟ್ ಆಗಿದ್ದರೆ ಎಷ್ಟು ಚೆನ್ನಾಗಿತ್ತು."

" ಈಗ ನಾನಾಗಲೇ ಒಂದು 'ಇಸ್ಟ್' ಆಗಿದೇನೆ. ಅದೊಂದು ಉಳಿಸಿಕೊಂಡರೆ ಸಾಕು."

" ನಿಜವೇ – ರಾಜಕೀಯದಲ್ಲಿ ಆಸಕ್ತಿಯೇ ಇಲ್ಲ ಎನ್ನುತ್ತಿದ್ದೆ ? "

" ನಿಜ. ಆಗಲೂ ರಾಜಕೀಯದಲ್ಲಿ ಆಸಕ್ತಿ ಇರಲಿಲ್ಲ. ಈಗಲೂ ಇಲ್ಲ."

" ಮತ್ತೆ ? ನಾನೂ ಒಬ್ಬ ಇಸ್ಟ್ ಎಂದೆ."

" ಹೌದು."

" ಹಾಗಾದರೆ ನಿನ್ನ ದಾವ ಇಸಂ ? "

" ಕಾತ್ಯಾಯನಿಸಂ. ಇಂದಿಗೂ ಎಂದೆಂದಿಗೂ ಅದೊಂದೇ ಇಸಂ ನಾನು ಗೌರವಿಸುವುದು."

ನಾನು ಆ ಮಾತಾಡಿದಾಗ ಕಾತ್ಯಾಯನಿಯೂ ನನ್ನೊಂದಿಗೆ ನಗೆಯಲ್ಲಿ ಬೆರೆತರೂ, ಆ ನಗೆಯಲ್ಲಿ ಎಲ್ಲೋ ನಿರಾಶೆಯ ಗಾಳಿ ಸುಳಿಯುತ್ತಿತ್ತು.

ಕಾತ್ಯಾಯನಿ 'ಬೇಕಾದಾಗ ಬಾ. ಯಾರೂ ಏನೂ ಅನ್ನುವುದಿಲ್ಲ' ಎಂದಾಗ ಅದು ಹುಡುಗಾಟಕ್ಕಾಡಿದ ಮಾತು ಎಂದೇ ತಿಳಿದಿದ್ದೆ. ಆದರೆ ಬರಬರುತ್ತಾ ಅವಳಾಡಿದುದು ಸತ್ಯ ಎನಿಸಿತು. ಅವಳ ಅಣ್ಣ ಅತ್ತಿಗೆಯರಿಗೆ ಕಾತ್ಯಾಯನಿಯಲ್ಲಿ ಏನೂ ಆಸಕ್ತಿ ಇದ್ದಂತಿರಲಿಲ್ಲ. ಅವರ ಆ ಬಗೆಯ ಮನೋಭಾವವನ್ನು ಕಂಡು ನನಗೆ ಕರುಳಿರುವಷ್ಟು ಯಾತನೆಯಾದರೂ, ದುಃಖಮಯವಾದ ಜಗತ್ತಿನಲ್ಲಿ ಇರುವ ಆನಂದವೇ ಪರಮ ಸತ್ಯವೆಂದು ನಂಬುವ ಚಾರ್ವಾಕನಂತೆ ನಾನೂ, ಅವರ ತಾತ್ಸಾರದ ಭಾವನೆಯನ್ನು 'ಅದೂ ಒಳ್ಳೆಯದೇ' ಎಂದುಕೊಂಡಿದ್ದೆ.

ಇದರಿಂದಾಗಿ ನನಗೆ ಕಾತ್ಯಾಯನಿಯನ್ನು ಬೇಕಾದಾಗ ಹೋಗಿ ನೋಡಲು ಏನೂ ಅಡ್ಡಿ ಇರಲಿಲ್ಲ. ಆದರೂ ಹೆಚ್ಚಾಗಿ ಹೋಗಲು ಹಿಂಜರಿಯುತ್ತಿದ್ದೆ – ಅವಳ ಓದಿಗೆ ಎಲ್ಲಿ ವಿಘ್ನವಾಗುವುದೋ ಎಂದು

ಆದರೂ ಒಮ್ಮೊಮ್ಮೆ ಒಯಕೆ ಎಲ್ಲ ಭೀತಿಯನ್ನೂ ಮೆಟ್ಟಿ ನನ್ನ ಕಾಲನ್ನು ಅವಳ ಮನೆಯತ್ತ ನಡೆಸುತ್ತಿತ್ತು. ಹಾಗೆ ಹೋಗುವ ಗಳಿಗೆಯನ್ನು ನನ್ನಷ್ಟೇ ಕಾತ್ಯಾಯನಿಯೂ ನಿರೀಕ್ಷಿಸುತ್ತಿದ್ದಂತಿತ್ತು. ನನ್ನನ್ನು ಕಂಡಕೂಡಲೇ ಓದಿನಿಂದ ಜಡವಾದ ಅವಳ ಕಣ್ಣುಗಳು ಥಳಥಳಿಸಿ, ಮುಖಕ್ಕಾವುದೋ ಅಪೂ

ರ್ವಕಾಂತಿ ಬರುತ್ತಿತ್ತು.

ಅದೇ ಮೊಗ – ಅದೇ ಬೆಳದಿಂಗಳು ಚೆಲ್ಲುವ ಕಣ್ಣು, ಅದೇ ಮಧು ಸೂಸುವ ತುಟಿ, ತುಟಿಯಮೇಲಿನ ತುಂಟನಗೆಯಂತೆ, ಕೊಂಕುಕೊಂಕಾಗಿ ಸುಳಿದು ಎದೆಯನ್ನು ಕೆರಳಿಸುವ ಮುಂಗುರುಳು ಮುತ್ತಿಡುವ ಮುದ್ದಾದ ಹಣೆ, ನೋಡಿದಷ್ಟೂ ನೋಡಬೇಕೆನ್ನಿಸುವ ಚಲುವಿನ ಪುತ್ಥಳಿ. ಹತ್ತುಸಾರಿ, ನೂರು ಸಾರಿ ನೋಡಿದರೂ ಅದೇ ರೂಪ ವೈಭವ.

ಅದೇ ರೂಪ ವೈಭವ – ಊಹೂ, ಒಮ್ಮೊಮ್ಮೆ ಕಂಡಾಗಲೂ, ಒಂದೊಂದು ಬಗೆಯಾಗಿ ಎದೆಯನ್ನು ತುಂಬುತ್ತಿದ್ದಳು ನನ್ನ ಕಾತ್ಯಾಯನಿ. ಅವಳನ್ನು ನೋಡಿದಾಗ ಅಷ್ಟುದಿನದ ಓದಿನ ಶ್ರಮ, ಚಿಂತೆಯ ಜಡತೆ ಎಲ್ಲವೂ ತೊಲಗಿಹೋಗಿ, ಹೊಸತನ ಬರುತ್ತಿತ್ತು ನನ್ನ ಮೈಗೆ. ಬಾಳ ಹೊರೆ ಹೂವಿನಷ್ಟು ಹಗುರ ಎನಿಸುತ್ತಿತ್ತು.

ಪುರಾಣಗಳಲ್ಲಿ ದೇವತೆಗಳು ಋಷಿಗಳ ತಪೋಭಂಗಕ್ಕಾಗಿ ಅಪ್ಸರೆಯ ರನ್ನು ಕಳುಸುತ್ತಿದ್ದರಂತೆ. ಅಪ್ಸರೆಯರು ತಪೋಭಂಗ ಮಾಡುತ್ತಿದ್ದರಂತೆ.

ನನ್ನ ಕಾತ್ಯಾಯನಿಯೂ ಅಪ್ಸರೆಯೇ – ಅದರಲ್ಲಿ ನನಗೆ ಏನೂ ಅನು ಮಾನವಿಲ್ಲ. ಆದರೆ ಅವಳಿಂದ ತಪೋಭಂಗವಾಗುತ್ತಿರಲಿಲ್ಲ; ನನ್ನ ಓದಿಗೆ ವಿಘ್ನವಾಗುತ್ತಿರಲಿಲ್ಲ. ನನ್ನ ಅಭ್ಯಾಸದ ಉತ್ಸಾಹಕ್ಕೆ ರೆಕ್ಕೆ ಬರುತ್ತಿತ್ತು. ಗೈನೆಕಾಲಜಿ, ಅಬ್‌ಸ್ಟೆಟ್ರಿಕ್ಸ್, ಪೇಡಿಯಾಟ್ರಿಕ್ಸ್, ಮೆಡಿಕಲ್ ಜ್ಯೂರಿಸ್ ಪ್ರುಡೆನ್ಸ್, ಮೆಟಿರಿಯಾ ಮೆಡಿಕಾದಂಥ ಮರಳು ಜಗಿದಂತಾಗುವ ವಿಷಯ ಗಳೂ ಕಾದಂಬರಿ ವಾಚನದಷ್ಟು ರಂಜಕವಾಗುತ್ತಿತ್ತು, ಸಾವು, ರೋಗ, ಶವ ಗಳ ಪ್ರಪಂಚವೂ ಕಿನ್ನರಿ ಜಗತ್ತಾಗುತ್ತಿತ್ತು.

ಆ ಪುರಾಣ ಕಾಲದ ಅಪ್ಸರೆಯರಲ್ಲಿ ಕಾತ್ಯಾಯನಿಯಂಥವರು ಇರಲಿಲ್ಲ ಎಂದು ಕಾಣುತ್ತದೆ ಇದ್ದಿದ್ದರೆ ಅವಳನ್ನು ತಪೋಭಂಗಕ್ಕಾಗಿ ಕಳಿಸಿದ ಇಂದ್ರ ಭಾರಿ ಬೇಸ್ತು ಬೀಳುತ್ತಿದ್ದ!

ನಿಜ–ವಿಚಿತ್ರ ಹೆಣ್ಣು ನನ್ನ ಕಾತ್ಯಾಯನಿ.

ಅವಳು ನನ್ನಿಂದ ದೂರವಿದ್ದಾಗ, ಒಂಟಿಯಾಗಿದ್ದಾಗ ಅವಳ ನೆನಪು ನನ್ನೆದೆಯಲ್ಲಿ ಸುಳಿದಾಗ, ಅವಳನ್ನು ಕಾಣುವ ಕುತೂಹಲ ನನ್ನೆದೆಯಲ್ಲಿ ಕೆರಳಿದಾಗ—

ನೂರು ಮಧುರ ಭಾವಗಳು ಸುಳಿಯುತ್ತಿದ್ದುವು, ಹುಚ್ಚು ಮಾತುಗಳು ನನ್ನ ನಾಲಗೆಯಂಚಿನಲ್ಲಿ ರೂಪುಗೊಳ್ಳುತ್ತಿದ್ದುವು; ಅವಳ ಮೈ ನನ್ನ ಮನ ವನ್ನು ತುಂಬುತ್ತಿತ್ತು.

ಚುಂಬನ–ಆಲಿಂಗನ–ರತಿಯ ಬಯಕೆ ನನ್ನೆದೆಯಲ್ಲಿ ದುಳ್ಳುರಿಯಾಗಿ ದಹಿಸುತ್ತಿತ್ತು. ನಾನು ಗಂಡು–ಅವಳು ಹೆಣ್ಣು.

ಅವಳು ಹೆಣ್ಣು–ನಾನು ಗಂಡು.

ನನ್ನೆದೆಯಲ್ಲಿ ಮೂಡುವಂಥ ಭಾವನೆಗಳೇ ಅವಳ ಹೃದಯದಲ್ಲೂ ಹರಿಯುತ್ತಿರಬೇಕು. ಇರಬೇಕು ಏನು, ಇದೆ. ನಾನು ಬಲ್ಲೆ.

ಒಮ್ಮೆ ಸುಮಾರು ಒಂದು–ಒಂದೂವರೆ ತಿಂಗಳ ಕಾಲ ಒಬ್ಬರನ್ನೊಬ್ಬರು ನೋಡಲಾಗದಿದ್ದಾಗ, ಎಷ್ಟೋ ಯುಗಗಳ ಬಳಿಕ ಒಬ್ಬರನ್ನೊಬ್ಬರು ನೋಡಿದಾಗ—

ಒಂದು ಗಳಿಗೆ ಬೆದರಿದ ಜಿಂಕೆಯಂತೆ ಸುತ್ತಮುತ್ತ ನೋಡಿ, ಮರುಗಳಿಗೆಯೇ ನನ್ನನ್ನು ಬಿಗಿದಪ್ಪಿ, ಚುಂಬಿಸಿ ನನ್ನ ಬಾಳನ್ನು ಧನ್ಯ ಮಾಡಿದ್ದಳು ಕಾತ್ಯಾಯನಿ.

ಆದರೂ–ಆದರೂ—

ನೋಡಿದ ಕೂಡಲೇ ಒಂದು ಗಳಿಗೆ ಬಯಕೆ ನಮ್ಮಿಬ್ಬರ ಕಣ್ಣುಗಳಲ್ಲೂ ಉರಿದು, ಮರುಗಳಿಗೆ ಮಾತು ಬೇರೆತ್ತಲೋ ಹೊರಳುತ್ತಿತ್ತು. ಏನೋ ಚರ್ಚೆ ಮಾಡುತ್ತಿದ್ದೆವು. ಮಾತಿನ ಕಾವಿನಲ್ಲಿ ಮೈಮರೆಯುತ್ತಿದ್ದೆವು. ಮಾತಿನಲ್ಲೇ ಹೊತ್ತುಕಳೆದು ಅಗಲುತ್ತಿದ್ದೆವು.

ಆದರೂ—ಪ್ರಣಯವಂಚಿತನಾದೆನೆಂಬ ಭಾವನೆ ನನ್ನಲ್ಲಿ ಬರುತ್ತಿರಲಿಲ್ಲ.

ನಮ್ಮಿಬ್ಬರ ಬಾಳನ್ನು ಒಂದಾಗಿ ಬೆಸೆಯಲು ಪ್ರಣಯದ ಮಾತುಗಳೇ ಬೇಕು ಎನಿಸುತ್ತಿರಲಿಲ್ಲ. ಅವಳೊಂದಿಗೆ ನಾನಾಡುವ ಮಾತು, ನನ್ನೊಂದಿಗೆ ಅವಳಾಡುವ ಮಾತು, ವಿಷಯ ಯಾವುದಾದರೇನು, ಎಲ್ಲವೂ ಪ್ರಣಯ ಸಲ್ಲಾಪವೇ ಎನಿಸುತ್ತಿತ್ತು. ಅದಕ್ಕಾಗಿ ಜಗತ್ತು ಹುಟ್ಟಿದಂದಿನಿಂದ ಇಂದಿನವರೆಗೆ, ಕೋಟ್ಯಾಂತರ ಜನ ಬಳಸಿ ಬಳಸಿ ಹಳತಾದ ಮಾತುಗಳ ಬಳಕೆಯ ಅಗತ್ಯವಿರಲಿಲ್ಲ ನಮಗೆ

ಹೆಣ್ಣು–ಗಂಡನ್ನು ಬಯಸುವುದೇಕೆ ಎಂಬುದೂ ನಮಗೆ ಗೊತ್ತಿತ್ತು. ವೈದ್ಯವಿಜ್ಞಾನದ ವಿದ್ಯಾರ್ಥಿಗಳಾದ ನಮಗೆ, ಆ ರಂಗದಲ್ಲಿ ನಾವು ಅರಿಯದ ವಿಸ್ಮಯವಾವುದೂ ಇರಲಿಲ್ಲ. ಆ ಪರಿಚಯದಿಂದಲಾಗಿಯೋ ಏನೋ–ಆ ಬಗ್ಗೆ ನಮ್ಮಲ್ಲಿ ಹೆಚ್ಚಿನ ದಾಹವೇನೂ ಇರಲಿಲ್ಲ.

ಬೇಕಾದಾಗ, ಬೇಕೆನಿಸಿದಾಗ, ಬೇಕೆನಿಸಿ ಬೇಡಿದಾಗ–ದೇಹಯಂತ್ರಗಳು ತಮ್ಮ ಸ್ವಾಭಾವಿಕ ಕರ್ತವ್ಯವನ್ನು ನಿರ್ವಹಿಸಲು ಸಿದ್ಧವಾಗಿದ್ದವು ಆ ಬಗ್ಗೆ ನನಗೆ ವಿಶೇಷ ಆತುರವೂ ಇರಲಿಲ್ಲ, ಅದರ ಭಯವೂ ಇರಲಿಲ್ಲ.

ನನಗೆ ನಂಬಿಕೆಯಾಗಿತ್ತು.

ಕಾತ್ಯಾಯನಿಯ ಒಲವು ನನ್ನದಾಗಿತ್ತು ; ಅವಳ ಮೈ ಬೇಕೆನಿಸಿದಾಗ ನನ್ನದಾಗಲು ಸಿದ್ಧವಿತ್ತು. ಆದರೆ, ಆದರೆ, ಅವಳ ಬುದ್ಧಿ ಮಾತ್ರ ನನ್ನ ಕೈಗೆ ಸಿಗದೆ, ಮಿಸುನಿ ಜಿಂಕೆಯಂತೆ, ಹತ್ತಿರ ಸುಳಿದೂ ಕೈಗೆ ಸಿಗದೆ ಎತ್ತೆತ್ತಲೋ ಹರಿಯುತ್ತಿತ್ತು.

ಉಳಿದೆಲ್ಲ ವಿಷಯಗಳಲ್ಲೂ ಒಂದಾಗಿ ಹರಿವ ನಮ್ಮ ಜಾಡು ಅಲ್ಲಿ ಕವಲೊಡೆದು, ಅವಳ ಬುದ್ಧಿ ನಾನು ಕಾಣದ, ಅರಿಯದ ಬೇರಾವುದೋ ಲೋಕದತ್ತ ಓಡಿ, ನಮ್ಮ ಬಾಳು ಅಸಂಪೂರ್ಣ ಎನಿಸುತ್ತಿತ್ತು.

ತನ್ನ ದಾರಿಯಲ್ಲೇ ಓಡುವ ಅವಳ ಬುದ್ಧಿ ಒಮ್ಮೊಮ್ಮೆ ನನ್ನನ್ನು ವಿಸ್ಮಯಗೊಳಿಸಿದರೆ, ಇನ್ನೊಮ್ಮೊಮ್ಮೆ ಕಾರಣ ತಿಳಿಯದ ಭಯದಲ್ಲಿ ಅದ್ದುತ್ತಿತ್ತು

ನನ್ನ ಬುದ್ಧಿಗೂ ನಿಲುಕದ ಯಾವುದೋ ದೂರದಿಗಂತದಲ್ಲಿ ಮರೆಯಾಗಿನಿಂತ ಭವಿಷ್ಯವನ್ನು ಕಣ್ಣಾರೆ ಕಂಡಂತೆ ಅವಳು ಬಣ್ಣಿಸುವಾಗ, ನನಗೆ ಆಶ್ಚರ್ಯವಾದಷ್ಟೇ ಭಯವೂ ಆಗುತ್ತಿತ್ತು,

ಅವಳ ರಾಜಕೀಯ ಓದು, ಅವಳಿಗೆ ಭವಿಷ್ಯವನ್ನು ನುಡಿಯುವ ಶಕ್ತಿಯನ್ನು ನೀಡಿದಂತಿತ್ತು. ಅವಳು ಹೇಳುತ್ತಿದ್ದುದರಲ್ಲಿ ಅರ್ಥವಿರಲಿಲ್ಲವೆಂದಲ್ಲ, ಅರ್ಥವಿತ್ತು. ಆದರೆ ಆ ಅರ್ಥವನ್ನು ಒಪ್ಪಲು ನನ್ನ ಮನಸ್ಸು ಸಿದ್ಧವಾಗಿರಲಿಲ್ಲ. ಎಷ್ಟೋ ಬಾರಿ ಅವಳ ಬುದ್ಧಿ ಓದುತ್ತಿರುವ ಜಾಡು ತಪ್ಪು ಎಂದು ತೋರುತ್ತಿತ್ತು. ಏನೋ ಅಕಾರಣ ದ್ವೇಷ, ನಿರಾಶಾವಾದ, ಹಿಂಸೆಯ ಬಯಕೆ ಅವಳ ಬುದ್ಧಿಯನ್ನು ನಡೆಸುತ್ತಿದೆ ಎಂದೇ ನನಗೆ ತೋರುತ್ತಿತ್ತು ಯಾವುದೋ ಕುರುಡು ಭಾವನೆಯ ಬಲೆಗೆ ಬಿದ್ದು, ಅನವಶ್ಯಕವಾಗಿ ಅವಳು ತನ್ನ ಬಾಳನ್ನು ಕಹಿಯಾಗಿ ಮಾಡಿಕೊಳ್ಳುತ್ತಿದ್ದಾಳೆ ಎಂದೇ ನನಗನಿಸುತ್ತಿತ್ತು. ಆ ವಿಷಯವಾಗಿ ಅವಳು ಕಕ್ಕುಲತೆಯಿಂದ ಮಾತನಾಡಿದಾಗ, ಯಾವುದೋ ಘೋರ ನಿರಾಶೆ ಅವಳ ಹೃದಯವನ್ನು ಹಿಂಡಿ ಹಿಂಸೆಗೆ ಪ್ರೇರೇಪಿಸುತ್ತಿದೆ ಎನಿಸಿ, ಅವಳ ಕಾತುರವನ್ನು ಕಂಡು ನನ್ನೆದೆಗೂ ನೋವಾಗುತ್ತಿತ್ತು. ' ಬರಲಿರುವ ಹೋರಾಟ ' ಎನ್ನುವ ಮಾತು ಅವಳ ಬಾಳಗೀತೆಯ ಪಲ್ಲವಿಯಾಗಿ ' ನವ ಜಗತ್ತು ' ಅದರ ಮುಕ್ತಾಯದ ಸಾಲಾಗಿತ್ತು.

' ಬರಲಿರುವ ಹೋರಾಟ ' ' ಬರಲಿರುವ— ನವಜಗತ್ತು '

ಅವೆರಡರ ನಡುವೆ ತೊಳಲುತ್ತಿದ್ದಳು ನನ್ನ ಕಾತ್ಯಾಯನಿ.

ಒಮ್ಮೆ ಅದೇ ರೀತಿಯ ಚರ್ಚೆ ನಮ್ಮಿಬ್ಬರ ನಡುವೆ ನಡೆದಿದ್ದಾಗ ಹೇಳಿದೆ :

" ನೀನು ಹೇಳುವುದು ನಿಜವಿರಬಹುದು, ಸುಳ್ಳಿರಬಹುದು ಕಾತ್ಯಾಯನಿ. ಆದರೆ ನಿಜ ಹೇಳಬೇಕೆಂದರೆ – ನನಗೇನೋ ನೀನು ಯಾವುದೋ ಕನಸಿನಲ್ಲಿ ಕಂಡ ನೆರಳಿನೊಡನೆ ಹೋರಾಡುತ್ತಿರುವಂತಿದೆ."

" ನಾನು ಹೋರಾಡುತ್ತಿರುವುದು ಕನಸಿನಲ್ಲಿ ಕಂಡ ನೆರಳಲ್ಲ ರಾಜ ಶೇಖರ – ಘೋರ ವಾಸ್ತವತೆ. ರಾಜಕೀಯ ವಿಷಯದ ಅಜ್ಞಾನದ ಕಣ್ಣು ಕಪಡ ಹಾಕಿಕೊಂಡು ಯಾವುದೋ 'ಸೆಂಟಿಮೆಂಟ್' ನ ಕುರುಡು ಜಾಡಿನಲ್ಲಿ ನಡೆಯುತ್ತಿರುವ ನಿನಗೆ, ನಾನಾಡುವ ಮಾತು ನೆರಳಿನೊಂದಿಗೆ ಹೋರಾಟ ವೆಂದೇ ಈಗ ತೋರಬಹುದು. 'ಬರಲಿರುವ ಹೋರಾಟ' ದ ಮಾತು ಉನ್ಮತ್ತ ಕನಸಿನ ಬಡಬಡಿಕೆ ಎಂದೇ ಅನಿಸಬಹುದು. ನೀನೊಬ್ಬನೇನು–ನಿನ್ನ ಹಾಗೇ ತಿಳಿದಿರುವ ಕುರುಡು ಕುರಿಗಳು ನಮ್ಮ ದೇಶದಲ್ಲಿ ಕೋಟಿ ಕೋಟಿ ಸಂಖ್ಯೆಯಲ್ಲಿದ್ದಾರೆ. ಆದರೆ ಆ ಹೋರಾಟ ಬಂದಾಗ ಅವರ ಕಣ್ಣು ತೆರೆಯು ತ್ತದೆ. 'ಇಂದು ನಮ್ಮ ಸುತ್ತ ವ್ಯಾಪಿಸಿರುವ ಅಸಮತೆಯ ವಿಷ, ಆ ಕ್ರಾಂತಿಯ ಅಗ್ನಿ ಚಿಕಿತ್ಸೆಯಿಂದಲ್ಲದೆ ತೊಲಗದು. ನಮ್ಮ ಸುತ್ತಲ ಬಾಳು ಕ್ರಾಂತಿಯ ಬಯಕೆಯಿಂದ ಕುದಿಯುತ್ತಿರುವುದು ನಿನಗೆ ಕಾಣದೇ ರಾಜಶೇಖರ್. ನಾನು-ನೀನು ಆ ಬಾಳಿನ ಒಂದು ಭಾಗ. ನನ್ನದು–ನಿನ್ನದು ಎನ್ನುವ ಖಾಸಗಿ ಜಗತ್ತು ಬರೀ ಪೊಳ್ಳು ವೇದಾಂತ. ಅಂಥ ಖಾಸಗಿ ಜಗತ್ತು ಇಲ್ಲವೇ ಇಲ್ಲ. ಖಾಸಗಿ ಜಗತ್ತಿನ ಮಾತು, ಕ್ರಾಂತಿಯ ಶಕ್ತಿಗಳನ್ನು ಬೇರೆ ಬೇರೆ ಗುಂಪಾಗಿ ಒಡೆಯಲೆತ್ನಿಸುವ ಕುಹಕ. ನಾವೆಲ್ಲರೂ–ನಾನೂ, ನೀನೂ ಸಹ–ಒಂದೇ ಬಲೆಗೆ ಬಿದ್ದ ಮೀನುಗಳು. ಆ ಬಲೆಯನ್ನು ಹರಿಯದೆ ನಾವು ಬದುಕುವುದು ಸಾಧ್ಯವಿಲ್ಲ. ಎಂತಲೇ ಆ ಬಲೆ ಹರಿಯಲು ನಾವು ಸಿದ್ಧವಾಗಬೇಕು. ಬಲೆ ಹರಿವ ಹೊತ್ತು ಬಂದಾಗ ಬೇಕಾಗುವ ತೋಳಬಲವನ್ನು ಬೆಳೆಸಿಕೊಳ್ಳಬೇಕು."

ಗಾಳಿಯುಂಡ ಉರಿಯ ನಾಲಗೆಯಂತೆ ಪ್ರಜ್ವಲಿಸುತ್ತಾ ಹೇಳಿದಳು ಕಾತ್ಯಾಯನಿ. ಅವಳ ಮಾತನ್ನು ಕೇಳಿ ನನಗೆ ದಿಗ್ಭ್ರಮೆಯಾಯಿತು , ದಿಗಿಲಾಯಿತು. ಇಷ್ಟೇಕೆ ಹೋರಾಟದ ಕನಸು, ಇಷ್ಟೇಕೆ ಅದರ ಹಂಬಲ ?

" ಹೋರಾಟ – ಹೋರಾಟ – ಹೋರಾಟ. ಈಗ ನಡೆಯುತ್ತಿರುವ ಹೋರಾಟ, ಸಾವು, ರಕ್ತವೃಷ್ಟಿ ಸಾಲದೇ ಕಾತ್ಯಾಯನಿ ಮತ್ತಷ್ಟು ಬೇಕೆಂಬ ಚಪಲವೇಕೆ ? ಹೋರಾಟದಿಂದ ವಿಶ್ರಾಂತಿಯೇ ಬೇಡವೇ ? ಹೋರಾಟವಲ್ಲದೆ ಬೇರೆ ಕೆಲಸವೇ ಇಲ್ಲ. ಒಂದು ಯುದ್ಧ ಮುಗಿವ ಮೊದಲೇ ಮತ್ತೊಂದು ಯುದ್ಧದ ಮಾತೇ ? "

" ಈಗ ನಡೆಯುತ್ತಿರುವ ಯುದ್ಧಕ್ಕೂ ನಮ್ಮ ಹೋರಾಟಕ್ಕೂ ಸಂಬಂಧ

ಕಲ್ಪಿಸಬೇಡ ರಾಜಶೇಖರ."

"ಏಕೆ ?"

"ಇದು ದರೋಡೆಗಾರರಲ್ಲಿ ನಡೆದ ಒಳಜಗಳ."

"ನಿನ್ನಷ್ಟು ನಾನು ರಾಜಕೀಯವನ್ನು ಓದಿಕೊಂಡಿಲ್ಲ ಕಾತ್ಯಾಯನಿ, ನಿಜ. ಆದರೆ–ನೀನು ಹೇಳಿದ ಮಾತನ್ನು ಒಪ್ಪಲಾರೆ. ಕೋಟಿ ಕೋಟಿ ಜನರ ಈ ಜೀವತ್ಯಾಗ ಬರೀ ದರೋಡೆಗಾರರ ಒಳಜಗಳವೇ ?"

"ಅಲ್ಲವಾದರೆ ಮತ್ತೇನು ?"

"ಸರ್ವಾಧಿಕಾರದ ರಾಕ್ಷಸೀ ಶಕ್ತಿಯ ವಿರುದ್ಧ ಪ್ರಜಾಪ್ರಭುತ್ವ ಹೂಡಿ, ಗೆದ್ದ ಸಮರ."

"ಅದು ನಿನ್ನ ತಪ್ಪು ಭಾವನೆ."

"ಹಾಗಾದರೆ ನಿಜವಾದ ಭಾವನೆ ಏನು ?"

"ನಾನು ಹೇಳಿದುದೇ. ಹಿಟ್ಲರ್ ಸರ್ವಾಧಿಕಾರಿ. ಆದರೆ ಹಾಗೆಂದು ಅವನನ್ನು ಕರೆದು ಯುದ್ಧ ಹೂಡಿದ ಬ್ರಿಟನ್, ಅಮೇರಿಕಾ ಪ್ರಜಾಪ್ರಭುತ್ವ ವಾದಿಗಳೇ ? ಊಹೂ. ಬ್ರಿಟನ್ ಜಗತ್ತಿನ ಅತ್ಯಂತ ಹಳೆಯ ಸಾಮ್ರಾಜ್ಯ ಶಾಹಿ, ಅಮೆರಿಕಾ ಅತ್ಯಂತ ಪ್ರಬಲ ಬಂಡವಾಳಶಾಹಿ ಇವರ ನಡುವೆ ನಡೆದ ಹೋರಾಟ – ಈ ಜಗತ್ತನ್ನು ಕೊಳ್ಳೆ ಹೊಡೆಯುವ ಅಧಿಕಾರ ಯಾರಿಗೆ ಇರಬೇಕು ಎಂಬುದಕ್ಕಾಗಿ. ತಮ್ಮ ಈ ಪಿಶಾಚ ಬಯಕೆಯನ್ನು ಮುಚ್ಚಲು, ನಿನ್ನಂಥವರನ್ನು ಮೋಸಗೊಳಿಸಲು ಪ್ರಜಾಪ್ರಭುತ್ವದ ಮುಖವಾಡ ಹಾಕಿದ್ದರು."

"ಅಷ್ಟೇನೇ ?"

"ಅಷ್ಟಲ್ಲದೆ ಮತ್ತೇನು ಬ್ರಿಟನ್ನಿಗೆ ಪ್ರಜಾಪ್ರಭುತ್ವದಲ್ಲಿ ನಂಬಿಕೆ ಇರುವುದಾದರೆ, ಭಾರತಕ್ಕೆ ಸ್ವಾತಂತ್ರ್ಯವನ್ನೇಕೆ ಕೊಡುತ್ತಿಲ್ಲ. ಬ್ರಿಟಿಷ್ ಆಳ್ವಿಕೆಯ ಸಹಸ್ರ ಅಪಮಾನವನ್ನು ಗಳಿಗೆ ಗಳಿಗೆಯೂ ನುಂಗುತ್ತಾ, ನೀನೂ ಅವರ ಮಾತು ನಂಬುತ್ತೀಯಾ ? ಆದಕ್ಕೇ ನಿನ್ನನ್ನು 'ಮುಗ್ಧ ಹಸುಳೆ' ಎಂದು ಕರೆದದ್ದು. ಈ ದಿನ ಫ್ಯಾಸಿಸಂ ಅನ್ನು ಗೆದ್ದದ್ದು ಸಾಮ್ರಾಜ್ಯಶಾಹಿ. ಆ ಸಾಮ್ರಾಜ್ಯಶಾಹಿಯನ್ನು ಗೆಲ್ಲುವುದು ಮುಂದಿನ ಹೋರಾಟ. ಅದು ಮುಗಿದ ಮೇಲೆ—"

"ಅಂದರೆ ಅಲ್ಲಿಗೇ ಮುಗಿಯುವುದಿಲ್ಲವೇ ನಿನ್ನ ಹೋರಾಟದ ಪಟ್ಟಿ"

"ಊಹೂ—"

"ಇಲ್ಲವೇ – ಆಮೇಲೆ ಯಾರ ಮೇಲೆ ?"

"ಸಾಮ್ರಾಜ್ಯಶಾಹಿಯ ಬೆನ್ನೆಲುಬಾದ ಬಂಡವಾಳಶಾಹಿಯ ಮೇಲೆ,

ಬಂಡವಾಳಶಾಹಿಯ ಸಹಸ್ರ ಶಸಿಸಂತಾನದ ಮೇಲೆ. ಬಂಡವಾಳಶಾಹಿ ಸತ್ತ ಮೇಲೆ ನಮ್ಮ ಹೋರಾಟ ಮುಗಿಯುವುದು. ಅದು ಕೊನೆಯ ಸಮರ."

" ಅದೇ ಕೊನೆಯ ಸಮರವೇ ? "

" ಹೂ."

" ನನಗೇಕೋ ಅದೇ ಕೊನೆಯ ಸಮರವೆಂದು ನಂಬಿಕೆಯಾಗುವುದಿಲ್ಲ."

" ಏಕೆ ? "

" ಇನ್ನೂ ಒಂದು ಇದೆ ಎಂದು ಅನ್ನಿಸುತ್ತದೆ."

" ಮತ್ತಾವುದು ? "

" ಆ ಮೇಲೆ ನೀನು ನನ್ನ ಮೇಲೆ ಯುದ್ಧ ಹೂಡಬಹುದು. ನಿನ್ನ ಉಳಿದಾವ ಯುದ್ಧಗಳಿಗೂ ನಾನು ಬೆದರುವುದಿಲ್ಲ ಕಾತ್ಯಾಯಿನಿ. ಆದರೆ ನಾನು ಕೊನೆಗೆ ಹೇಳಿದ ಸಮರವನ್ನೇನಾದರೂ ಹೂಡಿದೆಯೋ–ಆಗ ನಾನು ಕೆಟ್ಟೆ. ಅದೇನಾದರೂ ನಿನ್ನ ಪ್ರೋಗ್ರಾಂನಲ್ಲಿದ್ದರೆ ಹೇಳು–ಈಗಲೇ ಸೋಲೊಪ್ಪಿಕೊಂಡು ಬಿಡುತ್ತೇನೆ."

—ನಗುತ್ತಾ ಹೇಳಿದೆ ನಾನು.

" ರಾಜಾ... .. ರಾಜಾ .. ನಮ್ಮ ಈ ಮಾತೆಲ್ಲವೂ ಹೀಗೇ ನಗೆಯಲ್ಲೇ ಮುಕ್ತಾಯವಾಗಬೇಕೇ ? "

—ನನ್ನ ನಗು ಅವಳ ಎದೆಯನ್ನಿರಿದಂತೆ ತೋರಿತು.

" ಬರೀ ಮಾತೇನು ಕಾತ್ಯಾಯನಿ. ನಮ್ಮ ಬಾಳೇ ಹೀಗೆ ನಗೆಯಲ್ಲಿ ಮುಕ್ತಾಯವಾದರೆ ನಾನು ಧನ್ಯ."

" ನಗು....ನಗು....ಅಷ್ಟೇನೇ ನೀನು ನನ್ನ ಮಾತಿಗೆ ಕೊಡುವ ಬೆಲೆ ?"

—ನನ್ನ ತೋಳುಗಳೆರಡನ್ನೂ ಹಿಡಿದು, ಕೇಳಿದಳು. ಹಾಗೇ ಅವಳ ಭುಜದ ಮೇಲೆ ಕೈಗಳನ್ನು ಹಾಕಿ, ಅವಳ ಮುಖವನ್ನು ದಿಟ್ಟಿಸಿ ನೋಡಿದೆ. ಅವಳ ಮುಖವನ್ನಾವುದೋ ಯಾತನೆಯ ಪಸು ತುಳಿದಂತಿತ್ತು. ಅದನ್ನು ನೋಡಿ ನನ್ನ ಹೃದಯವನ್ನು ಹಿಂಡಿದ ಹಾಗಾಯಿತು. ಅವಳ ಮುಂಗುರಳನ್ನು ನೇವರಿಸಿ—

" ನನ್ನ ಮಾತಿನಿಂದ ನಿನಗೆ ನೋವಾಯಿತೇನೋ – ಕ್ಷಮಿಸು ಕಾತ್ಯಾಯಿನಿ."

" ನಿನ್ನ ಮಾತಲ್ಲ ರಾಜಾ, ನಿನ್ನ ಮುಗ್ಧತೆ ನನ್ನ ಎದೆಯನ್ನು ಇರಿಯುತ್ತಿದೆ. ನಾವೆಂಥ ಜ್ವಾಲಾಮುಖಿಯ ದಂಡೆಯ ಮೇಲೆ ಇದೇವೆ ಎನ್ನುವುದು ನಿನಗೆ ಅರಿವಾಗುತ್ತಲೇ ಇಲ್ಲವಲ್ಲ, ನಾನೇನು ಮಾಡಲಿ."

" ನೀನೇನು ಮಾಡಬೇಕೆಂದು ಹೇಳಲೇ ? "

" ಹೇಳು."

" ಹೇಳಿದರೆ ಹಾಗೆ ಮಾಡುತ್ತೀಯಾ ? "

" ನಿನಗಾಗಿ ನಾನು ಏನು ಬೇಕಾದರೂ ಮಾಡಲು ಸಿದ್ಧವಾಗಿದೇನೆ. ಹೇಳು ರಾಜಾ."

" ಹಾಗಾದರೆ – ನಗು, ಕಾತ್ಯಾಯನಿ ನಗು. ನಿನ್ನ ನಗುವಿನ ವಜ್ರ ಕೋಟಿಯೊಂದು ಇದ್ದರೆ ಎಂಥ ಜ್ವಾಲಾಮುಖಿಯ ಆಸ್ಫೋಟನಕ್ಕೂ ನಾನು ಹೆದರುವುದಿಲ್ಲ. ಇಡೀ ಲೋಕವೇ ನನ್ನ ವಿರುದ್ಧ ಎದುರುನಿಂತರೂ ಎದುರಿಸು ತ್ತೇನೆ."

" ನೀನೆಂಥ ಮುಗ್ಧ ಹಸುಳೆ ರಾಜಾ."

" ನಾನು ಮುಗ್ಧನಲ್ಲ, ನೀನು ತುಂಬಾ ಸೀರಿಯಸ್. ನಮ್ಮ ನಗು ವನ್ನು ಬಲಿಕೊಟ್ಟ ಮಾತ್ರಕ್ಕೇ ಯಾವ ಲೋಕವೂ ಉದ್ಧಾರವಾಗುವುದಿಲ್ಲ. ಉಳಿದೆಲ್ಲವೂ ಹಾಳಾಗಿ ಹೋಗುವುದಾದರೆ ಹೋಗಲಿ. ನನ್ನ ಪಾಲಿಗೆ ನಿನ್ನ ನಗೆಯೊಂದು ಚಿರವಾಗಿದ್ದರೆ ಸಾಕು "

" ನನ್ನ ನಗೆ ! ನನ್ನ ನಗೆಯೇ ನಿನ್ನ ಬಾಳ ಪರಮ ಆದರ್ಶವೇ ರಾಜಾ. ಅದು ಬಿಟ್ಟು ಬೇರೆಯಾವ ಧ್ಯೇಯವೂ ನಿನಗಿಲ್ಲವೇ ? "

" ಇದೆ."

" ಹಾಗಾದರೆ ಅದರ ಚಿಂತೆ ಮಾಡದೆ, ನನ್ನ ನಗೆಯ ಚಿಂತೆಯನ್ನೇ ಏಕೆ ಮಾಡುತ್ತೀ ? "

" ಮಾಡದೆ ? ಬೇರಾವುದರ ಚಿಂತೆ ಮಾಡಲಿ ? "

" ನನ್ನ ನಗೆ ನಿನ್ನ ಬಾಳಿನಲ್ಲಿ ಅಷ್ಟು ಮುಖ್ಯವಸ್ತುವೇ ? "

" ಹೂ. ನಿನ್ನ ನಗೆಯೇ ನನ್ನನ್ನು ನನ್ನ ಆದರ್ಶದತ್ತ ಒಯ್ಯುವ ಪುಷ್ಪನೌಕೆ."

" ಹಾಗಾದರೆ. ಹಾಗಾದರೆ... ನಿನ್ನ ಆದರ್ಶವೇನು ರಾಜಾ ? "

" ಈಗಿನ ಆದರ್ಶ ಹೇಳಲೇ ? "

" ಹೇಳು."

" ಕಾತ್ಯಾಯನಿ ಒಂದು ದಿನಕ್ಕೆ ಈಗಾಗಿರುವಷ್ಟು ಚರ್ಚೆ ಸಾಲದೇ ? ಇನ್ನೊಮ್ಮೆ ನನ್ನ ಆದರ್ಶವೇನೆಂಬುದನ್ನು ಹೇಳುತ್ತೇನೆ. ನಿನಗಲ್ಲದೆ ಬೇರೆ ಯಾರಿಗೆ ಹೇಳಲಿ ? ಆದರೆ ಈಗ ಬೇಡ – ನಿಜ ಹೇಳುವುದೆಂದರೆ ನನಗೀಗ ದಿಗ್ಭ್ರಮೆಯಾಗಿದೆ. ನನಗೆ ಉಸಿರಾಡಿಸಿ ಕೊಳ್ಳಲು ಬಿಡುವು ಕೊಡು ಕಾತ್ಯಾ

ಯನಿ. ನಿನ್ನ ಹೋರಾಟದ ಕನಸನ್ನೇ ಬಣ್ಣಿಸಿ ನನ್ನ ಎದೆಗೆಡಿಸಬೇಡ. ಈಗ ನೀನು ನಗು – ನಾಳೆ ಏನಾಗುವುದೋ ಆಗಲಿ."

" ನನ್ನ ಕನಸು ನಿನ್ನ ಎದೆಗೆಡಿಸುವಷ್ಟು ಭಯಂಕರವೇ ? "

" ಹೂ."

" ಏಕೆ ? "

" ಏಕೆಂದರೆ – ಆ ಕನಸಿನ ಮಾತಾಡುತ್ತಾ ಆಡುತ್ತಾ ನೀನು ನನ್ನನ್ನು ಬಿಟ್ಟು ಎಲ್ಲೋ ದೂರ ಹೊರಟುಹೋದಂತಾಗುತ್ತದೆ ಕಾತ್ಯಾಯನಿ. ನನ್ನ ಬಳಿ ಕುಳಿತೂ ಕೋಟಿ ಮೈಲಿಗಳಾಚೆ ಹೋದಂತಿರುತ್ತದೆ. ಆದ್ದರಿಂದಲೇ ಅದು ಬೇಡ ಎಂದದ್ದು. ಕಾತ್ಯಾಯನಿ, ಕಾತ್ಯಾಯನಿ – ನನಗಾಗಿ, ನನಗಾಗಿ, ನೀನು ಒಂದುಗಳಿಗೆ ಆ ಕನಸನ್ನು ಮರೆತು ನಗಲಾರೆಯಾ ? ಅಷ್ಟು ಪ್ರೀತಿಯೂ ಇಲ್ಲವೇ ನಿನಗೆ ನನ್ನ ಮೇಲೆ ? "

—ಆ ಮಾತಿನಲ್ಲಿ ನನ್ನ ಹೃದಯವನ್ನೆಲ್ಲಾ ತುಂಬಿ ಕೇಳಿದೆ ನಾನು.

" ರಾಜಾ .. ರಾಜಾ ಇದೇನು ಹುಚ್ಚು ಪಶ್ನೆ ಕೇಳುತ್ತೀಯಾ. ನಿನ್ನ ಮೇಲೆ ಪ್ರೇಮವಿಲ್ಲವೇ ನನಗೆ ? "

ನನ್ನನ್ನು ತಬ್ಬಿಕೊಂಡು ಕೇಳಿದಳು ಕಾತ್ಯಾಯನಿ.

" ಇದೆ. ಅದನ್ನು ನಾನು ಬಲ್ಲೆ ಕಾತ್ಯಾಯನಿ. ಆದರೆ ಆದರೆ ನಡುವೆ ನಿನ್ನ ಕನಸು ಅಡ್ಡಿ ಬರದಿರಲಿ."

" ಊಹೂ – ಹಾಗೆ ಹೇಳಬೇಡ ರಾಜಾ ..."

" ಮತ್ತೇನು ಹೇಳಲಿ ? "

" ನಮ್ಮಿಬ್ಬರ ಹೃದಯಗಳೂ ಒಂದಾಗಿರುವಂತೆಯೇ ನಮ್ಮ ಕನಸುಗಳೂ ಒಂದೇ ಆಗಲೆಂದುಬಯಸು."

" ಕನಸಿಗೆ ಅಷ್ಟು ಬೆಲೆಯೇ ? "

" ನಿಜ ರಾಜಾ....ಕನಸಿಗಿರುವಷ್ಟು ಬೆಲೆ ಇಂದಿನ ವಾಸ್ತವಿಕತೆಗಿಲ್ಲ. ಆ ಕನಸು ನನ್ನ ನಿನ್ನ ನಡುವೆ ಬರಬಾರದೆಂದೇ ನನ್ನ ಬಯಕೆ. ಅದು ಎಲ್ಲಿ ಅಡ್ಡ ಬಂದೀತೋ ಎಂದು ನಾನೆಷ್ಟು ಭಯಪಡುತ್ತೇನೆಯೋ ನೀನು ಕಾಣೆ ರಾಜಾ."

—ಆ ಮಾತನಾಡುವಾಗ ಕಾತ್ಯಾಯನಿ ನಿಜವಾಗಿಯೂ ಹೆದರಿದಂತಿತ್ತು. ಅವಳ ಹೆದರಿಕೆಯನ್ನು ಕಂಡು ನನಗೆ ಕನಿಕರವಾಯಿತು. ದೂರವಾಗಿದ್ದ ಅವಳನ್ನು ಹತ್ತಿರ ಸೆಳೆದು, ಅಪ್ಪಿ, ಅವಳ ಕೆನ್ನೆಯನ್ನು ನನ್ನ ಕೆನ್ನೆಗೊತ್ತಿ ಕೊಂಡು ಹೇಳಿದೆ—

" ಕನಸುಗಳಿಗೆ ಅಷ್ಟು ಹೆದರಬೇಡ ಕಾತ್ಯಾಯನಿ. ಅವು ನಮಗೇನೂ ಮಾಡಲಾರವು."

" ನಿನಗಷ್ಟು ನಂಬಿಕೆಯಿದೆಯೆ ರಾಜಾ ? "

" ಹೂ – ನೋಡು ಇದು ನನ್ನ ನಂಬಿಕೆಗೆ ಸಾಕ್ಷಿ"

—ಯಾವುದೋ ಊಹೆಯ ಭೀತಿಯಿಂದ ಕೊಂಚ ವಿವರ್ಣವಾದ ಅವಳ ತುಟಿಗಳನ್ನು ಮುತ್ತಿಟ್ಟು ಹೇಳಿದೆ.

" ರಾಜಾ – ಈಗ ನನ್ನ ಮನಸ್ಸಿನಲ್ಲೊಂದು ಮಾತು ಸುಳಿಯುತ್ತಿದೆ. ಹೇಳಲೇ ? "

—ಮುತ್ತಿನಿಂದ ಮತ್ತಳಾಗಿ ಯಾವುದೋ ಕನಸಿನಲ್ಲಿ ತೇಲುತ್ತಿರುವ ಧ್ವನಿಯಲ್ಲಿ ಕೇಳಿದಳು ಕಾತ್ಯಾಯನಿ.

" ಅದೇನು ಹೇಳು ಕಾತ್ಯಾಯನಿ ? "

" ಇಂದು ನಮ್ಮ ತುಟಿಗಳು ಒಂದುಗೂಡಿದಂತೆ, ನಮ್ಮ ಕನಸುಗಳೂ ಒಂದುಗೂಡುವ ಕಾಲ ಬೇಗ ಬರಲಿ ರಾಜಾ."

" ಹುಚ್ಚು ಹುಡುಗಿ – ಈ ಹೊತ್ತಿನಲ್ಲೂ ಕನಸಿನ ಚಿಂತೆಯೇ "

—ಎಂದೆ ಅವಳನ್ನು ತೋಳಲ್ಲಿ ಬಿಗಿಯಾಗಿ ತಬ್ಬಿಕೊಳ್ಳುತ್ತಾ ಆಗ ನನಗೆ ಅವಳ ಹೊಳೆವ ಕಣ್ಣುಗಳಾಚೆ ಬೇರೊಂದು ಜಗತ್ತು ಇರಬಹುದೆಂದು ಊಹಿಸುವುದೂ ಸಾಧ್ಯವಿರಲಿಲ್ಲ.

೪

ಕಾತ್ಯಾಯನಿಯ ಕನಸಿನ ಕಥೆ ಯಾವಾಗಲೂ ಮಧುರತೆಯಲ್ಲೇ ಮುಕ್ತಾಯವಾಗುತ್ತಿರಲಿಲ್ಲ. ಎಷ್ಟೋ ಬಾರಿ ದಿಗಿಲಾಗುತ್ತಿತ್ತು ನನಗೆ. ಆ ಕನಸು ಹೇಳುವ ಕಾತ್ಯಾಯನಿ ನಿಜವೋ, ನನ್ನೊಂದಿಗೆ ಒಲವಿನ ಮಾತನಾಡುವ ಕಾತ್ಯಾಯನಿ ನಿಜವೋ ಎಂದು ದಿಗ್ಭ್ರಮೆಯಾಗುತ್ತಿತ್ತು. ಒಮ್ಮೊಮ್ಮೆ ಕನಸಿನ ಕಾತ್ಯಾಯನಿ ಪ್ರಬಲವಾಗಿ ನನ್ನ ಒಲವಿನ ಕಾತ್ಯಾಯನಿಯನ್ನು ನನ್ನಿಂದ ಕದ್ದೊಯ್ಯಬಹುದೇನೋ ಅನಿಸಿ, ಕೆಟ್ಟ ಕನಸುಕಂಡಂತೆ ಮೈ ಬೆವರುತ್ತಿತ್ತು. ಅದರಿಂದಾಗಿಯೇ ಅವಳೊಂದಿಗೆ ಅವಳ ಕನಸಿನ ಮಾತಾಡಲೂ ನನಗೆ ಹೆದರಿಕೆಯಾಗಿ, ಆ ಕನಸಿನ ಮಾತು ಆದಷ್ಟುಮಟ್ಟಿಗೆ ನಮ್ಮ ಮಾತಿನ ನಡುವೆ ನುಸುಳದಂತೆ ಎಚ್ಚರವಾಗಿದ್ದೆ.

ನಿಜ-ಕಾತ್ಯಾಯನಿಯ ಕನಸು ನನಗೆ ಬೇಕಾಗಿರಲಿಲ್ಲ; ಆದರೆ ನನ್ನ ಮನಸು ಕನಸಿನ ತುಂಬಾ ಅವಳೇ ತುಂಬಿದ್ದಳು.

ಅವಳಿಂದ ಪ್ರತ್ಯೇಕವಾದ ನನ್ನ ಜಗತ್ತು ಇರಬಹುದು ಎಂಬ ಕಲ್ಪನೆಯೂ ನನಗಿರಲಿಲ್ಲ.

ಕಾತ್ಯಾಯನಿಯ ಕನಸಿನ ದೋಣಿಯಲ್ಲಿ ಕುಳಿತು ತೇಲುತ್ತಿತ್ತು ನನ್ನ ಬಾಳ ನಾವೆ. ಆದರೆ ವಾಸ್ತವತೆಯ ಬಂಡೆಗೆ ನಾವೆ ಡಿಕ್ಕಿ ಹೊಡೆದಾಗ ನನಗೆ ಎಚ್ಚರವಾಯಿತು.

ವಾಸ್ತವತೆ ಭವಾನಿ ಶಂಕರರಾಯರ ರೂಪದಲ್ಲಿ ಬಂದು ನನ್ನ ಮನದ ಬಾಗಿಲು ತಟ್ಟಿತು.

ಒಂದು ಭಾನುವಾರ ನಾನು ಕಾತ್ಯಾಯನಿಯನ್ನು ನೋಡಲೆಂದು ಅವರ ಮನೆಗೆ ಹೋದಾಗ, ಅವಳ ಅಣ್ಣ ಭವಾನಿ ಶಂಕರರಾಯರ ಭೇಟಿಯಾಯಿತು. ಅವರು ವರಾಂಡದಲ್ಲೇ ಕುಳಿತಿದ್ದುದರಿಂದ ಅವರನ್ನು ಮಾತನಾಡಿಸಿಯೇ ಮುಂದೆ ಹೋಗಬೇಕಾಯಿತು.

" ಬನ್ನಿ ರಾಜಶೇಖರ್, ಕುಳಿತುಕೊಳ್ಳಿ "

—ಎಂದು ನನಗಿಂತ ಮೊದಲು ಅವರೇ ನನ್ನನ್ನು ಮಾತನಾಡಿಸಿ, ನಾನು ಕೂಡಲು ತಮ್ಮ ಬಳಿಯಲ್ಲಿದ್ದ ಕುರ್ಚಿಯನ್ನು ತೋರಿಸಿದರು. ಕರೆದಮೇಲೆ ಕುಳಿತುಕೊಳ್ಳದೆ ಬೇರೆ ದಾರಿಯೇ ಇರಲಿಲ್ಲ. ಕುಳಿತುಕೊಂಡೆ. ನನ್ನನ್ನು ಕೂಡಿಸಿದ ಬಳಿಕ, ಕೊಂಚಹೊತ್ತು ಅವರಿಗೆ ನಾನು ಅಲ್ಲಿರುವುದೇ ಮರೆತು ಹೋದಂತಿತ್ತು. ನಾನೇ ಮೌನವನ್ನು ಮುರಿದು—

" ಮಿಸ್. ಕಾತ್ಯಾಯನಿ ಮನೆಯಲಿಲ್ಲವೇ ? "

—ಎಂದು ಕೇಳಿದೆ.

" ಇದಾಳೆ. ಈಗ ನಿಮಗೇನೂ ಅವಸರವಿಲ್ಲ ತಾನೇ ? "

—ಕಣ್ಣಿಗೆ ಹಾಕಿಕೊಂಡಿದ್ದ ಕನ್ನಡಕವನ್ನು ಕೈಲಿ ಹಿಡಿದು, ಅದನ್ನು ಅತ್ತಿಂದತ್ತ ಆಡಿಸುತ್ತ ಕೇಳಿದರು.

" ಏನೂ ಇಲ್ಲ. ಏನಾದರೂ ಕೆಲಸವಿತ್ತೆ ಸಾರ್ ? "

" ಇದೆ. ಬಹಳ ದಿನದಿಂದ ನಿಮ್ಮನ್ನೊಂದು ಮಾತು ಕೇಳಬೇಕು ಎಂದಿದ್ದೆ. ಆದರೆ ಏಕೋ ಅವಕಾಶವಾಗಿರಲಿಲ್ಲ. ಈ ದಿನ ಅವಕಾಶವಾಯಿತು. ಕೇಳಬಹುದು ಅಂದರೆ ಕೇಳುತ್ತೇನೆ."

" ಕೇಳಿ ಸಾರ್. ಅದಕ್ಕೇನು ? "

" ಇದು ನಿಮ್ಮ ಖಾಸಗಿ ಜೀವನದ ಪ್ರಶ್ನೆ. ಅದರಲ್ಲಿ ತಲೆ ಹಾಕಲು ನನಗೆ ಅಧಿಕಾರವಿಲ್ಲ. ಆದರೂ ಇದರಲ್ಲಿ ಕಾತ್ಯಾಯನಿಯ ಸಂಬಂಧವಿರುವುದರಿಂದ, ಕಾತ್ಯಾಯನಿ ನನ್ನ ತಂಗಿಯಾದುದರಿಂದ ಕೇಳಬೇಕಾಗಿ ಬಂದಿದೆ "

—ಎಂದು ಭವಾನಿ ಶಂಕರರಾಯರು ತಾವಾಡಲಿದ್ದ ಮಾತಿಗೆ ಪೀಠಿಕೆ ಹಾಕಿದರು ಆ ಮಾತು ಅವರು ಅದನ್ನು ಆರಂಭಿಸಿದ ರೀತಿ ನನಗೇಕೋ ದಿಗಿಲನ್ನುಂಟುಮಾಡಿತು. ಮರುಮಾತನಾಡದೆ ಮುಂದೆ ಅವರು ಏನು ಹೇಳುತ್ತಾರೋ ಎಂಬುದನ್ನೇ ಕಾದು ಕುಳಿತೆ.

"ನೋಡಿ-ರಾಜಶೇಖರ್, ಇದು ಆಧುನಿಕ ಯುಗ. ಹೆಂಗಸು ಗಂಡಸಿನ ಕೂಡ ಓಡಾಡುವುದು ತಪ್ಪೆಂದು ಭಾವಿಸುವ ಪ್ರಾಚೀನಯುಗಕ್ಕೆ ನಾನು ಸೇರಿದವನಲ್ಲ. ಅಲ್ಲದೆ-ಅವರವರ ಬಾಳಿನ ಸಮಸ್ಯೆಯನ್ನು ಯಾರಿಗೆ ಹೇಗೆ ಬೇಕೋ ಹಾಗೆ ನಿರ್ಧರಿಸಿಕೊಳ್ಳಲು ಅವರಿಗೆ ಸಂಪೂರ್ಣ ಅಧಿಕಾರವಿದೆ. ನನ್ನ ಬಾಳನ್ನು ನನಗೆ ಸರಿತೋರಿದ ದಾರಿಯಲ್ಲಿ ರೂಪಿಸಿಕೊಳ್ಳಲು ನನಗೆಷ್ಟು ಅಧಿಕಾರವಿದೆಯೋ ಅಷ್ಟೇ ಅಧಿಕಾರ ನಿಮಗೂ ಇದೆ, ಕಾತ್ಯಾಯನಿಗೂ ಇದೆ. ಎಂತಲೇ – ನಿಮಗೆ ಗೊತ್ತಿದೆ ನಾನು ಇದುವರೆಗೆ ನಿಮ್ಮ ಸ್ನೇಹದಲ್ಲಿ ತಲೆ ಹಾಕಿಲ್ಲ. ಅಲ್ಲವೆ ?"

"ಹೌದು ಸಾರ್."

"ಆದರೆ ಜಗತ್ತು ನಾವಂದುಕೊಂಡಷ್ಟು ಮುಂದುವರಿದಿಲ್ಲ. ಯಾವ ವಿಚಾರವನ್ನೂ ನಮ್ಮ ದೃಷ್ಟಿಯಲ್ಲೇ ನೋಡ ವುದಿಲ್ಲ. ನಮ್ಮ ದೃಷ್ಟಿ ಒಂದಾದರೆ ಜಗತ್ತಿನ ದೃಷ್ಟಿಯೇ ಬೇರೆ ಜಗತ್ತಿನ ದೃಷ್ಟಿಯನ್ನು ಕಟ್ಟಿಕೊಂಡು ನಮಗಾದದ್ದೇನು ಎನ್ನುವ ಮಹಾನುಭಾವರೂ ಇರಬಹುದು ಆದರೆ ಎಲ್ಲರೂ ಅಂಥ ಮಹಾನುಭಾವರಾಗುವುದು ಸಾಧ್ಯವಿಲ್ಲ. ಜಗತ್ತು ಒಳ್ಳೆಯದಿರಬಹುದು – ಕೆಟ್ಟದಿರಬಹುದು. ಆದರೆ ಎಲ್ಲಿಯವರೆಗೆ ನಾವು ಜಗತ್ತಿನಲ್ಲಿ ಬಾಳಬೇಕೋ, ಅಲ್ಲಿಯವರೆಗೂ ಅದರ ಅಭಿಪ್ರಾಯಕ್ಕೆ ಮನ್ನಣೆ ಕೊಡುವುದು ಉಚಿತವಲ್ಲವೆ ?"

"ನಿಜ ಸಾರ್."

"ಈ ಮಾತನ್ನೇ ನಿಮಗೆ ಹೇಳಬೇಕು ಅಂತ ಕೂರಿಸಿಕೊಂಡೆ ರಾಜಶೇಖರ್. ಕಾತ್ಯಾಯನಿಗೆ ಸುತ್ತಲ ಜನರ ಅಭಿಪ್ರಾಯ ಎಂದರೆ ತಾತ್ಸಾರ. ಅವರ ಹಾಗೆ ಇರಲು ಯತ್ನಿಸುವ ನಮ್ಮನ್ನು ಕಂಡರೂ ತಾತ್ಸಾರ. ಏಷ್ಟಾದರೂ, ಅವಳಿಗೆ ಎಷ್ಟೇ ವಯಸ್ಸಾದರೂ, ಎಷ್ಟೇ ವಿದ್ಯೆ ಕಲಿತರೂ ಅವಳು ನನ್ನ ತಂಗಿ, ನನಗಿಂತ ಕಿರಿಯವಳು. ಅವಳಿಗೆ ನಾನು ಅವಳ ವ್ಯವಹಾರದಲ್ಲಿ ತಲೆಹಾಕುವುದು ಇಷ್ಟವಿಲ್ಲವಾದರೂ, ಅವಳ ಹಿತದೃಷ್ಟಿಯಿಂದ ನಾನು ಯಾವುದನ್ನು ಮಾಡಬೇಕೋ ಆ ಕರ್ತವ್ಯವನ್ನು ಮಾಡಲೇಬೇಕು. ಆದುದರಿಂದ ಕೇಳುತ್ತಿದ್ದೇನೆ – ನಿಜ ಹೇಳುತ್ತೀರಾ ? ಯಾವ ಮಾತಿದ್ದರೂ ನಿಸ್ಸಂಕೋಚವಾಗಿ ಹೇಳಬಹುದು"

" ಅದೇನು ಕೇಳಿ ಸಾರ್."

" ಕಾತ್ಯಾಯನಿಯೂ ನೀವೂ ತುಂಬಾ ಸ್ನೇಹಿತರೆಂದೇ ತಿಳಿದುಕೊಂಡಿದೇನೆ. ಆದರೆ ಅವಳ ಬಗ್ಗೆ ನಿಮ್ಮಲ್ಲಿರುವ ನಿಜವಾದ ಭಾವನೆಯೇನು ಹೇಳಿ. ದಯವಿಟ್ಟು ಮೋಸಮಾಡಲೆತ್ನಿಸಬೇಡಿ. ನಾನೂ ನಿಮ್ಮ ಸ್ನೇಹಿತನೇ ಎಂದು ತಿಳಿದು ಹೇಳಿ."

ಅವರ ಮಾತನ್ನು ಕೇಳಿ ಒಂದೆರಡು ನಿಮಿಷ ಯೋಚಿಸಿದೆ. ಕಾತ್ಯಾಯನಿಯ ಬಗ್ಗೆ ನನಗಿರುವ ನಿಜವಾದ ಭಾವನೆಯನ್ನು ಇವರ ಮುಂದೆ ಹೇಗೆ ಹೇಳಲಿ ? ನಿಜ ಹೇಳಿ – ತಪ್ಪು ತಿಳಿದುಕೊಂಡರೆ—ಆದರೆ ಅವರು ನನ್ನಲ್ಲಿ ನಂಬಿಕೆಯಿಟ್ಟು ಮಾತನಾಡಿದ ರೀತಿಯನ್ನು ನೋಡಿ ಸುಳ್ಳು ಹೇಳಲು ಬಾಯಿ ಬರಲಿಲ್ಲ.

" ತಾವು ಏನೂ ತಿಳಿದುಕೊಳ್ಳಬಾರದು. ಕಾತ್ಯಾಯನಿಯನ್ನು ನಾನು ಪ್ರೀತಿಸುತ್ತೇನೆ."

—ಆ ಮಾತು ಕೇಳಿ ಒಂದು ಗಳಿಗೆ ಅವರ ಮುಖ ಕೆಂಪೇರಿತು. ಹಣೆಯಲ್ಲಿ ಒಂದೆರಡು ಹನಿ ಬೆವರು ಕಾಣಿಸಿತು. ತಟಕ್ಕನೆ ನಾಲಗೆಯ ತುದಿಯವರೆಗೂ ಬಂದ ಮಾತನ್ನು ಆಡದೆ, ತುಟಿಕಚ್ಚಿ, ತಡೆದು, ಒಂದೆರಡು ನಿಮಿಷ ಸುಮ್ಮನಿದ್ದು ಬಳಿಕ ಹೇಳಿದರು—

" ಥ್ಯಾಂಕ್ಯೂ ಫಾರ್ ಟೆಲಿಂಗ್ ದಿ ಟ್ರೂತ್. ಕಾತ್ಯಾಯನಿಗೆ ನಿಮ್ಮ ಹೃದಯದ ಭಾವನೆ ಗೊತ್ತಿದೆಯೇ ?"

" ಗೊತ್ತಿದೆ."

" ನೀವೇ ಅವಳಿಗೆ ಹೇಳಿದಿರಾ–ಅಥವಾ ತಿಳಿದಿರಬಹುದೆಂದು ಊಹಿಸಿ ಸುಮ್ಮನಾದಿರೋ ? "

" ಇಲ್ಲ – ಹೇಳಿದೇನೆ."

" ಅದಕ್ಕೆ ಆಕೆ ಏನು ಹೇಳಿದಳು ? "

ನನ್ನ ಜೀವನದ ಅತ್ಯಂತ ಆಪ್ತ ವಿಷಯಗಳ ಬಗ್ಗೆ ಅವರು ಕೇಳುತ್ತಿದ್ದ ನೇರವಾದ ಪ್ರಶ್ನೆಗಳಿಗೆ ಉತ್ತರ ಕೊಡುವುದು ನನಗೆ ಬಹಳ ಕಠಿಣವಾಗಿತ್ತು. ಒಂದೊಂದು ಪ್ರಶ್ನೆಯೂ ನನ್ನ ಎದೆಯನ್ನು ಅಲ್ಲಕಲ್ಲೋಲ ಮಾಡಿ, ಉತ್ತರ ಕೊಡುವ ನಾಲಗೆಗೆ ಕಡಿವಾಣ ಹಾಕುತ್ತಿತ್ತು.

" ಚಿಂತೆಯಿಲ್ಲ – ಏನು ಹೇಳಿದಳು ಹೇಳಿ ರಾಜಶೇಖರ್ ? "

—ಸುಮ್ಮನಿದ್ದ ನನ್ನನ್ನು ಮತ್ತೆ ಪ್ರಶ್ನೆ ಮಾಡಿದರು ಭವಾನಿ ಶಂಕರ ರಾಯರು.

" ಅವರಿಗೂ ನನ್ನಲ್ಲಿ ಅದೇ ಭಾವನೆಯಿದೆ."

" ನಿಜವೇ....ನಿಜವೇ.... ಹಾಗ್ದಾದರೆ....ಹಾಗಾದರೆ...."

—ಏನೋ ಕೇಳಬೇಕೆಂದು ಅವರು ಅದಕ್ಕೆ ಸರಿಯಾದ ಮಾತನ್ನು ಹುಡುಕುತ್ತಿದ್ದರು. ಉತ್ತರ ಹೇಳುವುದು ನನಗೆಷ್ಟು ಕಷ್ಟವಾಗಿತ್ತೋ, ಪ್ರಶ್ನೆ ಕೇಳುವುದು ಅವರಿಗೂ ಅಷ್ಟೇ ಕಷ್ಟವಾಗಿತ್ತು. ಆ ಅಸ್ವಾಭಾವಿಕ ಪರಿಸ್ಥಿತಿಯನ್ನು ಆದಷ್ಟು ನಾಜೂಕಾಗಿ ನಡೆಸಲು ಅವರು ಪ್ರಯತ್ನ ಪಡುತಿದ್ದುದು ಸ್ಪಷ್ಟವಾಗಿತ್ತು. ಬಹಳ ಹೊತ್ತು ಚಿಂತಿಸಿ ಬಳಿಕ ಕೇಳಿದರು—

" ನೀವಿಬ್ಬರು ಒಬ್ಬರನ್ನೊಬ್ಬರು ಪರಸ್ಪರ ಪ್ರೀತಿಸುವುದು ಸಂತೋಷ. ಆದರೆ ಇದರ ಮುಂದಿನ ಗುರಿ ..."

ಅವರ ಪ್ರಶ್ನೆ ನನಗೆ ಅರ್ಥವಾಗಲಿಲ್ಲ.

" ಅಂದರೆ—? "

" ಅಂದರೆ ಇಷ್ಟೆ – ನಿಮ್ಮ ಪರಸ್ಪರ ಪ್ರಣಯದ ಯೋಜನೆಯಲ್ಲಿ ವಿವಾಹವೂ ಸೇರಿದೆಯೇ ರಾಜಶೇಖರ್. ಅಥವಾ ಕಾತ್ಯಾಯನಿಯ ಹಾಗೆ ನಿಮಗೂ ವಿವಾಹ ವಿಧಿಯಲ್ಲಿ ನಂಬಿಕೆಯಿಲ್ಲವೋ. ಅವಳ ಹಾಗೇ ನೀವೂ ವಿವಾಹ ರಹದಾರಿ ಪಡೆದ ವೇಶ್ಯಾವೃತ್ತಿ, ಗುಲಾಮಗಿರಿಯ ಸಂಸ್ಥೆ, ಬೂರ್ಜ್ವಾ ಬುದ್ಧಿ ಎನ್ನುತ್ತೀರೋ ? "

—ಕಟುವಾದ ಧ್ವನಿಯಲ್ಲಿ ಕೇಳಿದರು ಭವಾನಿಶಂಕರರಾಯರು. ಅವರ ಮಾತಿನಲ್ಲಿ ಯಾರ ಬಗ್ಗೆಯೋ, ಯಾವುದರ ಬಗ್ಗೆಯೋ ಭಯಂಕರ ಕ್ರೋಧ, ಅಷ್ಟೇ ಭಯಂಕರವಾದ ತಾತ್ಸಾರ ಅಡಗಿತ್ತು. ಅವರ ಮಾತು ಕೇಳಿ ನನಗೂ ಕೊಂಚ ತಾಳ್ಮೆ ತಪ್ಪಿದಂತಾಯಿತು.

" ನನ್ನ ಉದ್ದೇಶವನ್ನು ತಾವು ತಪ್ಪು ತಿಳಿದಿರುವಂತಿದೆ."

—ಎಂದೆ, ಖಾರವಾಗಿ.

" ಅಂದರೆ – ವಿವಾಹದ ಉದ್ದೇಶವೂ ಇದೆ ಎಂದು ನಂಬಲೇ ? "

—ನನ್ನ ಮಾತಿನಲ್ಲಿದ್ದ ಖಾರ ಅರಿವಾಗದಂತೆ ಕೇಳಿದರು.

" ಖಂಡಿತವಾಗಿಯೂ. ನನ್ನ ಉದ್ದೇಶದಲ್ಲಿ ಯಾವ ದುಷ್ಕಲ್ಪನೆಯೂ ಇಲ್ಲ. ತಾವು ನನ್ನನ್ನು ತಪ್ಪು ತಿಳಿದುಕೊಂಡಿರುವಂತಿದೆ. ನಾನು ತಮಗೆ ಅಪರಿಚಿತ ನಿಜ. ನಾನು ಹೇಳುವ ಯಾವ ಮಾತನ್ನೂ ನೀವು ನಂಬಬೇಕಾದ ಅಗತ್ಯವಿಲ್ಲ. ಆದರೂ ನಂಬುವುದಾದರೆ ಹೇಳುತ್ತೇನೆ – ದೇವರಾಣೆ ಮಾಡಿ ಹೇಳುತ್ತೇನೆ. ನನ್ನಿಂದ ನಿಮಗಾಗಲಿ, ಕಾತ್ಯಾಯನಿಗಾಗಲಿ ಎಂದೂ ಮೋಸವಾಗದು."

" ದೇವರಾಣೆ ಮಾಡಿ ಹೇಳುತ್ತೀರಾ ? "

—ನನ್ನ ಮಾತು ಕೇಳಿ ಆಶ್ಚರ್ಯ್ಯವಾದವರಂತೆ ಕೇಳಿದರು ಅವರು.

" ಅಹುದು."

" ದೇವರಲ್ಲಿ ನಂಬಿಕೆ ಇರುವವರು, ದೇವರ ಹೆಸರು ಹೇಳುವವರು ಕಾತ್ಯಾಯನಿಯ ಮಿತ್ರರಾದದ್ದು ಸಂತೋಷ."

" ಏಕೆ ? "

" ದೇವರಲ್ಲಿ ಅವಳಿಗೆ ನಂಬಿಕೆಯಿಲ್ಲ. ದೇವರು, ಧರ್ಮ ಎಲ್ಲಾ ಅವಳ ಪಾಲಿಗೆ ಬರೀ ಅಫೀಮು."

" ಏಕೆ ? "

" ಯಾರಿಗೆ ಗೊತ್ತು. ಅವಳ ಗುರು ಲೆನಿನ್ ಹಾಗೆ ಹೇಳಿದಾನಂತೆ. ಅವನು ಹೇಳಿದ ಎಂದು ಇವಳು ಹೇಳುತ್ತಾಳೆ. ಅವಳು ಹೇಳಿದಳು ಎಂದು ನೀವೂ ಹಾಗೆ ಹೇಳುತ್ತೀರೇನೋ ಎಂದು ಇದ್ದೆ. ಹೋಗಲಿ - ಅದೆಲ್ಲಾ ಈಗ ಅಗತ್ಯವಿಲ್ಲದ ಮಾತು. ನೀವು ಆಡಿದುದು ಸತ್ಯವೋ, ಅಸತ್ಯವೋ ಅದಕ್ಕೆ ನಿಮ್ಮ ಆತ್ಮವೇ – ಅಂತಹುದೊಂದು ಇದೆ ಎಂದು ನೀವು ನಂಬುವುದಾದರೆ – ಅದು ನಿಮ್ಮ ಮಾತಿಗೆ ಸಾಕ್ಷಿಯಾಗಿರಲಿ ನೀವು ಹೇಳಿದ ಮಾತನ್ನು ನಂಬ ಬೇಕಾದ ಅಗತ್ಯವಿಲ್ಲ ಆದರೂ ನೀವು ಸ್ಪಷ್ಟವಾಗಿ ಮಾತನಾಡಿದುದರಿಂದ ನಿಮ್ಮ ಮಾತಿನಲ್ಲಿ ನಂಬಿಕೆ ಇಟ್ಟು ಹೇಳುತ್ತೇನೆ, ಕೇಳಿ. ಈ ಮಾತನ್ನು ಎಂದೂ ಮರೆಯಬೇಡಿ. ಕಾತ್ಯಾಯನಿ ತನ್ನ ಪಾಲಿಗೆ ನಾವೆಲ್ಲಾ ಶತ್ರುಗಳು ಎಂದೇ ಹೇಳಿರಬಹುದು. ಇರಲಿ. ಆದರೂ ಅವಳು ನನ್ನ ತಂಗಿ. ನನಗಿರು ವವಳು ಒಬ್ಬಳೇ ತಂಗಿ. ಯಾರಾದರೂ ಅವಳಿಗೆ ದ್ರೋಹ ಬಗೆದರೆ, ಅವಳ ಕಣ್ಣಲ್ಲಿ ನೀರು ತರಿಸಿದರೆ, ನಾನು ಸಾಯಬಹುದು, ಆದರೂ ಚಿಂತೆಯಿಲ್ಲ, ಆ ದ್ರೋಹಿ ಜೀವದಿಂದಿರಲು ಬಿಡುವುದಿಲ್ಲ. ತಿಳಿಯಿತೇ ರಾಜಶೇಖರ್. ನಿನ್ನೆಯ ದಿನ ಸಂಜೆ ಕ್ಲಬ್ಬಿನಲ್ಲಿ ನಿಮ್ಮ ಕಾಲೇಜಿನ ಉಪಾಧ್ಯಾಯರೇ ಒಬ್ಬರು ನಿಮ್ಮ ಮತ್ತು ಕಾತ್ಯಾಯನಿಯ ವಿಷಯ ಲಘುವಾಗಿ ಮಾತನಾಡಿದರು. ಆ ಮಾತು ಕೇಳಿ ನನ್ನ ರಕ್ತ ಕುದಿಯಿತು. ಆ ಹೊತ್ತಿನಲ್ಲಿ ನೀವಾಗಲಿ, ಕಾತ್ಯಾಯನಿ ಯಾಗಲಿ ಎದುರಿಗೆ ಸಿಕ್ಕಿದ್ದರೆ ಏನು ಮಾಡುತ್ತಿದ್ದೆನೋ ತಿಳಿಯದು. ಆದರೆ ಆ ಕೋಪ ಆರಿದ ಮೇಲೆ ನಿಮ್ಮನ್ನು ಪ್ರಶ್ನೆ ಮಾಡಿ ನಂತರ ಏನು ಮಾಡ ಬೇಕೆಂದು ಯೋಚಿಸುವುದೆಂದು ತೀರ್ಮಾನ ಮಾಡಿದೆ. ಮುಖಕ್ಕೇ ಪ್ರಶ್ನೆ ಮಾಡಿದಾಗ ನೀವು ಜಾರಿಕೊಳ್ಳಲು ಯತ್ನಿಸಬಹುದೆಂದು ಅಂದುಕೊಂಡಿದ್ದೆ. ಹಾಗೆ ಪ್ರಯತ್ನಿಸಿದ್ದರೆ ನಿಮ್ಮಿಂದ ಸತ್ಯವನ್ನು ಹೊರಡಿಸಲು ಚಾಟಿಯೂ ಸಿದ್ಧ

ವಾಗಿತ್ತು. ಆದರೆ ನೀವು ಸತ್ಯವನ್ನು ಹೇಳಿದಿರಿ. ಥ್ಯಾಂಕ್ಸ್, ಇನ್ನು ಒಂದು ಮಾತು ಈಗಲೇ ಹೇಳಿ ಬಿಡುತ್ತೇನೆ ಕೇಳಿ–ಕಾತ್ಯಾಯನಿಯನ್ನು ನೀವು ಮದುವೆಯಾಗುವ ವಿಷಯದಲ್ಲಿ ನನ್ನ ಅಭಿಪ್ರಾಯವನ್ನು ಕೇಳಿದರೆ–ಕೂಡದು ಎಂದೇ ಹೇಳುತ್ತೇನೆ. ಆದರೆ ಅವಳ ವಿವಾಹದ ವಿಷಯದಲ್ಲೇ ಆಗಲಿ, ಜೀವನದ ಮಾರ್ಗದ ವಿಷಯದಲ್ಲೇ ಆಗಲಿ ನಾನು ಅಡ್ಡ ಬರುವುದಿಲ್ಲವೆಂದು ನನ್ನ ತಂದೆಗೆ ಮಾತು ಕೊಟ್ಟುದರಿಂದ ಅವಳ ಜೀವನದ ಸಂಗಾತಿಯನ್ನು ಅವಳೇ ಆರಿಸಿಕೊಳ್ಳಲಿ ಎಂದು ಸುಮ್ಮನಾಗಿರಬೇಕಾಗಿದೆ. ಅವಳು ಹೇಗೇ ಬೇಕೋ ಹಾಗೆ ಮಾಡಲಿ– ನಿಮಗೆ ನಾನು ಹೇಳುವುದಿಷ್ಟೇ–ನೀವು ಅವಳನ್ನು ಪ್ರೀತಿಸುತ್ತಿದ್ದರೆ, ನಿಮ್ಮನ್ನು ಅವಳು ಪ್ರೀತಿಸುತ್ತಿದ್ದರೆ, ದಯವಿಟ್ಟು.. ದಯವಿಟ್ಟು.. ಅವಳು ಜೀವನದಲ್ಲಿ ಒಂದು ಗಳಿಗೆಯೂ ಅಸುಖಿಯಾಗದಂತೆ ನೋಡಿಕೊಳ್ಳಿ ರಾಜಶೇಖರ್. ಅವಳ ಕಣ್ಣಲ್ಲಿ ಒಂದು ಹನಿ ನೀರು, ಬಂದಿತೆಂದು ಕೇಳಿದರೂ ನನ್ನ ಕರುಳನ್ನು ಕುಯ್ದಂತಾಗುತ್ತದೆ. ನನ್ನ ಬಾಳು ನರಕವಾಗುತ್ತದೆ ಯೂ ಡೋಂಟ್ ನೋ ಹೌ ಮಚ್ ಐ ಲವ್ ಹರ್. ಆದರೂ ಆದರೂ ನಾನವಳಿಗೆ ಏನೂ ಮಾಡಲಾರೆ. ಅದು ನನ್ನ ದುರದೃಷ್ಟ ಅವಳಿಗೆ ಹೇಗೆ ಬೇಕೋ ಹಾಗೆ ಮಾಡಲಿ. ಆದರವಳು ಸುಖವಾಗಿರಲಿ ಹೋಗಿ ಹೋಗಿ ರಾಜಶೇಖರ್.... ಕಾತ್ಯಾಯನಿ ನಿಮಗಾಗಿ ಕಾದಿರಬಹುದು ನೀವೂ ಅವಳನ್ನು ಕಾಣಲು ತವಕಿಸುತ್ತಿರಬಹುದು. ಆದರೆ. ಆದರೆ. ಕಾತ್ಯಾಯನಿಗೆ ನಾನಾಡಿದ ಮಾತಾವುದನ್ನೂ ಹೇಳಬೇಡಿ"

— ಎಂದು ಅಷ್ಟು ಹೇಳಿದವರೇ ಭವಾನಿ ಶಂಕರರಾಯರು ತಮ್ಮ ಚಿತ್ತದ ಉದ್ವಿಗ್ನತೆಯನ್ನು ನನ್ನೆದುರಿಗೆ ತೋರಲಾರದವರಂತೆ ವೇಗವಾಗಿ ಒಳಗೆ ಹೊರಟುಹೋದರು.

ಅವರಾಡಿದುದನ್ನೆಲ್ಲಾ ಕೇಳಿದ ನಾನು ಬೆಪ್ಪಾಗಿ ನಿಂತಲ್ಲಿಯೇ ನಿಂತೆ. ಅನಿರೀಕ್ಷಿತವಾದ ಆ ಮಾತುಗಳನ್ನು ಕೇಳಿ, ನನ್ನ ಚಿಂತಿಸುವ ಶಕ್ತಿಯೇ ಕುಂಠಿತವಾಗಿ ಹೋದಂತಿತ್ತು.

ಹರ್ಷ, ಕ್ರೋಧ, ಉದ್ವೇಗ,–ಹತ್ತಾರು ಭಾವನೆಗಳು 'ನಾನು ಮುಂದು ತಾನು ಮುಂದು' ಎಂದು ನನ್ನ ಹೃದಯದಲ್ಲಿ ತೆರೆ ಹೊಯ್ಯುತ್ತಿದ್ದವು.

ಕಾತ್ಯಾಯನಿಯ ಮಾತು ಕೇಳಿ ಭವಾನಿ ಶಂಕರರಾಯರ ವಿಷಯದಲ್ಲಿ ನಾನಾವುದೋ ಊಹಾಚಿತ್ರವನ್ನು ನಿರ್ಮಿಸಿಕೊಂಡಿದ್ದೆ. ಆದರೆ ನನ್ನ ಕಲ್ಪನಾ ವಿಗ್ರಹ ಪುಡಿಪುಡಿಯಾಗಿ ನನ್ನ ಕಾಲಡಿಯಲ್ಲಿ ಉರುಳಿತ್ತು

ಅವರ ಬಗ್ಗೆ ನನಗೆ ತಾತ್ಸಾರವಿತ್ತು – ಈಗ ಗೌರವ ಗೋಪುರವಾಗಿ

ಮೇಲೆದ್ದು ನಿಂತಿತ್ತು.

ಹರ್ಷವೂ ಆಗಿತ್ತು ನನಗೆ – ಕಾತ್ಯಾಯನಿ ನನ್ನವಳಾಗಲು ಅವರ ಅಭ್ಯಂತರವಿಲ್ಲವೆಂದು ಕೇಳಿ.

ಕ್ರೋಧ ಹಲ್ಲು ಮಸೆಯುತ್ತಿತ್ತು – ಜನ ನನ್ನ ಕಾತ್ಯಾಯನಿಯ ವಿಷಯದಲ್ಲಿ ಅಲ್ಲಸಲ್ಲದ ಮಾತನಾಡುವರೆಂದು ಕೇಳಿ.

ಕನಸು ಮನಸಿನಲ್ಲಿಯೂ ನಿರೀಕ್ಷಿಸದ ಈ ಘಟನೆ ನನ್ನ ಮಿದುಳಿನಲ್ಲಿ ಬಿರುಗಾಳಿಯಂತೆ ಮೊರೆಯುತ್ತಿತ್ತು.

ಹತ್ತು ನಿಮಿಷ ಹಾಗೆಯೇ ನಿಂತಿದ್ದೆ – ಎಲ್ಲಿರುವೆನೆಂಬುದನ್ನರಿಯದೆ ; ಇದು ಕನಸೋ ಸತ್ಯವೋ ಎಂದರಿಯದೆ.

ಕೊಂಚ ಹೊತ್ತಾದಮೇಲೆ ಎಲ್ಲಿರುವೆನೆಂಬುದು ಅರಿವಾಗಿ, ಕಾತ್ಯಾಯನಿಯ ಕೋಣೆಯತ್ತ ಹೆಜ್ಜೆ ಹಾಕಿದೆ. ನನ್ನ ಹೃದಯ ಹಗುರವಾಗಿತ್ತು — ಅಲ್ಲ ಭಾರವೂ ಆಗಿತ್ತು. ಮಿದುಳು ಬಲೂನಿನಂತೆ ಗಾಳಿಯಲ್ಲಿ ಹಾರುತ್ತಿತ್ತು, ಕಾಲಿಗೆ ಮಣಭಾರದ ಬೇಡಿ ಹಾಕಿದಂತಿತ್ತು – ಹೃದಯ ದಿಕ್ಕರಿಯದೆ ಉದ್ವಿಗ್ನವಾಗಿತ್ತು. ಹಾಗೇ ನಡದೆ.

ಕಾತ್ಯಾಯನಿಯ ಕೋಣೆಯ ಬಾಗಿಲೂ ತೆರೆದಿತ್ತು.

ಆದರೆ ಎಂದಿನಂತೆ ಕಾತ್ಯಾಯನಿ ಕುಳಿತಿರಲಿಲ್ಲ – ಅತ್ತಿಂದಿತ್ತ, ಇತ್ತಿಂದತ್ತ, ತಲೆಬಗ್ಗಿಸಿ ಶತಪಥ ಹಾಕುತ್ತಿದ್ದಳು.

ಎಂದಿನಂತೆ ಕಾತ್ಯಾಯನಿ, ನನ್ನ ಹೆಜ್ಜೆ ಸಪ್ಪಳ ಕೇಳಿದ ಕೂಡಲೆ ಕಣ್ಣಲ್ಲಿ ಬೆಳಕು ತುಳುಕಿಸಿ ನನ್ನತ್ತ ನೋಡಲಿಲ್ಲ – ನಾನು ಬಂದುದೂ ಅವಳಿಗೆ ತಿಳಿದಂತಿರಲಿಲ್ಲ ಹೆಜ್ಜೆ ಸಪ್ಪಳವೇಕೆ – ನಾನು ಮೊದಲ ಬಾರಿ ಅವಳ ಹೆಸರು ಹಿಡಿದು ಕೂಗಿದುದೂ ಅವಳ ಕಿವಿಗೆ ಬಿದ್ದಂತಿರಲಿಲ್ಲ. ಸುಮ್ಮನೆ ಅತ್ತಿಂದಿತ್ತ ಅಲೆಯುತ್ತಿದ್ದಳು.

“ ಕಾತ್ಯಾಯನೀ ”

—ಸ್ವಲ್ಪ ಸ್ವರವನ್ನು ಎತ್ತರಿಸಿ ಕೂಗಿದೆ. ಈ ಬಾರಿ ನನ್ನ ಕರೆ ಅವಳ ಕಿವಿ ಸೇರಿತು. ತಟಕ್ಕನೆ ನಿಂತು ನನ್ನನ್ನು ನೋಡಿದಳು.

ಅವಳುಟ್ಟ ಬಿಳಿಯ ಸೀರೆ, ತೊಟ್ಟ ಬಿಳಿಯ ರವಿಕೆಯೊಂದಿಗೆ ಬಣ್ಣದಲ್ಲಿ ಬೆರೆಯಲೇನೋ ಎಂಬಂತೆ ಅವಳ ಮುಖವೂ ಬಿಳುಪೇರಿತ್ತು. ಮನಸ್ಸಿನಲ್ಲಿ ನಡೆಯುತ್ತಿದ್ದ ಯಾವುದೋ ಭಯಂಕರ ಹೋರಾಟಕ್ಕೆ ಹಿಡಿದ ಕನ್ನಡಿಯಂತೆ, ಅವಳ ಮುಖವೂ ಅಸ್ತವ್ಯಸ್ತವಾಗಿತ್ತು. ಕಣ್ಣಿನಲ್ಲಿ ನನ್ನನ್ನು ಕಂಡ ಉತ್ಸಾಹದ ಬೆಳಕು ಥಳಥಳಿಸದೆ. ಕೆರೆಗಟ್ಟನಿಂತ ಕಂಬನಿ ಹೊಳೆಯುತ್ತಿತ್ತು.

ನನ್ನ ಕೂಗು ಅವಳನ್ನು ಸೋಕಿ ವಿಗ್ರಹ ಮಾಡಿತೇನೋ ಎಂಬಂತೆ, ನಿಂತ ಲ್ಲಿಯೇ ನಿಂತು ನನ್ನನ್ನು ನೋಡಿದಳು. ಭಾವದ ಏರು ಇಳಿತಕ್ಕೆ, ಏರಿಳಿಯುವ ಥರ್ಮಾಮೀಟರಿನಂತೆ ಅವಳ ವಕ್ಷಸ್ಥಳ ಏರಿಳಿಯುತ್ತಿದ್ದಿತು.

ಯಾವುದೋ ಭಯಂಕರ ಯಾತನೆಯಲ್ಲಿ ಬೇಯುತ್ತಿದ್ದಳು ಕಾತ್ಯಾಯನಿ.

ಒಂದು ಗಳಿಗೆ ಹಾಗೇ ನಿಂತು ನೋಡಿದಳು. ಮರುಗಳಿಗೆ... ಕಾತ್ಯಾಯನಿಯ ತೋಳು ನನ್ನನ್ನು ತಬ್ಬಿ, ಅವಳ ಮುಖ ನನ್ನೆದೆಯಲ್ಲಿ ಹುದುಗಿ, ಅದುವರೆಗೂ ಕಣ್ಣಲ್ಲಿ ಕೆರೆಗಟ್ಟಿದ ಕಂಬನಿ ಹನಿ ಹನಿಯಾಗಿ ತುಳುಕುತ್ತಿತ್ತು. ಯಾವುದೋ ಘೋರ ಬೇಗೆ ಅವಳ ಮೈಯನ್ನು ಹಿಂಡುತ್ತಿರುವಂತೆ ಅವಳ ಮೈ ನಸು ಕಂಪಿಸುತ್ತಿತ್ತು. ಅವಳ ಗುರುತರಿಯದ ದುಃಖವನ್ನು ಅಸಹಾಯನಾಗಿ ನಿಂತು ನೋಡುವುದು ಅಸಾಧ್ಯವಾಗಿ, ಅವಳ ಬೆನ್ನನ್ನು ನೇವರಿಸಿ—

" ಕಾತ್ಯಾಯನಿ, ಕಾತ್ಯಾಯನಿ .... ಏನಾಯಿತು ಹೇಳು. ಈ ದುಃಖಕ್ಕೇನು ಕಾರಣ "

—ಎಂದೆ. ಆ ಪ್ರಶ್ನೆಯಲ್ಲಿ ಕಾತುರತೆಯಷ್ಟೇ ಅಲ್ಲ, ಅವಳ ದುಃಖಕ್ಕೆ ಕಾರಣರಾದವರನ್ನು ಹರಿದು ತಿನ್ನಬೇಕೆಂಬ ಕ್ರೋಧವೂ ಇತ್ತು. ಆದರೆ ಕಾತ್ಯಾಯನಿ ನನ್ನ ಪ್ರಶ್ನೆಗೆ ಏನೂ ಉತ್ತರ ಕೊಡಲಿಲ್ಲ. ನನ್ನ ಮಾತಿನಿಂದ, ಬೆನ್ನ ನೇವರಿಕೆಯಿಂದ ಅವಳ ದುಃಖ ಕಡಮೆಯಾಗದೆ, ಅದು ಮತ್ತಷ್ಟು ಹೆಚ್ಚಿದಂತೆ ತೋರಿತು. ಅದುವರೆಗೂ ಬರೀ ಕಂಬನಿಯಾಗಿದ್ದ ದುಃಖ ಅಳುವಿನ ಬಿಕ್ಕಳಿಕೆಯಾಗಿ ನನ್ನದೆಯನ್ನು ಕತ್ತರಿಸತೊಡಗಿತು. ನನ್ನನ್ನು ಸುತ್ತಿಸಿ, ಸುತ್ತಿಸಿ ಚಾಟಿಯಿಂದ ಹೊಡೆಯುತ್ತಿತ್ತು, ಅವಳ ಅಳು. ತಲೆಯಮೇಲೆ ಕೆಂಡದ ಮಳೆಗರೆದಂತಾಗುತ್ತಿತ್ತು. ಮೈಯನ್ನು ಹಿಮದ ಸೂಜಿಗಳಿಂದ ಇರಿದಂತಾಗುತ್ತಿತ್ತು. ಆ ಯಾತನೆಯನ್ನು ಸಹಿಸಲಾರದೆ ನನ್ನ ಎದೆಯಲ್ಲಿ ಹುದುಗಿದ ಅವಳ ಮುಖವನ್ನು ಕಿತ್ತು ಬೊಗಸೆಯಲ್ಲಿ ಹಿಡಿದು, ಕಣ್ಣಲ್ಲಿ ಕಣ್ಣು ತುಂಬಿ ಕೇಳಿದೆ—

" ಹೇಳು ಕಾತ್ಯಾಯನಿ ಹೇಳು – ಏನಾಯಿತು ಹೇಳು. ಕಂಬನಿಗರೆದು ನನ್ನನ್ನು ಕೊಲ್ಲಬೇಡ ಕಾತ್ಯಾಯನಿ "

" ರಾಜಾ, ರಾಜಾ....ಒಂದು ಗಳಿಗೆ....ಒಂದೇ ಒಂದು ಗಳಿಗೆ ನನ್ನನ್ನೇನೂ ಕೇಳಬೇಡ ರಾಜ...."

—ಬಿಕ್ಕುತ್ತಲೇ ಉತ್ಕಂಠಿತ ಸ್ವರದಲ್ಲಿ ಹೇಳಿದಳು ಕಾತ್ಯಾಯನಿ. ಪ್ರಯತ್ನ ಪಟ್ಟಾದರೂ ಮಾತನಾಡಿದುದರಿಂದ ಅವಳ ಎದೆಯನ್ನು ಹಿಂಡುತ್ತಿದ್ದ

ದುಃಖದ ಆವೇಶ ಕೊಂಚ ಕಡಮೆಯಾದಂತೆ ತೋರಿತು. ಅವಳು ಆ ಮಾತ ನ್ನಾಡಿದ ರೀತಿಯಿಂದಾಗಿ, ಮತ್ತೆ ಅವಳನ್ನು ಮಾತನಾಡಿಸಲು ನನಗೆ ಧೈರ್ಯ ಬರಲಿಲ್ಲ. ದುಃಖ ಪೂರ್ಣ ಶಮನವಾದ ಮೇಲೆ ಮಾತಾಡಲಿ ಎಂದು ಸುಮ್ಮನಿದ್ದೆ.

ಸ್ವಲ್ಪ ಹೊತ್ತಾದ ಮೇಲೆ ಅವಳನ್ನು ಹೊಯ್ದಾಡಿಸುತ್ತಿದ್ದ ದುಃಖದ ನೆರೆ ನಿಧಾನವಾಗಿ ಇಳಿಯಿತು. ದುಃಖ ಕಡಿಮೆಯಾಗಿ, ಅದರ ಅಡಿಯಲ್ಲಿ ಹೂತು ಹೋಗಿದ್ದ ಮಾತು ಹೊರಬಂದಿತು.

" ನನ್ನಿಂದ .... ನನ್ನಿಂದ ಎಂಥ ಭಯಂಕರ ಅಪರಾಧವಾಗಿತ್ತು. ರಾಜಾ .... ಈದಿನ ನನ್ನ ಕಣ್ಣು ತೆರೆಯಿತು."

—ಕಾತ್ಯಾಯನಿ ಹೇಳಿದಳು. ಆದರೆ ಅವಳ ದುಃಖದಂತೆಯೇ ಈ ಮಾತಿನ ಕಾರಣವೂ ನನಗೆ ಅರಿವಾಗಲಿಲ್ಲ.

" ನಿನ್ನಿಂದ ಏನು ಅಪರಾಧವಾಗಿತ್ತು ಕಾತ್ಯಾಯನಿ ? "

" ವಿನಾಕಾರಣ .... ನನ್ನ ಅಣ್ಣನ ವಿಷಯದಲ್ಲಿ ನಾನು ಎಷ್ಟು ತಪ್ಪು ತಿಳಿದುಕೊಂಡಿದ್ದೆ ರಾಜಾ ಅವರ ಮನಸ್ಸಿಗೆ ಎಷ್ಟು ಹಿಂಸೆ ಕೊಟ್ಟೆ ... ನಿಜವಾಗಿಯೂ ನಾನು ಮಹಾಪಾಪಿ ... ಎಷ್ಟು ನೊಂದಿತೋ ಅವರ ಹೃದಯ ... ... ."

ಆ ಮಾತಾಡುತ್ತಾ ಆಡುತ್ತಾ ಅದುವರೆಗೂ ಮರೆಯಾಗಿದ್ದ ದುಃಖ ಮತ್ತೆ ಅವಳ ಕಣ್ಣಂಚಿನಲ್ಲಿ ಇಣಕಿಹಾಕಿತು. ಅವಳಾಡಿದ ಮಾತುಕೇಳಿ ನನಗೆ ಸಿಡಿಲು ಬಡಿದಂತಾಯಿತು.

" ಓ ! ನಮ್ಮ ಮಾತು ನಿನ್ನ ಕಿವಿಗೂ ಬಿದ್ದಿತೆ ಕಾತ್ಯಾಯನಿ ? "

ಮತ್ತೆ ದುಃಖ ಗಂಟಲಲ್ಲಿ ಒತ್ತಿಬರುತ್ತಿದ್ದುದರಿಂದ ಮಾತನಾಡಲಾಗದ 'ಹೌದೆಂದು' ಸೂಚಿಸಿ ತಲೆಯಾಡಿಸಿದಳು.

ನಮ್ಮ ಮಾತು ಅವಳಿಗೆ ತಿಳಿಯಬಾರದೆಂದು ಭವಾನಿಶಂಕರರಾಯರ ಇಚ್ಛೆಯಾಗಿತ್ತು. ಆದರದು ಅವಳಿಗೆ ತಿಳಿದುಹೋಗಿತ್ತು.

" ಎಲ್ಲಾ ಮಾತೂ ಕೇಳಿದೆಯಾ ? ನಾವು ಬಂದುದು ನಿನಗೆ ತಿಳಿದಿತ್ತೆ ?"

" ಊಹೂ. ಎಲ್ಲಾ ಮಾತೂ ಕೇಳಲಿಲ್ಲ. ನೀವು ಬಂದುದೂ ನನಗೆ ತಿಳಿದಿರಲಿಲ್ಲ ಕೋಣೆಯಲ್ಲಿದ್ದವಳು ನೀರು ತರಲೆಂದು ಹೋಗುವಾಗ ಅಣ್ಣ ಎತ್ತರಿಸಿದ ಸ್ವರದಲ್ಲಿ ಮಾತನಾಡುತ್ತಿದ್ದುದನ್ನು ಕೇಳಿ 'ಏನೋ' ಎಂದು ಹಾಗೇ ನೋಡಿದೆ. ನೀನೂ ಇದ್ದೆ. ಆಗ ಏನು ಮಾತೋ ಎಂದು ಕೇಳಿದೆ. ಅಣ್ಣ ಹೋಗುವಾಗ ಹೇಳಿದ ಮಾತು ಕಿವಿಗೆ ಬಿತ್ತು. ಅದನ್ನು ಕೇಳಿ ಅಲ್ಲಿ ನಿಲ್ಲ

ಲಾಗಲಿಲ್ಲ. ನಿನ್ನಿಂದ.. ....ನಿನ್ನಿಂದ....... ಈ ದಿನ ನನ್ನ ಕಣ್ಣು ತೆರೆಯಿತು ರಾಜಾ........ಇಲ್ಲವಾದರೆ ನನ್ನ ಅಜ್ಞಾನದಲ್ಲಿ ಅಣ್ಣನ ಮನಸ್ಸಿಗೆ ಇನ್ನೂ ಎಷ್ಟು ಹಿಂಸೆ ಕೊಡುತ್ತಿದ್ದೆನೋ ಏನೊ."

ನೀನು ಹೇಳುವುದು ನಿಜ ಕಾತ್ಯಾಯನಿ. ನಿನ್ನ ಅಣ್ಣನದು ನಿಜವಾಗಿಯೂ ತುಂಬಾ ವಿಶಾಲವಾದ ಹೃದಯ. ನಾನೂ ಅವರ ಬಗ್ಗೆ ಎಂಥ ತಪ್ಪು ಕಲ್ಪನೆಯನ್ನಿಟ್ಟುಕೊಂಡಿದ್ದೆ. ಕ್ಷಮಾಪಣೆ ಕೇಳಿಕೊಳ್ಳಲೂ ಅವಕಾಶವಾಗಲಿಲ್ಲ. ಅವರು ಹೇಳಿದ ಇನ್ನೊಂದು ಮಾತನ್ನು ನೀನು ಕೇಳಬೇಕಾಗಿತ್ತು ಕಾತ್ಯಾಯನಿ."

" ಏನು ಹೇಳಿದ ?"

" ನನ್ನ ನಿನ್ನ ಸ್ನೇಹಕ್ಕೆ ಅವರ ಅಭ್ಯಂತರವೇನೂ ಇಲ್ಲ, ಕಾತ್ಯಾಯನಿ... ... ....ಇಂದಿನಿಂದ ನೀನು ನನ್ನವಳು."

" ಅಂದರೆ—ಇದುವರೆಗೆ ನಾನು ನಿನ್ನವಳಾಗಿರಲಿಲ್ಲವೇ ?"

—ದುಃಖದ ಮೋಡದಡಿಯಲ್ಲಿ ಹುದುಗಿದ ಸೂರ್ಯರಶ್ಮಿ ಇಣಿಕಿ ಹಾಕಿ ಕೇಳಿತು.

" ನೀನು ನನ್ನವಳಾಗಿದ್ದೆಯೋ ಇಲ್ಲವೋ ಅದನ್ನು ನೀನೇ ಹೇಳಬೇಕು. ಆ ಮಾತನ್ನು ಅವರು ಕೇಳಿದರು."

" ಯಾವ ಮಾತನ್ನು ?"

" ನೀನು ನನ್ನನ್ನು ಪ್ರೀತಿಸುತ್ತೀಯಾ ? ಎಂದು."

" ಅದಕ್ಕೆ – ಏನು ಹೇಳಿದೆ."

" ನೀನೂ ನನ್ನನ್ನು ಪ್ರೀತಿಸುತ್ತೀ ಎಂದೇ ಹೇಳಿದೆ."

" ಹೌದೇ – ನನ್ನ ಪರವಾಗಿ ಆ ಮಾತು ಹೇಳಲು ನಿನಗೆ ಯಾರು ಅಧಿಕಾರ ಕೊಟ್ಟವು ಅಧಿಕಪ್ರಸಂಗಿ."

—ಸಿಟ್ಟಾದಂತೆ ನನ್ನತ್ತ ದುರುಗುಟ್ಟಿ ನೋಡುತ್ತಾ ಕೇಳಿದಳು.

" ಅಧಿಕಪ್ರಸಂಗದ ಅಪರಾಧಿ ನಾನಲ್ಲ, ನಾನು ಕೇಳಿದ ಮಾತು ಹೇಳಿದೆ. ಅಷ್ಟೆ."

" ಯಾರು ಹೇಳಿದರು ?"

" ಅಪರಾಧಿಯನ್ನು ತೋರಿಸಿದರೆ ನಾನು ಕೇಳಿದ ಶಿಕ್ಷೆ ಕೊಡುತ್ತೀಯಾ ?"

" ಓ, ಮಟ್ಟ ಹಾಕಿಬಿಡುತ್ತೇನೆ. ತೋರಿಸು."

" ಇಗೋ – ಇದು ಅಪರಾಧಿ. ಇದೇ ' ಕಾತ್ಯಾಯನಿ ನಿನ್ನನ್ನು

ಪ್ರೀತಿಸುತ್ತಾಳೆ' ಎಂದು ಹೇಳಿದವು"

—ಎಂದು ಮೃದುವಾಗಿ ಅವಳ ತುಟಿಯನ್ನು ಹಿಂಡಿದೆ.

"ಇವೇ ಅಪರಾಧಿಗಳು? ಹಾಗಾದರೆ ಇವಕ್ಕೆ ಶಿಕ್ಷೆ ಕೊಡುವುದು ನನ್ನಿಂದ ಸಾಧ್ಯವಿಲ್ಲ."

"ಮತ್ತಾರು ಕೊಡಬೇಕು?"

ನೀನು. ನಿನ್ನ ಅಧಿಕಾರಕ್ಕೆ ಇವನ್ನು ಒಪ್ಪಿಸಿದ್ದೇನೆ. ಬೇಕಾದ ಶಿಕ್ಷೆ ವಿಧಿಸು."

—ಎಂದಳು ಕಾತ್ಯಾಯನಿ, ಎದೆಯ ಆನಂದಕ್ಕೆ ಹಿಡಿದ ಕನ್ನಡಿಯಂತೆ ಕಣ್ಣು ಹೊಳೆಯುತ್ತಿರಲು, ನನ್ನತ್ತ ಮುಖ ಮಾಡಿ. ಅರಳಿದ ತುಟಿಯಂಚಿನಲ್ಲಿ ಸ್ವರ್ಗದ ಬಾಗಿಲು ತೆರೆದಿತ್ತು. ಮುತ್ತಿಟ್ಟು ಹೇಳಿದೆ—

"ಅಂತೂ ನೀನು ತುಂಬಾ ಜಾಣೆ ಕಾತ್ಯಾಯನಿ. ನಾನೇ ಮುಟ್ಠಾಳ."

"ಏಕೆ?"

"ತುಟಿಗೆ ಶಿಕ್ಷೆ ಕೊಡಿಸುವ ನೆಪದಲ್ಲಿ, ನೀನು ಬಹುಮಾನ ಪಡೆದೆಯಲ್ಲಾ ಒಂದು ಗಳಿಗೆಯ ಮೊದಲು ಇದು ತಿಳಿಯಲಿಲ್ಲ."

"ನೀನು ಮುಟ್ಠಾಳ ಎಂದು ಈಗ ತಿಳಿಯಿತೇ?"

"ಹೂ. ಈಗಲ್ಲದೆ ಮತ್ತಾವಾಗ ತಿಳಿಯಬೇಕಾಗಿತ್ತು?"

"ಕನ್ನಂಬಾಡಿಯಲ್ಲಿ ಕೈ ಹಿಡಿದಾಗಲೇ. ಆಗಲೇ ನನಗೆ ಗೊತ್ತಾಯಿತು"

"ಏನು ಗೊತ್ತಾಯಿತು"

"ಇದು ಬಹುಬೇಗ ಬಲೆಗೆ ಬೀಳುವ ಕುರಿ ಎಂದು – ನನ್ನ ಮುದ್ದು ಕುರಿಯೇ!"

—ಮೃದುವಾಗಿ ನಗುತ್ತಾ ಹೇಳಿದಳು ಕಾತ್ಯಾಯನಿ. ಸಂಜೆಯ ಕತ್ತಲು ಕವಿಯುತ್ತಿದ್ದ ಕೋಣೆಯಲ್ಲಿ ನಗು ನಕ್ಷತ್ರದ ಮಳೆಗರೆದಿತು.

"ಆದರೆ ಈಗ ಪರಿಸ್ಥಿತಿ ಬದಲಾಗಿದೆ ಕಾತ್ಯಾಯನಿ. ಹೇಗೆ"

"ಕುರುಬಗಿತ್ತಿ ಕುರಿಯನ್ನಾಳುವ ಮೊದಲು, ಕುರುಬಗಿತ್ತಿ ಕುರಿಯ ಅಧೀನದಲ್ಲಿರಬೇಕಾಗಿದೆ."

"ಏಕೆ?"

"ನಿನ್ನ ಅಣ್ಣ ಈ ದಿನ ನಿನ್ನನ್ನು ನನಗೊಪ್ಪಿಸಿದ್ದಾರೆ. ಇಂದಿನಿಂದ ನೀನು ನನ್ನ ಬಂದಿ."

"ಜೀ ಹುಜೂರ್."

"ನಾನು ಹೇಳಿದ ಹಾಗೆ ಕೇಳಬೇಕು."

“ ಜೀ ಹುಜೂರ್. ಫರ್ಮಾಯಿಯೇ – ಮತ್ತೇನಾಗಬೇಕು. ಬಾಂದಿ ಸಿದ್ಧಳಾಗಿದ್ದಾಳೆ.”

“ ಸಿದ್ಧಳಾಗಿದ್ದಾಳೆಯೇ – ಹಾಗಾದರೆ ಕೋಣೆಯಲ್ಲಿ ಕತ್ತಲು ದೀಪ ಹಾಕಲು ಹೇಳು. ಅಥವಾ ನಾನೇ ಹೊತ್ತಿಸಬೇಕೋ ಕೇಳು.”

“ ಬೇಡ ರಾಜಾ. ದೀಪ ಬೇಡ, ಈ ಕತ್ತಲೆಯೇ ಇರಲಿ ”

ದೀಪದ ಸ್ವಿಚ್ಚು ಹಾಕಲು ಹೋದೆ. ನನ್ನ ಕೈ ತಡೆದು ಹೇಳಿದಳು ಕಾತ್ಯಾಯನಿ—“ ಇಂಥ ಹೊತ್ತಿನಲ್ಲಿ ಬೆಳಕು ವೈರಿ. ಹೀಗೇ... ಹೀಗೇ ಇದ್ದು ಬಿಡಬಹುದಾದರೆ. ಈ ಗಳಿಗೆಯೇ ಅನಂತತೆಯಾಗಬಹುದಾದರೆ ಎಷ್ಟು ಚೆನ್ನ ರಾಜಾ.”

—ಬಹು ಕೋಮಲವಾದ ಧ್ವನಿಯಲ್ಲಿ ಹೇಳಿದಳು ಕಾತ್ಯಾಯನಿ ನನ್ನ ತಲೆಗೂದಲಿನಲ್ಲಿ ಕೈಯಾಡಿಸುತ್ತಾ. ಏಕೋ. ..ಏಕೋ.. ಆ ಗಳಿಗೆಯಲ್ಲಿ ಇದ್ದಕ್ಕಿದ್ದ ಹಾಗೇ ಭವಾನಿ ಶಂಕರರಾಯರು ಹೇಳಿದ ಕ್ಲಬ್ಬಿನ ಮಾತು ನೆನಪಿಗೆ ಬಂದಿತು. ಆ ಮಾತು ನೆನಪಿಗೆ ಬಂದ ಕೂಡಲೇ ಜಗತ್ತಿನ ಮೇಲೆ ಕ್ರೋಧ ಉರಿಯಿತು, ನನ್ನೆದೆಯಲ್ಲಿ.

“ ಇರಬಹುದು ಕಾತ್ಯಾಯನಿ, ಹಿಸುಣನ ನಾಲಿಗೆ ನಮ್ಮ ತೋಟದಲ್ಲಿ ಹೊಲಸು ನುಡಿಯ ಕೆಂಡವನ್ನು ತೂರದಿದ್ದರೆ ಇನ್ನು ಮೇಲೆ ನಾವು ಆದಷ್ಟು ಎಚ್ಚರವಾಗಿರಬೇಕು.”

“ ಏಕೆ ? ”

“ ನಮ್ಮ ವಿಷಯದಲ್ಲಿ ಜನ ಅಲ್ಲಸಲ್ಲದ ಮಾತನಾಡುತ್ತಿದ್ದಾರೆಂದು ಕೇಳಿದೆ.”

“ ಯಾರು ಹೇಳಿದರು ? ”

“ ನಿನ್ನ ಅಣ್ಣ.”

“ ಆವನಿಗೆ ಯಾರು ಹೇಳಿದರು ? ”

“ ಕ್ಲಬ್ಬಿನಲ್ಲಿ ಯಾರೋ ಈ ಮಾತು ಹೇಳಿದರಂತೆ ಬಹಳ ನೊಂದು ಕೊಂಡು ಹೇಳಿದರು. ಆದಷ್ಟು ಮಟ್ಟಿಗೆ ಇದಕ್ಕೆ ಅವಕಾಶ ಕೊಡಬಾರದು ಕಾತ್ಯಾಯನಿ. ನಮ್ಮ ಪ್ರೇಮದ ಮೇಲೆ ಹೊಲಸು ಮಾತಿನ ರಾಡಿನೀರು ಬೀಳಬಾರದು.”

“ ಚರಂಡಿಯಂಥ ಬಾಯಿ, ಮುನಿಸಿಪಲ್ ತೊಟ್ಟಿಯಂಥ ಹೃದಯ ಮನುಷ್ಯ ಎನ್ನುವ ಹೆಸರು ಧರಿಸಿ ಓಡಾಡುತ್ತಿರುವವರೆಗೂ ಅದನ್ನು ತಪ್ಪಿಸು ವುದು ಸಾಧ್ಯವೇ ? ”

" ಸಾಧ್ಯವಿದೆ."

" ಹೇಗೆ ? "

" ಆದಷ್ಟು ಬೇಗ ಮದುವೆಯಾದರೆ ಈ ನಾಯಿ ನಾಲಿಗೆಗಳಿಗೆ ಅವಕಾಶ ವಿರುವುದಿಲ್ಲ."

" ಆದರೆ ಸದ್ಯಕ್ಕಂತೂ ಅದಕ್ಕೆ ಅವಕಾಶವಿಲ್ಲವಲ್ಲ."

" ಏಕೆ ? "

" ನನ್ನ ನಿನ್ನ ಪರೀಕ್ಷೆಗಳು ಮುಗಿಯದೆ ಆ ಯೋಚನೆಗೆ ಅವಕಾಶವೆಲ್ಲಿ ? ಅಲ್ಲದೆ - ನೀನು ನಿನ್ನ ತಂದೆಯವರ ಸಮ್ಮತಿ ಪಡೆಯಬೇಡವೇ ? ಅಥವಾ ಅವರನ್ನು ಕೇಳುವುದು ಅಗತ್ಯವಿಲ್ಲವೋ ? "

" ಅಗತ್ಯವಿದೆಯೋ ಇಲ್ಲವೋ ಕೇಳುವುದಂತೂ ನನ್ನ ಧರ್ಮ "

" ಅವರು ಒಪ್ಪುತ್ತಾರೆಯೇ ?"

" ಒಪ್ಪದೆ—"

" ಅದು ಹೇಗೆ ಹೇಳುತ್ತಿ ? ನೀನೇ, ಹಳೆಯ ಕಾಲದ ಮನುಷ್ಯ. ನಿನ್ನ ತಂದೆ ನಿನಗಿಂತ ಹಳೆಯ ಕಾಲದ ಮನುಷ್ಯರು – ಅಂಥವರು ಒಪ್ಪುತ್ತಾರೆಯೇ ?"

" ನನಗೇನೋ ಅವರು ಒಪ್ಪುತ್ತಾರೆಂದೇ ನಂಬಿಕೆಯಿದೆ."

" ಹೇಗೆ ಹೇಳುತ್ತೀಯ ?"

" ನನ್ನ ಮೇಲೆ ಅವರಿಗಿರುವ ಪ್ರೇಮದ ಭರವಸೆಯ ಮೇಲಿನಿಂದ "

" ಒಂದು ವೇಳೆ ಒಂದು ವೇಳೆ .... ಅವರು ಒಪ್ಪದಿದ್ದರೆ . . ಆಗ........"

ನನ್ನ ಪ್ರೇಮ ಜಗತ್ತಿನಲ್ಲೇ ಲೀನವಾಗಿದ್ದ ನನಗೆ ಆ ವಿಚಾರವೇ ಬಂದಿರಲಿಲ್ಲ. ಎಂತಲೇ ಕಾತ್ಯಾಯನಿ ಆ ವಿಚಾರವನ್ನು ನೆನಪಿಸಿದಾಗ ಮನಸ್ಸಿಗೆ ಯೋಚನೆಯಾಯಿತು ಆದರೆ ಆ ಗಳಿಗೆಯಲ್ಲಿ ಆಲೋಚನೆ ಏಕೆ ಎಂದು ಕೊಂಡು —

" ಅನುಮಾನವಿದ್ದರೆ ಆ ಚಿಂತೆ. ಆದರೆ ನನಗೆ ಅನುಮಾನವೇ ಇಲ್ಲ ಮಗನನ್ನು ಪ್ರೀತಿಸುವ ತಂದೆ ಯಾರೂ ಅವನ ಹೃದಯದ ಒಲವನ್ನು ತುಳಿಯಲು ಯತ್ನಿಸುವುದಿಲ್ಲ."

" ನಿನಗೆ ಆ ನಂಬಿಕೆ ಇದ್ದರೆ ಸರಿ."

" ಬೇಕಾದರೆ ಈ ಬಾರಿ ಊರಿಗೆ ಹೋದಾಗ ಅವರ ಒಪ್ಪಿಗೆಯನ್ನೇ ತರುತ್ತೇನೆ."

" ಅಷ್ಟೇನೂ ಅವಸರಬೇಡ ರಾಜಶೇಖರ್. ನಮ್ಮ ಪರೀಕ್ಷೆಗಳು ಮುಗಿಯಲಿ. ಆ ಬಳಿಕ ಉಳಿದ ಯೋಚನೆ. ನಾವು ಸ್ವತಂತ್ರರಾಗುವವರೆಗೂ ನಮ್ಮ ಯೋಚನೆಗಳಿಗೆ ಬೆಲೆ ಬರುವುದಿಲ್ಲ."

" ಹಾಗಾದರೆ — ಅಲ್ಲಿಯವರೆಗೆ ಈ ನೀಚನುಡಿಗಳನ್ನು ಕೇಳುತ್ತಿರುವುದೇ ?"

" ಆಡಲಿ ಬಿಡು. ಬೊಗಳುವ ನಾಯಿ ಕಚ್ಚುವುದಿಲ್ಲ. ಕಚ್ಚದ ನಾಯಿಯ ಚಿಂತೆ, ನಮಗೇಕೆ ? ಈಗ ನಮಗಿರುವ ಚಿಂತೆಯೆಲ್ಲಾ ಈ ಪರೀಕ್ಷೆಯದೊಂದೇ. ಮೊದಲು ಅದು ಮುಗಿಯಲಿ."

" ನೀನು ಹೇಳುವುದೂ ಸರಿಯೆ "

" ನಾನು ಹೇಳುವುದು ಈಗಲೇನು, ಯಾವಾಗಲೂ ಸರಿಯೆ. ಆದರೆ ಇಷ್ಟು ವಾದಿಸದೆ ನಿನಗೆ ನಂಬಿಕೆ ಬರುವುದಿಲ್ಲವಲ್ಲ. ಈಗಲೇ ಹೀಗೆ. ಇನ್ನು ಮದುವೆಯಾದರೆ ನಿನ್ನೊಂದಿಗೆ ವಾದಿಸಲು ಮತ್ತೊಂದು ಎರವಲು ಬಾಯಿ ತರಬೇಕಾಗುವುದೋ ಏನೋ."

" ಅದಕ್ಕಿಂತ ಉತ್ತಮ ದಾರಿ ಇರುವಾಗ ಆಲೋಚನೆಯೇಕೆ ?"

" ಏನು ದಾರಿ ?"

" ವಾದಿಸುವ ಬಾಯನ್ನೇ ಮುಚ್ಚುವುದು. ಅದಕ್ಕೆ ಬೇಕಾದ ಅತ್ಯುತ್ತಮ ಬಾಯಿಬೀಗ ನಿನ್ನ ಬಳಿ ಇದೆಯಲ್ಲಾ. ಅದನ್ನು ಪ್ರಯೋಗಿಸಿದರಾಯಿತು."

" ಏನೆಂದರೂ ಮಗ ಹರಿ ಅನ್ನೋದನ್ನ ಬಿಡ ಎನ್ನುವ ಗಾದೆಯನ್ನು ನಿನ್ನನ್ನ ನೋಡೇ ಮಾಡಿರಬೇಕು, ರಾಜಶೇಖರ್."

—ಎಂದಳು ಕಾತ್ಯಾಯನಿ. ಅವಳ ಆಪಾದನೆಗೆ ನನ್ನ ತುಟಿ ಉತ್ತರ ಕೊಟ್ಟಿತು.

ಃ

ಆ ದಿನ ಕಾತ್ಯಾಯನಿಯ ಮನೆಯಿಂದ ಹಿಂದಿರುಗಿದಾಗ ನಗುತ್ತಲೇ ಹಿಂದಿರುಗಿದರೂ, ಭವಾನಿ ಶಂಕರರಾಯರು ಹೇಳಿದ ಕ್ಲಬ್ಬಿನ ಮಾತು ಮುಳ್ಳಿನಂತೆ ನನ್ನೆದೆಯನ್ನು ಇರಿಯುತ್ತಿತ್ತು. ಆದರೆ ಅವರು ಕ್ಲಬ್ಬಿನಲ್ಲಿ ಕೇಳಿದ ಮಾತನ್ನೇ ನಾನು ಕಾಲೇಜಿನಲ್ಲಿ ಕೇಳಬೇಕಾಗಿ ಬಂದಾಗ ನನಗೆ ಸಿಡಿಲು ಹೊಡೆದಂತಾಯಿತು.

ಯಾವುದೋ ಕುರುಡುತನದಲ್ಲಿ ಕಣ್ಣುಮುಚ್ಚಿ ನಡೆಯುತ್ತಿದ್ದ ನನ್ನನ್ನು,

ಭವಾನಿ ಶಂಕರರಾಯರ ಮಾತು, ತಟ್ಟಿ ಎಚ್ಚರಿಸಿ, ಹಾಗೆ ಕುರುಡಾಗಿ ನಡೆಯಬೇಡ. ನಿಂತು ಸುತ್ತ ನೋಡಿಕೊಂಡು ಹೋಗು ಎಂದು ಹೇಳಿತು. ನಿಂತು ಕಣ್ಣು ತೆರೆದು ನೋಡಿದಾಗ, ಎಷ್ಟು ಕಣ್ಣು ನಮ್ಮನ್ನು ನೋಡಿ ನಗುತ್ತಿವೆ, ಎಷ್ಟು ನಾಲಗೆ ನಮ್ಮ ಬೆನ್ನು ಕಂಡ ಕೂಡಲೇ ಪಿಸುಮಾತನಾಡ ಲಾರಂಭಿಸುತ್ತವೆ, ಎಷ್ಟು ಬಾಯಿ ಕುಹಕದ ಬಾಣಗಳನ್ನು ಬಿಡುತ್ತವೆ ಎಂಬದು ಅರಿವಾಯಿತು.

ಜಗತ್ತಿನ ಪರಿವೆ ಇಲ್ಲದೆ ನನ್ನ ದಾರಿಯಲ್ಲಿ ನಾನು ಕಣ್ಣುಮುಚ್ಚಿ ನಡೆದಾಗ ನನಗಾವುದೂ ತಿಳಿದಿರಲಿಲ್ಲ. ಆದರೆ ಈಗ ಎಷ್ಟು ಅಡ್ಡಹೆಸರು.

ಅಡ್ಡಹೆಸರು—ನನಗೊಬ್ಬನಿಗೇನೇ ? ಆಗಿದ್ದರೆ ನಾನು ಎಳ್ಳಷ್ಟೂ ಚಿಂತಿ ಸುತ್ತಿರಲಿಲ್ಲ. ಆದರೆ ಕಾತ್ಯಾಯನಿಯ ಹೆಸರಿಗೂ ಕೆಸರು ಬಳಿಯುವುದನ್ನು ಕಂಡು ಒಂದು ಗಳಿಗೆ ಅಪಾರ ವ್ಯಥೆಯಾಯಿತು; ಮರುಗಳಿಗೆಯೇ ಮುಳ್ಳು ನಾಲಗೆಯ ಜನದ ಬಗ್ಗೆ ನನ್ನೆದೆಯಲ್ಲಿ ದ್ವೇಷ ಉರಿಯಲಾರಂಭಿಸಿತು.

ನನ್ನ ಕಾತ್ಯಾಯನಿಯ ಪ್ರೇಮದಿಂದ ಈ ಜಗತ್ತಿಗೆ ಏನೂ ಕೆಡುಕಾಗಿರ ಲಿಲ್ಲ. ಅದರಿಂದ ನಾವು ಯಾವ ಸಹಾಯವನ್ನೂ ಆಪೇಕ್ಷಿಸಿರಲಿಲ್ಲ. ಆದರಿಂದ ನಾವು ಯಾವ ಸಹಾಯವನ್ನೂ ಅಪೇಕ್ಷಿಸಿರಲಿಲ್ಲ. ಯಾವ ಉಪಕಾರವನ್ನೂ ನಿರೀಕ್ಷಿಸಿರಲಿಲ್ಲ. ನಮ್ಮ ದಾರಿಯಲ್ಲಿ ನಾವು ನಡೆಯುವುದೂ ಇವರಿಗೆ ಕಣ್ಣು ಕಸಿರಾಗಬೇಕೇ ? ಇವರಿಗೆ ಯಾವ ಅಪಕಾರವನ್ನೂ ಮಾಡದ ನಮ್ಮಮೇಲೆ ಕುಹಕ ನುಡಿಯ ವಿಷಬಾಣಗಳನ್ನು ಬಿಡಲು ಆತುರಪಡುವುದೇಕೆ ? ನಮ್ಮನ್ನು ನೋಯಿಸಿ, ಬೇಯಿಸಿ, ಪೀಡಿಸುವುದರಲ್ಲಿ ಇವರು ಯಾವ ಪಿಶಾಚ ತೃಪ್ತಿ ಪಡೆಯುತ್ತಾರೆ ? ಯಾವ ಲೋಕದ ಉದ್ಧಾರಕ್ಕೆಂದು ಈ ನೀಚತನ ?

ನನಗೆ ದುಃಖವಾಗುತ್ತಿತ್ತು, ಬೇಸರವಾಗುತ್ತಿತ್ತು. ಕ್ರೋಧ ಕೆರಳುತ್ತಿತ್ತು, ಜಗತ್ತಿನ ರೀತಿಯನ್ನು ಕಂಡು ಕಣ್ಣು ತೆರೆದಿತ್ತು. ಕಣ್ಣು ತೆರೆದಂತೆ ಪ್ರತೀಕಾರ ಮಾಡಬೇಕೆಂದು ತೃಷೆ ಉಗ್ರವಾಗುತ್ತಿತ್ತು.

ಆದರೆ....

“ ನಿನ್ನ ಸಿಟ್ಟಿನಿಂದ ಇವರ ನೀಚತನ ನಿಲ್ಲುತ್ತದೆ. ಎಂದು ನೀನು ಭಾವಿಸಿದ್ದರೆ ಅದು ಬಹಳ ದೊಡ್ಡ ತಪ್ಪು ರಾಜಶೇಖರ. ಇಂಥ ಕುಹಕದ ವ್ಯಥೆಯನ್ನು ನಿನಗಿಂತ ನಾನು ಹೆಚ್ಚಾಗಿ ಅನುಭವಿಸಿದ್ದೇನೆ. ಕೇಳಬಾರದಂಥ ಮಾತುಗಳನ್ನು ಕೇಳಿದೇನೆ. ಹೆಣ್ಣಿನ ಬಗ್ಗೆ ಸಾವಿರ ಮಾತಾಡುವ ಜನ, ನಾನೂ ಹೆಣ್ಣು ಅನ್ನುವುದನ್ನು ಮರೆತು, ತಮ್ಮ ಲೈಂಗಿಕ ತೃಷೆ ತೀರಿಸುವ ಗೊಂಬೆ ಎಂಬ ರೀತಿಯಲ್ಲಿ ಕಂಡುದನ್ನು, ಆಡಿದುದನ್ನು ಕೇಳಿ ಅಪಮಾನದ

ಬೆಂಕಿಯಲ್ಲಿ ಬೆಂದಿದ್ದೇನೆ. ಆದರೇನು ಮಾಡುವುದು ?"

"ಮಾಡುವುದೇ–ನಿನ್ನ ಕಾಲ ಚಪ್ಪಲಿಯನ್ನು ಅವರ ಮೋರೆಯಮೇಲೇ ಉಪಯೋಗಿಸಬೇಕಿತ್ತು."

"ಅದರಿಂದ ಏನು ಉಪಯೋಗ – ನನ್ನ ಚಪ್ಪಲಿ ಕೊಳಕಾಗುತ್ತಿತ್ತು. ಸಿಟ್ಟಿನಿಂದ ಗುಣವಾಗುವ ರೋಗವಲ್ಲ ಇದು ರಾಜಶೇಖರ್, ತಾತ್ಸಾರವೊಂದೇ ಇದಕ್ಕೆ ಮದ್ದು. ಹಾಗಲ್ಲದೆ ನೀನು ಸಿಟ್ಟಾದರೆ, ಇದು ತಗ್ಗುವುದಿಲ್ಲ ಮತ್ತಷ್ಟು ಬೆಳೆಯುತ್ತದೆ. ಈ ಚಿಂತೆಯನ್ನು ಬಿಟ್ಟುಬಿಡು. ಆಡಲಿ–ಆಡಿಕೊಂಡು ಹಾಳಾಗಿಹೋಗಲಿ ! ಹತ್ತು ದಿನ ಆಡಿ ಬಳಿಕ ತಾವೇ ಬಾಯಿ ಮುಚ್ಚಿಕೊಳ್ಳು ತ್ತಾರೆ. ಹಾಗಲ್ಲದೆ ಅದನ್ನು ಪ್ರತಿಭಟಿಸಹೋದರೆ ಸದ್ಯಕ್ಕೆ ಯಾವುದೂ ನಮ್ಮ ನಮ್ಮಲ್ಲೇ ಇರಲಿ ಎಂದುಕೊಂಡಿದೇವೋ, ಅದು ಅವರ ಅನುಮಾನದ ವಸ್ತು ವಾಗೇ ಉಳಿಯದೆ ಅದು ನಿಜ ಎಂದು ನಾವೇ ಜಾಹೀರು ಮಾಡಿಕೊಂಡ ಹಾಗಾಗುತ್ತದೆ."

—ಎಂದು ಹೇಳಿ ಕಾತ್ಯಾಯನಿ ನನ್ನ ಕೈ ತಡೆಯದಿದ್ದರೆ, ಯಾರದೋ ಹಲ್ಲು ಮುರಿಯುತ್ತಿತ್ತು ; ಅಥವಾ ಆ ಪ್ರಯತ್ನದಲ್ಲಿ ನನ್ನ ಹಲ್ಲಾದರೂ ಮುರಿಯುತ್ತಿತ್ತು. ಏನಾಗುತ್ತಿತ್ತೋ ಬಿಡುತ್ತಿತ್ತೊ–ಅಂತೂ ಹಾದಿರಂಪ ವಾಗುತ್ತಿತ್ತು.

ಆದರೆ ಕಾತ್ಯಾಯನಿಯ ಮುಂಜಾಗರೂಕತೆಯ ಎಚ್ಚರಿಕೆಯ ಮಾತಿ ನಿಂದ ಅದು ತಪ್ಪಿತು.

ಆದರೂ ನಾನು ನಮ್ಮ ಬಗ್ಗೆ ಹೆಚ್ಚು ಮಾತನಾಡಲು ಅವಕಾಶವಾಗ ದಂತೆ ಎಚ್ಚರ ವಹಿಸಿದೆ ಆದರೂ ಆಗಾಗ, ಈ ಬಗೆಯ ಕುಹಕ ನುಡಿಯ ಹೊಗೆ ಗಾಳಿ ಬೀಸಿದಾಗ ಉಸಿರುಕಟ್ಟಿದಂತಾಗುತ್ತಿತ್ತು, ನನಗೆ.

ಇವರು ಸಣ್ಣ ಜನ ; ಇವರ ಬುದ್ಧಿ ಸಣ್ಣದು ; ಹೃದಯ ಸಣ್ಣದು ಎಂದು ನನಗೆ ಅರಿವಾಗಿತ್ತು. ಆದರೆ ಅದು ಎಷ್ಟು ದೂರ ಹೋಗಿರಬಹುದು ಎಂಬ ಕಲ್ಪನೆಯಿರಲಿಲ್ಲ.

ಆ ವರ್ಷ ಪರೀಕ್ಷೆಯನ್ನು ಮುಗಿಸಿಕೊಂಡು, ಸ್ವಲ್ಪ ದಿನವಾದರೂ ಕಾತ್ಯಾಯನಿಯಿಂದ ದೂರವಾಗಿರಬೇಕಲ್ಲಾ ಎಂಬ ಕೊರಗಿನೊಂದಿಗೆ ಹೋಗಲಿ, ಅಷ್ಟು ದಿನ ಈ ಸಣ್ಣ ಮಾತಿನ ನಂಜು ಗಾಳಿಯಿಂದ ದೂರವಾ ಗಿರಬಹುದಲ್ಲಾ ಎಂಬ ಬಯಕೆಯಿಂದ, ಊರಿಗೆ ಹೋದಾಗ—

ನನ್ನ ಕಣ್ಣು ತೆರೆಯಿತು.

ಊರಿಗೆ ಹೋದಾಗ ಮೊದಲಷ್ಟು ದಿನ ನನ್ನ ತಂದೆ ನನ್ನೊಂದಿಗೆ

ಯಾವಾಗಲೂ ಇರುವಂತೆಯೇ ಇದ್ದರೂ, ಅವರ ರೀತಿಯಲ್ಲಿ ಹಿಂದೆ ಕಾಣದ ಏನೋ ಬಿಗಿತವಿದ್ದಂತೆ ಇತ್ತು. ಹಿಂದೆ ಅಷ್ಟು ಎದ್ದು ಕಾಣದ ಅಸಹನೆ, ಸಿಡುಕುತನ, ಶೀಘ್ರ ಕೋಪಗಳು ಈಗ ಎದ್ದು ಕಾಣುತ್ತಿದ್ದವು.

ವೃದ್ಧಾಪ್ಯ, ಹಾಗೇ ಇಳಿವಯಸ್ಸಿನಲ್ಲಿ ಒದಗಿದ ಒಂಟಿತನಗಳಿಂದ ಹಾಗಾಗಿರಬೇಕೆಂದು ಭಾವಿಸಿ ಸುಮ್ಮನಿದ್ದೆ. ಆದರೆ ಅದರ ನಿಜವಾದ ಕಾರಣ ತಿಳಿದಾಗ ನನ್ನ ಮೈ ನಡುಗಿತು.

ಒಂದು ದಿನ ರಾತ್ರಿ ಊಟ ಮುಗಿಸಿ, ಏನೋ ಮಾತನಾಡುತ್ತಾ ಕುಳಿತಿದ್ದಾಗ, ಇದ್ದಕ್ಕಿದ್ದ ಹಾಗೇ—

" ನಿನ್ನ ಮೈಸೂರಿನ ಓದು ಇನ್ನೂ ಎಷ್ಟು ದಿನಕ್ಕೆ ಮುಗಿಯುತ್ತದೆ ರಾಜಣ್ಣ ?"

—ಎಂದರು.

" ಈ ಸಾರಿ ಪಾಸಾದರೆ, ಇನ್ನು ಒಂದು ವರ್ಷ ಓದಿದರೆ ಅಲ್ಲಿಗೆ ಮುಗಿದಹಾಗಾಗುತ್ತದೆ."

" ಆದರೆ – ಪಾಸಾಗುತ್ತದೆಯೋ ?"

"ಆಗುತ್ತದೆ ಎಂದುಕೊಂಡಿದೇನೆ. ಪರೀಕ್ಷೆಯಲ್ಲಿ ಚೆನ್ನಾಗಿ ಮಾಡಿದ್ದೇನೆ."

" ಏನು ಮಾಡಿದೀಯೋ, ಏನು ಬಿಟ್ಟದೀಯೋ – ಅಂತೂ ಇದು ಮುಗಿಯಲು ಇನ್ನೂ ಒಂದು ವರ್ಷ ಬೇಕು ಎನ್ನು."

" ಹೂ. ಡಿಸೆಂಬರಿಗೆ ಮುಗಿಯುತ್ತದೆ. ಅದೇ ದೊಡ್ಡ ಪರೀಕ್ಷೆ. ಅದರಲ್ಲಿ ಪಾಸಾದರೆ ಬಳಿಕ ಆರು ತಿಂಗಳು ಹೌಸ್ ಸರ್ಜನ್ ಆಗಿ ಆಸ್ಪತ್ರೆಯಲ್ಲಿ ಕೆಲಸ ಮಾಡಬೇಕು. ಅಲ್ಲಿಗೆ ಎಲ್ಲಾ ಮುಗಿದ ಹಾಗಾಗುತ್ತದೆ."

" ಅಂದರೆ ಎಲ್ಲಾ ನೀನು ಹೇಳಿದ ಹಾಗೇ ಆಗಿ ಮುಗಿದರೂ, ಇನ್ನೂ ಒಂದು – ಒಂದೂವರೆವರ್ಷದ ಮಾತು ಅನ್ನು."

" ಹೂ."

" ಅಂದರೆ ಇನ್ನು ಒಂದು – ಒಂದೂವರೆ ಸಾವಿರ ರೂಪಾಯಿ ಖರ್ಚಿನ ಬಾಬತು."

" ಹೌಸ್ ಸರ್ಜನ್ ಆಗಿ ಕೆಲಸ ಮಾಡುವ ಆರು ತಿಂಗಳು ಸರಕಾರದವರೇ ತಿಂಗಳಿಗೆ ಎಪ್ಪತ್ತೈದು ರುಪಾಯಿ ಸ್ಟೈಪೆಂಡ್ ಕೊಡುತ್ತಾರೆ. ಆದ್ದರಿಂದ ಆ ಆರು ತಿಂಗಳು ಹೆಚ್ಚು ಖರ್ಚಾಗುವುದಿಲ್ಲ "

" ಏನಂದರೂ ಕಡೆಯ ಪಕ್ಷ ಇನ್ನೊಂದು ಸಾವಿರ ರೂಪಾಯಾದರೂ ಕಟ್ಟಿಕೊಂಡಿರಬೇಕು."

" ಹೂ: ಅಷ್ಟಾಗಬಹುದು."

" ಅಷ್ಟಾಗಬಹುದು – ಎಷ್ಟು ಸುಲಭವಾಗಿ ಹೇಳುತ್ತೀಯ ರಾಜಣ್ಣ – ನೋಡು ಇವತ್ತಿನವರೆಗೂ ನಿನಗೆ ಮನೆಯ ವ್ಯವಹಾರ ಯಾವುದೂ ಹೇಳಿಲ್ಲ. ಇಲ್ಲನ ಚಿಂತೆ ನಿನ್ನ ತಲೆಗೆ ಹತ್ತಿಸಿ, ನಿನ್ನ ಓದಿಗೆ ವಿಘ್ನ ತರುವುದಕ್ಕೆ ನನಗೆ ಇಷ್ಟವಿರಲಿಲ್ಲ. ಆದರೆ ಈಗ ಇರುವ ವಿಚಾರ ಹೇಳದೆ ಬೇರೆ ದಾರಿಯೇ ಇಲ್ಲ."

" ಅದೇನು ಹೇಳು."

" ನಿನ್ನ ಹತ್ತಿರ ರಹಸ್ಯವೇನು — ನಿನ್ನ ಈ ನಾಲ್ಕು ವರ್ಷದ ಓದಿಗೆ ಎಷ್ಟು ಖರ್ಚಾಗಿದೆ ಗೊತ್ತೇ ರಾಜಣ್ಣ."

" ಮೂರು ನಾಲ್ಕು ಸಾವಿರ ರುಪಾಯಾದರೂ ಆಗಿರಬೇಕು."

" ಹೂ. ಅಷ್ಟೇ ಏನು–ಅದಕ್ಕಿಂತ ಹೆಚ್ಚೇ ಆಗಿದೆ. ಖರ್ಚು ಮಾಡೋ ರಿಗೆ ದುಡ್ಡಿನ ಲೆಕ್ಕ ಗೊತ್ತಾಗುವುದಿಲ್ಲ. ಏನೋ ಆಯಿತು – ಹೋಯಿತು ಅನ್ನು, ನನ್ನ ಕೈಯ ದುಡ್ಡೇ ಆಗಿದ್ದರೆ, ಅಷ್ಟೇ ಏನು ಇನ್ನಷ್ಟು ಖರ್ಚಾ ಗಿದ್ದರೂ ನಾನು ಯೋಚನೆ ಮಾಡುತ್ತಿರಲಿಲ್ಲ. ಆದರೆ – ನಿನಗೇ ಗೊತ್ತಿದೆ. ಈಚಿಗೆ ಏಕೋ ನಮ್ಮ ಗ್ರಹಚಾರ ಕ್ರೂರವಾಗಿದೆ. ಯುದ್ಧಕಾಲದಲ್ಲಿ ಲಕ್ಷ್ಮಿ ಭಿಕಾರಿಗಳನ್ನು ಲಕ್ಷಾಧಿಕಾರಿಗಳನ್ನಾಗಿ ಮಾಡಿದಳು. ಆದರೆ ಏಕೋ ಅವಳ ಕೃಪಾಕಟಾಕ್ಷ ನಮ್ಮ ಮೇಲೆ ಬೀಳಲಿಲ್ಲ. ವ್ಯಾಪಾರದಲ್ಲಿ ಲಾಭವಾಗುವ ಬದಲು ಏಟೇ ಬಿತ್ತು. ಹೀಗಾಗಿ ನಿನ್ನ ಓದಿಗಾಗಿ ಮೂರು ಸಾವಿರ ರುಪಾಯಿ ಸಾಲ ಮಾಡಬೇಕಾಗಿ ಬಂತು."

" ಆಂ ! ಸಾಲ ಮಾಡಿದೆಯಾ ?"

" ಹೂ. ಬೇರೆ ದಾರಿ ಏನಿತ್ತು ಹೇಳು ? ನಾವು ಎಂದೂ ಶ್ರೀಮಂತ ರಾಗಿರಲಿಲ್ಲ, ಆದರೆ ಸಾಲವಂದಿಗರೂ ಆಗಿರಲಿಲ್ಲ. ಈ ಕೊರಗಿನಲ್ಲೇ ಅವಳು ಕಣ್ಣುಮುಚ್ಚಿಕೊಂಡಳು. ಅವಳು ಹೋದ ಮೇಲಂತೂ ಮನೆಯ ಲಕ್ಷ್ಮಿಯೇ ಹೋದಂತಾಗಿ ಪರಿಸ್ಥಿತಿ ದಿನದಿನಕ್ಕೆ ಕೆಡುತ್ತಿದೆ ಮಾಡಿದ ಸಾಲ ತೀರಿಸು ವುದಿರಲಿ, ಬಡ್ಡಿ ಕೊಡುವುದಕ್ಕೂ ಆಗದೆ ಇರುವ ಮನೆ, ಅಷ್ಟಿಷ್ಟು ಹೊಲ ಎಲ್ಲಾನೂ ಕಳೆದುಕೊಂಡು, ಬೀದಿಯ ಭಿಕಾರಿಗಳಾಗಬೇಕು. ಈ ವರ್ಷಕ್ಕೆ ಇನ್ನು ಒಂದು ಸಾವಿರ ಆಗಬೇಕು ಎನ್ನುತ್ತೀ. ಸಾವಿರ ಸಣ್ಣ ಸಂಖ್ಯೆಯಲ್ಲ. ನಾವೇನೋ ಸಾಲ ಮಾಡಬಹುದು. ಆದರೆ ಕೊಡುವವರು ಯಾರಿದ್ದಾರೆ ? ಇಷ್ಟು ಹಣ ಎಲ್ಲಿಂದ ತರುವುದು – ಇದೇ ಚಿಂತೆಯಾಗಿಹೋಗಿದೆ ನನಗೆ."

ಅವರ ಮಾತನ್ನು ಕೇಳಿ ನನ್ನ ಹೃದಯದಲ್ಲಿ ಇದ್ದಕ್ಕಿದ್ದ ಹಾ ಗೇ ಕತ್ತಲು ಕವಿದಂತಾಯಿತು. ತಂದೆಯವರಿಗೆ ದುಡ್ಡಿನ ತೊಂದರೆ ಇದೆ ಎಂದು

ನಾನು ಊಹಿಸಿದ್ದೆ. ಆದರೆ ಆ ತೊಂದರೆ ಸಾಲವಾಗಿ ಬೆಳೆದು ಕೊರಗಾಗಿ ಉರಿದು ತಾಯನ್ನು ಬಲಿತೆಗೆದುಕೊಂಡಿತೆಂಬುದು ತಿಳಿದಿರಲಿಲ್ಲ.

" ಈ ಮಾತು ಮೊದಲೇ ನನಗೆ ಏಕೆ ಹೇಳಲಿಲ್ಲ ಅಣ್ಣ ?"

" ಹೇಳಿದ್ದರೆ ನೀನು ತಾನೇ ಏನು ಮಾಡುತ್ತಿದ್ದಿ ? ನಮ್ಮ ಹಾಗೆ ನೀನೂ ಕೊರಗಿಕೊಂಡು ಓದು ಕೆಡಿಸಿಕೊಳ್ಳುತ್ತಿದ್ದೆ. ಅಷ್ಟೇ."

ಅವರು ಹೇಳಿದ ಮಾತು ಕಟುವಾದ ಸತ್ಯವಾಗಿತ್ತು. ನಿಜ. ಅವರು ಹೇಳಿದುದಕ್ಕಿಂತ ಹೆಚ್ಚಿನದನ್ನೇನನ್ನೂ ಮಾಡುವ ಶಕ್ತಿ ನನಗಿರಲಿಲ್ಲ ಆದರೂ—

" ಆದರೂ ಖರ್ಚನ್ನಾದರೂ ಕಡಮೆಮಾಡಬಹುದಾಗಿತ್ತು."

" ಹೊಟ್ಟೆ ಬಟ್ಟೆ ಕಟ್ಟಿಯೇ ? "

" ಹೇಗೋ ನೀನಿಷ್ಟು ಕಷ್ಟಪಡುತ್ತಿರುವಾಗ ನಾನೂ ಅಷ್ಟು ಕಷ್ಟಪಟ್ಟಿದ್ದರೆ ಏನೂ ಆಗುತ್ತಿರಲಿಲ್ಲ."

" ಮಗನಾಗಿ ನೀನು ಈ ಮಾತು ಹೇಳುತ್ತಿದೀಯ. ನೀನೂ ತಂದೆಯಾಗಿದ್ದರೆ ನಿನಗೆ ಗೊತ್ತಾಗುತ್ತಿತ್ತು – ಮಕ್ಕಳನ್ನು ಕಷ್ಟಪಡಿಸುವುದರ ಕಷ್ಟ ಏನೆಂದು. ಇವತ್ತಲ್ಲ, ನಾಳೆ ನಿನಗೇ ಅರ್ಥವಾಗುತ್ತದೆ "

" ಹಾಗಾದರೆ ಈಗ ಏನು ಮಾಡುವುದು ಅಣ್ಣ. ಓದು ಇಲ್ಲಿಗೇ ನಿಲ್ಲಿಸಿಬಿಡಲೇ ? "

" ಎಲ್ಲಾದರೂ ಉಂಟೆ ? ನೀನು ಈಗ ಓದು ನಿಲ್ಲಿಸಿಬಿಟ್ಟರೆ ಇಷ್ಟು ದಿನ ಪಟ್ಟ ಕಷ್ಟವೆಲ್ಲಾ ಹೊಳೆಯಲ್ಲಿ ಹುಣಸೆಹಣ್ಣು ತೊಳೆದ ಹಾಗಾಗುತ್ತದೆ. ಏನಾದರಾಗಲಿ, ಶತಾಯ ಗತಾಯ ನೀನು ಓದು ಮುಗಿಸಬೇಕು."

" ಆದರೆ ಹೇಗೆ ? "

" ಅದಕ್ಕೆ ನಾನು ಒಂದು ದಾರಿ ಕಂಡುಹಿಡಿದಿದೀನಿ. ನೀನು ಒಪ್ಪಿದರೆ ಎಲ್ಲಾ ಹೂವಿನ ಸರ ಎತ್ತಿದ ಹಾಗಾಗುತ್ತದೆ."

" ಏನು ಹೇಳು "

" ಹೇಳಿದರೆ – ನನ್ನ ಮಾತು ನೀನು ನಡೆಸಿಕೊಡಬೇಕು. ನನ್ನ ಮಾತಿಗೆ ಇಲ್ಲ ಎನ್ನಬಾರದು."

" ನಿನ್ನ ಮಾತಿಗೆ ನಾನು ಎಂದಾದರೂ ಹಾಗೆ ಹೇಳಿದೇನೆಯೇ ? "

" ಹೇಳಿಲ್ಲಪ್ಪ – ಆದರೂ—"

" ಮತ್ತೇಕೆ ಯೋಚನೆ ? "

" ಈಗ ನೀನು ವಯಿಸ್ಸಿಗೆ ಬಂದ ಹುಡುಗ. ಪಟ್ಟಣ ವಾಸದಲ್ಲಿ ಬೆಳೆದು

ಅಲ್ಲಿಯ ಜೀವನ ಕಂಡವನು. ನಿಮ್ಮ ಮಾತು ನಿಮಗೇ ಇರಲಿ. ನನ್ನ ದಾರಿ ಬೇರೆ ಎಂದು ಬಿಟ್ಟರೆ ಏನು ಮಾಡುವುದು. ಅದಕ್ಕೇ ಯೋಚನೆ ಮಾಡು ತ್ತಿದ್ದೇನೆ."

" ನಾನು ಎಷ್ಟು ದೊಡ್ಡವನಾದರೂ, ಎಷ್ಟು ಪಟ್ಟಣವಾಸ ಮಾಡಿದರೂ ನಿಮ್ಮ ಮಗನೇ ಅಲ್ಲವೇ ? "

" ಆ ಭಾವನೆ ನಿನ್ನಲ್ಲಿ ಇದ್ದರೆ ನನ್ನಂಥ ಭಾಗ್ಯಶಾಲಿಯೇ ಇಲ್ಲ."

" ಆ ವಿಷಯದಲ್ಲಿ ನೀನು ಏನೂ ಸಂಕೋಚ ಸಂಶಯ ಇಟ್ಟುಕೊಳ್ಳ ಬೇಡ ಅಣ್ಣ. ನಿನ್ನ ಮನಸ್ಸಿನಲ್ಲಿ ಏನಿದೆಯೋ ಹೇಳು."

" ಹೇಳಲೇ ? "

" ಹೂ."

" ನಾನು ನಿನ್ನ ತಂದೆ. ನಿನ್ನಷ್ಟು ಓದಿಲ್ಲವಾದರೂ ಈ ಪ್ರಪಂಚ ವ್ಯವ ಹಾರದಲ್ಲಿ ಸಾಕಷ್ಟು ನುರಿತಿದೇನೆ – ಏನು ಮಾಡಿದರೂ ನಿನ್ನ ಹಿತ ದೃಷ್ಟಿ ಯಿಂದ ಮಾಡುತ್ತೇನೆ ಎಂಬ ನಂಬಿಕೆ ನಿನಗಿದೆಯಲ್ಲವೇ ರಾಜಣ್ಣ ? "

" ನಿಜ. ನಿನಗಿಂತ ಹೆಚ್ಚಿನ ಹಿತೈಷಿಗಳು ಮತ್ತೆ ಯಾರಿದ್ದಾರೆ ಈ ಲೋಕದಲ್ಲಿ."

" ನೋಡು ರಾಜಣ್ಣ – ಈಗ ಎರಡು ವಿಷಯ ಮುಖ್ಯವಾದದ್ದು. ಮೊದಲು ನಿನ್ನ ಓದು ನಿರ್ವಿಘ್ನವಾಗಿ ಮುಗಿಯಬೇಕು. ಅದಕ್ಕೆ ಹಣದ ತೊಂದರೆಯಾಗಬಾರದು. ಹಾಗೇ ಈಗ ನಿನ್ನ ಓದಿಗೆ ಮಾಡಿದ ಸಾಲ ಮುಗಿದು, ನಾನು ನಿನಗೆ ಅಂತ ಮಾಡಿಟ್ಟರೋ ಈ ಜುಜಬಿ ಆಸ್ತಿ ನಿನಗೆ ಉಳಿದು, ಲೋಕದಲ್ಲಿ ನೀನೂ ಒಬ್ಬ ಗಣ್ಯ ಮನುಷ್ಯನಾಗಬೇಕು ಇಷ್ಟೇ ಅಲ್ಲವೇ ? "

" ಹೂ."

" ಇವೆಲ್ಲಕ್ಕೂ ಅನುಕೂಲವಾಗಿ ಒಂದು ಯೋಚನೆ ಮಾಡಿದೇನೆ. ನೀನು ಹೂ ಅಂದರೆ ಎಲ್ಲಾ ಚುಟಕಿ ಹಾಕಿದ ಹಾಗೆ ಮುಗಿದುಹೋಗುತ್ತದೆ."

" ಏನು ಹೇಳು. ನೀನು ಹೇಳಿದ ಮೇಲೆ ತಾನೇ ನಾನು ಒಪ್ಪುವುದು, ಬಿಡುವುದು."

" ನಾನೂ ಬಹಳ ಯೋಚನೆ ಮಾಡಿದೆ ರಾಜಣ್ಣ. ಈಗ ಅದು ಬಿಟ್ಟು ಬೇರೆ ದಾರಿಯೇ ಇಲ್ಲ."

" ಇಷ್ಟೇಕೆ ಸುತ್ತುಬಳಸು. ಅದೇನು ಹೇಳಬಾರದೇ ? "

—ಸಿಡುಕಿನಿಂದ ಹೇಳಿದರು ತಂದೆ.

" ಸರಿ. ನಿನಗೆ ಹೇಗೆಬೇಕೋ ಹಾಗೆ ಹೇಳು."

" ಅದು ಸರಿಯಾದ ಮಾತು. ಬೆಂಗಳೂರಿನ ಮುತ್ಯಾಲ ಶ್ರೀನಿವಾಸ ಶೆಟ್ಟರು ನಿನಗೆ ಗೊತ್ತಿಲ್ಲವೇ ? "

" ಯಾರು ? "

" ನೀನು ಬೆಂಗಳೂರಿನಲ್ಲಿ ಕಾಲೇಜಿಗೆ ಸೇರಲು ಮೊದಲ ಸಲ ಹೋಗಿದ್ದಾಗ ನಾವು ಅವರ ಮನೆಯಲ್ಲಿ ಇಳಿದುಕೊಂಡಿರಲಿಲ್ಲವೇ ? "

" ಹೂ. ಈಗ ನೆನಪಾಯಿತು. ಅವರ ವಿಚಾರ ಏನು ? "

" ನಿನಗೆ ಗೊತ್ತಿದೆಯೋ ಇಲ್ಲವೋ. ಅವರು ಬಹಳ ದೊಡ್ಡ ಶ್ರೀಮಂತರು ಬೆಂಗಳೂರಿನಲ್ಲೇ ಅವರದು ಮೂರು ಜವಾಹಿರಿ ಅಂಗಡಿಗಳಿವೆ. ಲಕ್ಷಾಂತರ ರೂಪಾಯಿ ಕುಳ. ಅಷ್ಟೇ ಅಲ್ಲ – ನಿನ್ನ ತಾಯಿಯ ಕಡೆಯಿಂದ ನಮಗೆ ನೆಂಟರೂ ಅಹುದು."

" ಇರಬಹುದು."

" ಅವರಿಗೆ ಮದುವೆಗೆ ಬಂದ ಮಗಳಿದಾಳೆ ರಾಜಣ್ಣ. ಹುಡುಗಿಯನ್ನು ನಾನು ನೋಡಿದೀನಿ. ಬಂಗಾರದ ಗೊಂಬೆ ಇದ್ದಹಾಗೆ ಇದಾಳೆ. ಮೊನ್ನೆ ಬೆಂಗಳೂರಿಗೆ ಹೋಗಿದ್ದಾಗ ಶ್ರೀನಿವಾಸಶೆಟ್ಟರೇ ಆ ಹುಡುಗಿಯನ್ನು ನಿನಗೆ ತಂದುಕೊಳ್ಳುವ ಮಾತು ಎತ್ತಿದ್ದರು. ಮಾಮೂಲು ವರೋಪಚಾರವಲ್ಲದೆ, ಹುಡಿಗಿಯ ಮೈಮೇಲೆ ಪಂಚೇರು ಬಂಗಾರ ಹಾಕಿ, ಹತ್ತುಸಾವಿರ ರೂಪಾಯಿ ವರದಕ್ಷಿಣೆ ಕೊಟ್ಟು, ನಿನ್ನ ಓದಿನ ಜವಾಬ್ದಾರಿಯನ್ನು ನಾನೇ ವಹಿಸುತ್ತೀನಿ ಎಂದರು."

ತಂದೆಯಾಡಿದ ಮಾತನ್ನು ಕೇಳಕೇಳುತ್ತಾ ನನ್ನ ಉಸಿರುಕಟ್ಟಿದ ಹಾಗಾಗ ಲಾರಂಭಿಸಿತು. ಏನೋ ಭೀತಿ ಕವಿಯಲಾರಂಭಿಸಿತು. ಅದನ್ನು ತಡೆಹಿಡಿದು ಕೇಳಿದೆ—

" ಅದಕ್ಕೆ ನೀನೇನು ಹೇಳಿದೆ ? "

" ನಾನು ಹೇಳುವುದೇನು, ಯಾರು ಹೇಳುವುದೇನು ರಾಜಣ್ಣ, ಅಂಥ ಕಡೆ ಸಂಬಂಧ ಒದಗಿಬಂದದ್ದು ನಮ್ಮ ಪುಣ್ಯ. ಹೇಗೂ ನೀನು ನನ್ನ ಮಾತು ತೆಗೆದುಹಾಕೊಲ್ಲಾ ಅಂತ ನಂಬಿಕೆಯಿತ್ತು. ಆಗಲಿ ಎಂದು ಬಂದೆ ನೀನು ಮೈಸೂರಿಗೆ ಹೋಗುವಾಗ ಬೆಂಗಳೂರಿನವರೆಗೂ ನಾನು ಬರುತ್ತೇನೆ ಹುಡುಗಿಯನ್ನು ನೀನು ನೋಡಿದ ಶಾಸ್ತ್ರ ಮುಗಿಸಿದರೆ, ಈ ವೈಶಾಖ ಮಾಸದಲ್ಲೇ ಲಗ್ನ ಮುಗಿಸಿಬಿಡಬಹುದು."

—ಎಲ್ಲವನ್ನೂ ಮೊದಲೇ ನಿಶ್ಚಯಿಸಿದ ಧ್ವನಿಯಲ್ಲಿ ಹೇಳಿದರು ನನ್ನ ತಂದೆ. ಅವರಾಡಿದುದನ್ನು ಕೇಳಿ ನನಗೆ ಗರ ಬಡಿದಂತಾಯಿತು. ವಿದುಳಿನಲ್ಲಿ

ಬಿರುಗಾಳಿ ಮೊರೆಯಲಾರಂಭಿಸಿತು. ಅನಿರೀಕ್ಷಿತವಾಗಿ ಜಡಿದ ಸಿಡಿಲಿನಿದಿರು ನನ್ನ ನಾಲಗೆ ಉಡುಗಿಹೋಗಿತ್ತು. ನಾನು ಸುಮ್ಮನೆ ಕುಳಿತುದನ್ನು ನೋಡಿ ಅವರೇ ಮಾತನ್ನು ಮುಂದುವರಿಸಿ ಕೇಳಿದರು—

" ಏನು ರಾಜಣ್ಣ, ಆಗಬಹುದು ತಾನೇ ? "

ಏನು ಉತ್ತರ ಕೊಡಲಿ, ಏನು ಉತ್ತರ ಕೊಡಲಿ–ಮೈಯ ರಕ್ತವನ್ನು ಹೆಪ್ಪುಗಟ್ಟಿಸುತ್ತಿರುವ ಈ ಪ್ರಶ್ನೆಗೆ ?

" ಏಕೆ ರಾಜ, ಸುಮ್ಮನೆ ಕುಳಿತುಬಿಟ್ಟೆ ? "

—ಮತ್ತೆ ಕೇಳಿದರು ಮಿದುಳನ್ನು ಕತ್ತರಿಸುವ ಆ ಪ್ರಶ್ನೆಯನ್ನು. ಏನು ಉತ್ತರ ಹೇಳಲಿ ? ಏನಾದರೂ ಉತ್ತರ ಹೇಳಬೇಕಿತ್ತು ? ಏನಾದರೂ ಉತ್ತರ ಹೇಳಿ ಅನಿರೀಕ್ಷಿತವಾಗಿ ಕವಿದುಬಂದ ಈ ಕುತ್ತಿನಿಂದ ಪಾರಾಗಬೇಕಿತ್ತು. ಅವರ ಮಾತು ಕೇಳಿ ಗಟ್ಟಿನೆಲವೆಂದು ನಂಬಿ ನಡೆಯುತ್ತಿದ್ದವನು ಇದ್ದಕ್ಕಿದ್ದ ಹಾಗೇ ಕಳ್ಳಉಸುಗಿನಲ್ಲಿ ಕುಸಿದಂತಾಗಿತ್ತು ನನ್ನ ಸ್ಥಿತಿ.

" ನಿನ್ನ ಮಂಕುಬುದ್ಧಿಗಿಷ್ಟು ಬೆಂಕಿ ಹಾಕಿದರು. ಬಂಗಾರದಂಥ ಹುಡುಗಿ, ಕುಬೇರನಂಥ ಮಾವ ಸಿಗೋವಾಗ ನಿನ್ನ ಬಾಯಿಂದ ಮಾತು ತಾನೇ ಹೇಗೆ ಹೊರಡುತ್ತ ಹೇಳು "

ನನ್ನ ಮೌನವನ್ನು ಅಪಾರ್ಥಮಾಡಿಕೊಂಡು ನಗುತ್ತಾ ಹೇಳಿದರು ನನ್ನ ತಂದೆ. ಅವರ ನಗುವೂ ನನ್ನ ಕಿವಿಯಲ್ಲಿ ಕಾದ ಸೀಸದ ರಸವನ್ನು ಹುಯ್ದ ಹಾಗಾಯಿತು. ಮಾತನಾಡದೆ ಸುಮ್ಮನಿರಲು ಸಾಧ್ಯವೇ ಇರಲಿಲ್ಲ. ಹೇಳಬೇಕು. ಆ ಮಾತನ್ನು ಈಗಲೇ ಹೇಳಿಬಿಡಬೇಕು—

" ಅಣ್ಣಾ "

ನನ್ನ ಕೂಗಿನ ಕರ್ಕಶತೆ ನನಗೇ ಗಾಬರಿಯನ್ನುಂಟುಮಾಡಿತು. ಅವರೂ ಬೆದರಿದರು ಆ ಸ್ವರವನ್ನು ಕೇಳಿ.

" ಏನು ರಾಜಣ್ಣ ?"

" ಈ ಮದುವೆ ಸಾಧ್ಯವಿಲ್ಲ."

" ಏಕೆ ?"

" ಏಕೆಂದು ಈ ದಿನ ಹೇಳಲು ಸಾಧ್ಯವಿಲ್ಲ. ಈಗ ನನ್ನನ್ನೇನೂ ಕೇಳ ಬೇಡ. ಆದರೆ ಈ ಮದುವೆಯ ಮಾತನ್ನು ಮುಂದುವರಿಸಬೇಡ."

" ಬೇಡ ಎಂದರೆ–ನಾನಾಗಲೇ ಅವರಿಗೆ ಮಾತು ಕೊಟ್ಟಾಯಿತಲ್ಲ."

" ಏನಾದರಾಗಲಿ – ಈ ಮದುವೆ ಸಾಧ್ಯವಿಲ್ಲ."

" ಕೊಂಚ ಯೋಚನೆ ಮಾಡು ರಾಜ. ಹತ್ತು ಸಾವಿರ ವರದಕ್ಷಣೆ."

" ಹತ್ತು ಸಾವಿರಕ್ಕಲ್ಲ, ಹತ್ತು ಲಕ್ಷಕ್ಕೂ ನನ್ನನ್ನು ಮಾರಿಕೊಳ್ಳಲು ಸಿದ್ಧವಾಗಿಲ್ಲ."

" ಈಗ ಮಾತು ಮುರಿದರೆ ನೆಂಟರಲ್ಲಿ ನನ್ನ ಮರ್ಯಾದೆ ಉಳಿಯುತ್ತದೆಯೇ ? ರಾಜ ?"

" ಏನೋ. ಏನೋ. ನಾನೇನೂ ಹೇಳಲಾರೆ. ಆದರೆ ಈ ಮದುವೆ ಮಾತ್ರ ಸಾಧ್ಯವಿಲ್ಲ."

" ಏಕೆ ? ನಿನ್ನ ಕಾಲೇಜು ಸೂಳೆ ಅದಕ್ಕೆ ಅಡ್ಡಿಯೇನೋ—"

—ತಾಳ್ಮೆಸೋತು, ತಟಕ್ಕನೆ ಸಿಡಿದು ಕೇಳಿದರು ನನ್ನ ತಂದೆ.

ಕಾಲೇಜು ಸೂಳೆ ! ಇದ್ದಕ್ಕಿದ್ದ ಹಾಗೇ ನನ್ನ ನೆತ್ತಿಯ ಮೇಲೆ ನೂರು ಸಿಡಿಲು ಒಟ್ಟಿಗೆ ಸಿಡಿದಂತಾಯಿತು.

" ಅ್ಣಾ .......ಏನು ಹೇಳಿದೆ........"

" ಏನು ಹೇಳೋದೇನು – ನನಗೆಲ್ಲಾ ಗೊತ್ತಾಗಿದೆ."

" ಏನು ಗೊತ್ತಾಗಿದೆ ನಿನಗೆ ?"

" ನೀನು ಓದುಬಿಟ್ಟು ಯಾವುದೋ ಪೋಲಿ ಮುಂಡೆ ಬೆನ್ನುಬಿದ್ದು ಅಲೀತಾ ಇರೋದು. ಹಡಬಿಟ್ಟಿ ದುಡ್ಡು ಸಿಕ್ಕರೆ ನೀನೇನು ಮಾಡೀಯ ಹೇಳು. ಅದೆಲ್ಲಾ ನಡೆಯೋ ಮಾತಲ್ಲ ರಾಜ. ಇವತ್ತು ನಾನು ಸತ್ತ ನಿನ್ನ ತಾಯಿ ಆಣೆ ಇಟ್ಟು ಹೇಳ್ತೀನಿ ಕೇಳು — ನೀನು ಈ ಆಟ ಬಿಟ್ಟುಬಿಡಬೇಕು ಅವಳನ್ನೇನಾದರೂ ಕಟ್ಟಿಕೋತೀನಿ ಅಂತ ಮಾತು ಕೊಟ್ಟಿದ್ದರೆ, ಬೇಕಾದರೆ ಅವಳ ಬಾಯಿಗಷ್ಟು ದುಡ್ಡು ಸುರಿದುಬಿಟ್ಟು ಭೂತತೃಪ್ತಿ ಮಾಡು. ಅದು ಬಿಟ್ಟು ಹೆಚ್ಚಿನ ಮಾತೇನೂ ಆಡಬೇಡ."

ಅವರ ಒಂದೊಂದು ಮಾತೂ ನನ್ನ ನೆತ್ತಿಯ ಮೇಲೆ ಕೆಂಡದ ಮಳೆಗರೆಯುತ್ತಿತ್ತು. ಕಾಲೇಜು ಸೂಳೆ—ಪೋಲಿ ಮುಂಡೆ—ದುಡ್ಡು ಸುರಿದು ಭೂತತೃಪ್ತಿ — ಇದೇ, ಇದೇ, ಕಾತ್ಯಾಯನಿಯ ಮೇಲಿನ ನನ್ನ ಪ್ರೇಮ ಈ ಮಾತನ್ನಾಡಿದವನು—ನನ್ನ ತಂದೆ.

ನನ್ನ ಕಾತ್ಯಾಯನಿ – ಕಾಲೇಜು ಸೂಳೆ !

ಕಾಲೇಜು ಸೂಳೆ – ಕಾತ್ಯಾಯನಿ ! ಜಗತ್ತಿನ ಅಪಮಾನ. ಅಪಹಾಸ್ಯ ತಿರಸ್ಕಾರವೂ ಆ ಎರಡು ಮಾತುಗಳಲ್ಲಿ ಹೆಪ್ಪುಗಟ್ಟಿದಂತಿತ್ತು. ಹಿಂದೆ ಮುಂದೆ ನಮ್ಮನ್ನು ಅಂದು ಆಡಿ ಅಪಹಾಸ್ಯ ಮಾಡಿದವರೆಲ್ಲರೂ, ನನ್ನ ತಂದೆಯ ರೂಪವಾಗಿ, ನನ್ನ ಮುಖಕ್ಕೇ ರಾಚಿ ಹೇಳಿದಂತಾಯಿತು.

' ನಿನ್ನ ಕಾತ್ಯಾಯನಿ – ಕಾಲೇಜು ಸೂಳೆ '

ತಲೆ ಸುತ್ತಿ ಬಂದು, ಕೆರಳಿದ ಕ್ರೋಧ ನನ್ನೆದೆಯಲ್ಲಿ ಜ್ವಾಲಾಮುಖಿಯಂತೆ ಆಸ್ಫೋಟವಾಯಿತು.

" ಬಾಯಿ ಮುಚ್ಚಿ – ಕಾತ್ಯಾಯನಿಯ ವಿಷಯದಲ್ಲಿ ಆ ಮಾತನಾಡಬೇಡಿ. "

" ಬಾಯಿ ಮುಚ್ಚಬೇಕೇ – ನಾನು ಬಾಯಿ ಮುಚ್ಚಬೇಕೇ—ಭಡವಾ. ಕಾತ್ಯಾಯನಿಯಂತೆ ಕಾತ್ಯಾಯನಿ. ಇನ್ನೊಂದು ಸಲ ನನ್ನ ಇದಿರಿನಲ್ಲಿ ಅವಳ ಹೆಸರು ಎತ್ತಿದರೆ ಹಲ್ಲು ಮುರಿದುಬಿಡುತ್ತೇನೆ. ಆ ಆಟಾ ಎಲ್ಲಾ ಕಟ್ಟಿಟ್ಟುಬಿಡು ರಾಜ. ಆ ಕಾತ್ಯಾಯನೀನೋ ಯಾವೋಳೋ ಅವಳನ್ನು ಮರೆತುಬಿಡು."

" ಮರೆಯುವುದೇ – ಅದು ಸಾಧ್ಯವೇ ಇಲ್ಲ."

" ಸಾಧ್ಯವಿಲ್ಲವೇ ? "

" ಇಲ್ಲ. ಇಲ್ಲ. ಇಲ್ಲ."

" ಹಾಗಾದರೆ ಇವತ್ತಿನಿಂದ ನೀನು ನನ್ನ ಮಗನಲ್ಲ, ನಾನು ನಿನ್ನ ತಂದೆಯಲ್ಲ. ನೀನುಂಟು – ನಿನ್ನ ಕಾತ್ಯಾಯನಿಯುಂಟು. ಹೋಗು ಅದೇನು ಪೋಲಿ ಮೆರೆಯುತ್ತೀಯೋ ಮೆರೆದುಕೋ. ಓದಿ ಉದ್ಧಾರವಾಗಲಿ ಅಂತ ಕಳಿಸಿದ್ದಕ್ಕೆ ಬೀದಿ ಬಸವಿಯರ ಬೆನ್ನು ಬಿದ್ದು ಕುಲಕ್ಕೇ ಮರ್ಯಾದೆ ತಂದೆ. ಊರೂರಿನಲ್ಲಿ ನಿನ್ನ ಹೆಸರು ಹೇಳಿಕೊಂಡು ನಗೋ ಹಾಗೆ ಮಾಡಿಕೊಂಡೆ. ನಿನ್ನನ್ನು ನಾನು ನಂಬಿದ್ದೆ. ನಿನ್ನ ಸ್ನೇಹಿತರು ಕಾಗದ ಬರೆದಾಗ ನಂಬಲಿಲ್ಲ. ನನ್ನ ಪ್ರೀತಿಗೆ, ನಿನ್ನನ್ನು ಹೊಟ್ಟೆ ಬಟ್ಟೆ ಕಟ್ಟಿ ಸಾಕಿದ್ದಕ್ಕೆ ಇದೇ ನೀನು ಮಾಡಿದ ಪ್ರತ್ಯುಪಕಾರ ಪಲ್ಲಕ್ಕಿಯಲ್ಲಿ ಕೂಡಿಸಿದ ನಾಯಿ ಏನೋ ಕಂಡು ಇಳೀಬಿದ್ದಿತು ಅಂದಹಾಗಾಯಿತು ನಿನ್ನ ಬಾಳು ಬಾಯಿ ಮುಚ್ಚಬೇಕಂತೆ.... ಬಾಯಿ .. ಅವಳು ಎದುರಿಗೆ ಸಿಕ್ಕಿದ್ದರೆ ಪೊರಕೇಲಿ ಪೂಜೆ ಮಾಡ್ತಾ ಇದ್ದೆ. ಮಾತು ಎತ್ತಬೇಡವಂತೆ ಹಾದರಗಿತ್ತಿ ಮಾತು . ."

—ಸಿಟ್ಟಿನಲ್ಲಿ ಹುಚ್ಚಾಗಿ ಹಲ್ಲು ಕಡಿಯುತ್ತಾ ಹೇಳಿದರು.

" ಅಣ್ಣಾ, ನೀವು ನನ್ನನ್ನು ಬೇಕಾದಷ್ಟು ಬೈಯಿರಿ. ನಾನು ನಿಮ್ಮ ಮಗ. ಅನ್ನಿಸಿಕೊಳ್ಳುತ್ತೇನೆ. ಆದರೆ...."

" ಮಗ.... .ಮಗ.. ..ನೀನು ನನ್ನ ಮಗನೇ ? ನೀನು ನಿಜವಾಗಿಯೂ ನನ್ನ ಮಗನಾಗಿದ್ದರೆ ನಾನು ಹೇಳಿದ ಹಾಗೆ ಕೇಳು."

" ಇದೊಂದು ವಿಷಯ ಬಿಟ್ಟು ಬೇರೆ ನೀವು ಏನು ಹೇಳಿದರೂ ನಾನ್ ಕೇಳಲು ಸಿದ್ಧವಾಗಿದ್ದೇನೆ. ಅವಳ ವಿಷಯದಲ್ಲಿ ಮಾತ್ರ ಕೆಟ್ಟ ಶಬ್ದ ಆಡಕ್"

" ಆಡಬೇಡಿ ಅಂದರೆ ಅವಳ ಸಂಗತಿ ಬಿಟ್ಟುಬಿಡು."

"ಅದೊಂದು ಸಾಧ್ಯವಿಲ್ಲ."

"ಹಾಗಾದರೆ ನೀನು ನನ್ನ ಮಗನಲ್ಲ. ಹೋಗು... ಹೋಗು . ಹಾಳಾಗಿ ಹೋಗು. ಇನ್ನು ನಿನ್ನ ಮೋರೆ ತೋರಿಸದೆ ಹಾಳಾಗಿ ಹೋಗು... ನನ್ನ ಮಗ ಸತ್ತ ಅಂತ ಘಟಶ್ರಾದ್ಧ ಮಾಡಿಬಿಡುತ್ತೇನೆ. ನೀನಿದ್ದರೆಷ್ಟು, ಸತ್ತರೆಷ್ಟು ? ನನ್ನ ಪಾಲಿಗೆ ಯಾರೂ ಇಲ್ಲ"

—ಎಂದವರೇ ಎದ್ದುಹೋಗಿ ತಾವು ಮಲಗುವ ಮನೆಯನ್ನು ಸೇರಿ, ಅದರ ಬಾಗಿಲು ಹಾಕಿಕೊಂಡರು.

ಅವರು ಹೋಗುವವರೆಗೂ ನಿಂತಿದ್ದವನು, ಅವರು ಕಣ್ಣುಮರೆಯಾಗುತ್ತಿದ್ದ ಹಾಗೇ ನೆಲಕ್ಕೆ ಕುಸಿದುಬಿಟ್ಟೆ. ಬಗೆಬಗೆಯ ಭಾವಗಳ ಭಯಂಕರ ಸುಳಿಗೆ ಸಿಕ್ಕ ಬುಗುರಿಯಂತೆ ತಿರುಗುತ್ತಿತ್ತು—ನನ್ನ ಮಿದುಳು. ಕಾತ್ಯಾಯನಿಯ ವಿಷಯದಲ್ಲಿ ತಂದೆಯಾಡಿದ ಒಂದೊಂದು ಕೆಟ್ಟ ಮಾತೂ, ನನ್ನ ಮಿದುಳಿನಲ್ಲಿ ನೂರಾರು ಕಡೆಯಿಂದ ಮಾರ್ದನಿಸುತ್ತಿತ್ತು. ಸಾವಿರ ಪಿಶಾಚ ಬಾಯಿಗಳು ನನ್ನನ್ನು ಅಣಕಿಸಿ ನಗುತ್ತಿದ್ದವು....

ಕಾತ್ಯಾಯನಿ – ಕಾಲೇಜು ಸೂಳೆ – ಕಾಲೇಜು ಸೂಳೆ – ಕಾತ್ಯಾಯನಿ.

ಕ್ರೋಧ – ದುಃಖ – ದ್ವೇಷ – ಅಸಹಾಯಕತೆಗಳು ಹತ್ತಾರು ಕಡೆಯಿಂದ ನನ್ನನ್ನು ಕೊಚ್ಚುತ್ತಿದ್ದವು.

ಕಾತ್ಯಾಯನಿ – ಕಾಲೇಜು ಸೂಳೆ , ಆ ಮಾತಾಡಿದವರು ನನ್ನ ತಂದೆ.

ಕಾತ್ಯಾಯನಿ – ತಂದೆ , ತಂದೆ – ಕಾತ್ಯಾಯನಿ

ಒಲವು – ಮನೆ – ಮನೆ – ಒಲವು.

ತಂದೆಯೂ ನನ್ನನ್ನು ಪ್ರೀತಿಸುತ್ತಾರೆ, ನಾನೂ ತಂದೆಯನ್ನು ಪ್ರೀತಿಸುತ್ತೇನೆ.

ಕಾತ್ಯಾಯನಿ ನನ್ನನ್ನು ಪ್ರೀತಿಸುತ್ತಾಳೆ , ನಾನೂ ಕಾತ್ಯಾಯನಿಯನ್ನು ಪ್ರೀತಿಸುತ್ತೇನೆ.

ಒಲವು . ಒಲವು ಒಲವು—ಒಲವಿನ ವಿರುದ್ಧ ಒಲವು.

'ಕಾತ್ಯಾಯನಿಯ ಚಿಂತೆ ಬಿಡು : ನಾನು ಹೇಳಿದ ಹಾಗೆ ಕೇಳು'

'ಊಹೂ. ಸಾಧ್ಯವಿಲ್ಲ'

ಪಂಚೇರು ಬಂಗಾರ – ಹತ್ತು ಸಾವಿರ ವರದಕ್ಷಿಣೆ – ಬಂಗಾರದಂಥ ಹುಡುಗಿ – ಕುಬೇರನಂಥ ಮಾವ – ನನ್ನ ತಂದೆ – ಸಾಲ – ಕಷ್ಟನಿಷ್ಠುರ, ಒಟ್ಟಿ ಕಟ್ಟಿದ ಒಲವು-ಎಲ್ಲವೂ ಕಾತ್ಯಾಯನಿಯ ವಿರುದ್ಧ : ನನ್ನ ಯನಿಯ ವಿರುದ್ಧ.

' ಕಾತ್ಯಾಯನಿ ನನ್ನ ಬಾಳು ನಿನ್ನದು. ಜಗತ್ತೇ ನನ್ನನ್ನು ಎದುರಿಸಿ ನಿಂತರೂ ನಾನು ನಿನ್ನವನು.'

' ಇಂದಿನಿಂದ ನೀನು ನನ್ನ ಬಂದಿ ' – 'ಜೀ ಹುಜೂರ್'

ಇಲ್ಲ . .ಇಲ್ಲ... ಕಾತ್ಯಾಯನಿ ನಿನ್ನನ್ನು ಬಿಡಲಾರೆ.

' ಅವಳ ಮಾತು ಬಿಡದಿದ್ದರೆ ಹಾಳಾಗಿಹೋಗು. ಹೋಗು, ಹಾಳಾಗಿ ಹೋಗು. ನೀನು ನನ್ನ ಮಗನಲ್ಲ. ಘಟಶ್ರಾದ್ಧ ಮಾಡಿಬಿಡುತ್ತೇನೆ.'

ಕಾತ್ಯಾಯನಿ – ತಂದೆ ; ತಂದೆ – ಕಾತ್ಯಾಯನಿ.

ಒಲವಿನ ವಿರುದ್ಧ ಒಲವು , ಪ್ರೇಮದ ವಿರುದ್ಧ ಪ್ರೇಮ ; ಬಯಕೆಯ ವಿರುದ್ಧ ಬಯಕೆ.

ನನಗೆ ಬಾಳು ಕೊಟ್ಟ ಒಲವು, ಬಾಳಿಗೆ ಈ ಬೆಳಕು ಕೊಟ್ಟ ಒಲವಿನ ವಿರುದ್ಧ.

' ನನ್ನ ಬಾಳು ತಪ್ಪು ದಾರಿಯಲ್ಲಿ ಹೋಗುತ್ತಿದೆಯೇ ಕಾತ್ಯಾಯನಿ ? '

' ಹೂ.'

'ಹಾಗಾದರೆ ಅದನ್ನು ನಿನಗೇ ಒಪ್ಪಿಸಿದೀನಿ ಹೇಗೆ ಬೇಕೋ ಹಾಗೆತಿದ್ದು.'

' ನನಗೀಗ ಗೊತ್ತಿರುವುದೊಂದೇ ಇಸಂ – ಕಾತ್ಯಾಯನಿಸಂ.'

ಕಾತ್ಯಾಯನೀಯ, ನನಗೆ ಕಾತ್ಯಾಯನೀಯ.. .

ಮಿದುಳಿನ ಯಾವ ಯಾವುದೋ ಮೂಲೆಯಲ್ಲಿ ಹುದುಗಿದ್ದ ಮಾತುಗಳು ನೆರಳುಗಳು, ನಗುಗಳು, ಕಣ್ಣ ನೋಟಗಳು, ಚುಂಬನಗಳು . ...

ಬಿರು ಬೇಸಗೆಯ ಬಿಸಿಲು ಧಗಧಗಿಸುತ್ತಿರುವ ಮರುಳುಗಾಡಿನಲ್ಲಿ – ಬೆಳದಿಂಗಳ ನೆನಪು – ಕಾತ್ಯಾಯನಿ.

ಹೊರಗೆ ಹಾಕಿದ್ದ ಬಟ್ಟೆಗಳನ್ನೆಲ್ಲಾ ತೆಗೆದು ಟ್ರಂಕಿಗೆ ತುಂಬಿದೆ. ಕೋಟಿನ ಜೇಬಿನಲ್ಲಿ ನೋಡಿದೆ – ಇಪ್ಪತ್ತು ರೂಪಾಯಿ ಇತ್ತು. ಮೈಸೂರಿಗೆ ತಲುಪಲು ಸಾಕು.

ಹಗಲಾಗುವುದನ್ನು ಕಾದು ನಿದ್ರೆಮಾಡಲೆತ್ನಿಸಿದೆ – ನಿದ್ರೆ ನನ್ನಿಂದ ಬಹುದೂರವಾಗಿತ್ತು.

ಬೆಳಗ್ಗೆ ಎದ್ದವನೇ, ನಾನು ಏಳುವ ಮೊದಲೇ ಎದ್ದು ಹಜಾರದಲ್ಲಿ ಕಂಭಕ್ಕೊರಗಿ ಕುಳಿತಿದ್ದ ತಂದೆಯವರಿಗೆ ನಮಸ್ಕಾರ ಮಾಡಿದೆ.

" ಏನು ? "

" ನನಗೆ ಹೊರಡಲು ಅಪ್ಪಣೆ ಕೊಡಿ."

" ಎಲ್ಲಿಗೆ ? "

" ಮೈಸೂರಿಗೆ ಹೋಗುತ್ತೇನೆ "

" ನನ್ನ ಮಾತು ಕೇಳುವುದಿಲ್ಲವೇ ರಾಜಾ ... ಕೇಳುವುದಿಲ್ಲವೇ .... ಆ ಮುಂಡೆ ನಿನಗೇನೋ ಮಾಟ ಮಾಡಿಸಿದ್ದಾಳೆ .. ಅವಳನ್ನು ಬಿಡು. ನನ್ನ ಮಾತು ಕೇಳು ರಾಜಾ."

—ಕಂಬನಿಗರೆಯುತ್ತಾ ಕೇಳಿದರು ನನ್ನ ತಂದೆ.

" ಅದೊಂದು ಮಾತು ಬಿಟ್ಟು ಬೇಕಾದದ್ದು ಹೇಳಿ ಕೇಳುತ್ತೇನೆ."

" ಅವಳಿಗಾಗಿ ನನ್ನನ್ನು ಬಿಡುತ್ತೀಯಾ ರಾಜ ನನಗೆ ಯಾರು ದಿಕ್ಕು?"

" ನಾನು ನಿಮ್ಮ ಮಗ. ನೀವು ನನ್ನನ್ನು ಬಿಟ್ಟರೂ ನಾನು ನಿಮ್ಮನ್ನು ಬಿಡುವುದಿಲ್ಲ."

" ಹೇಳಿದ ಮಾತು ಕೇಳದ ನೀನು ನನಗೇನು ಮಾಡುತ್ತೀಯ ? "

" ಇದೊಂದು ವಿನಾ ಬೇಕಾದುದನ್ನು."

" ನಿನ್ನ ಪಾಲಿಗೆ ಅವಳು ಅಷ್ಟು ಹೆಚ್ಚಾಯಿತೇ ? "

" ನಿಜ ಅಣ್ಣ ನೀವು ನನಗೆ ಜೀವ ಕೊಟ್ಟವರು ನಿಜ. ಆದರೆ ಅವಳು ನನ್ನ ಜೀವದ ಜೀವ. ಅವಳನ್ನು ಬಿಟ್ಟು ಬದುಕುವುದು ನನ್ನಿಂದ ಸಾಧ್ಯವಿಲ್ಲ "

" ಸಾಧ್ಯವಿಲ್ಲವೇ ? "

" ಇಲ್ಲ."

" ಹಾಗಾದರೆ ಹಾಳಾಗಿ ಹೊಗು. ಆದರೆ ಮತ್ತೆ ನಿನ್ನ ಮುಖ ನನಗೇ ತೋರಿಸಬೇಡ."

" ಇದೇ ನಿಮ್ಮ ಕೊನೆಯ ಮಾತೇ ? "

" ನಿಜ. ಇದೇ ನನ್ನ ಕೊನೆಯ ಮಾತು "

—ಎಂದು ತಂದೆ ಹೊರಗೆ ಹೋದರು. ಟ್ರಂಕು, ಹಾಸಿಗೆಯನ್ನು ಹಿಡಿದು ನಾನೂ ಮನೆಯಿಂದ ಹೊರಬಿದ್ದೆ. ಬೀದಿಯ ಮೂಲೆಯಲ್ಲಿ ತಿರುಗುವಾಗ, ಮನೆಯತ್ತ ನೋಡಿದೆ – ತಂದೆಯ ಮುಖ ಕಾಣುವುದೇನೋ ಎಂದು.

ಆದರೆ ಅವರ ಮುಖ ಕಾಣಲಿಲ್ಲ.

೬

ಚಿಂತಾಮಣಿಯನ್ನು ಬಿಟ್ಟೆ. ಬಿಡುವ ಕೆಲಸವೇನೋ ಆಯಿತು– ಆದರೆ ಮುಂದೆ ?

ಮುಂದೆ–ಮುಂದೆ–ಮುಂದೇನು ?

ಭವಿಷ್ಯದ ಪ್ರಶ್ನೆಗಿಂತ ಘೋರವಾದ ಸಿರಾಳೆ ಮಿದುಳಿನಲ್ಲಿ ಬಿರುಗಾಳಿಯಂತೆ ಮೊರೆಯುತ್ತಿತ್ತು. ಕಾತ್ಯಾಯನಿಯ ಬಗ್ಗೆ ತಂದೆಯಾಡಿದ ಕಟು

ನುಡಿಗಳು ಗಳಿಗೆಗೊಮ್ಮೆ ನೆನಪಿನಲ್ಲಿ ಮಾರ್ದನಿಸಿ, ಇಡೀ ಸಮಾಜದ ವಿಕಟಾಟ್ಟಹಾಸದಂತೆ ಕೇಳಿ ಬಂದು, ಎದೆಯನ್ನು ಹಿಂಡುತ್ತಿತ್ತು.

ಕಾತ್ಯಾಯನಿ ಕೇಳಿದ್ದಳು—

' ನನ್ನ ನಿನ್ನ ವಿವಾಹಕ್ಕೆ ನಿನ್ನ ತಂದೆ ಒಪ್ಪುವುದು ಬೇಡವೇ ? ಅವರು ಒಪ್ಪುವರೆಂದು ಏನು ಗೊತ್ತು ? '

' ನನಗೆ ಗೊತ್ತು ಅವರು ಒಪ್ಪುತ್ತಾರೆ.'

ಕಾತ್ಯಾಯನಿಯ ಪ್ರಶ್ನೆಗೆ ಉತ್ತರವಾಗಿ ನಾನೇ ಆ ಮಾತನ್ನು ಹೇಳಿದ್ದೆ. ನಾನೇ ?

ನಾನೇ ನಾನೇ ?

' ಊಹೂ. ವಾಸ್ತವಿಕತೆಯ ಬಿರುಗಾಳಿ ಬೀಸಿ, ನಿರಾಶೆಯ ಪಾಳುಗಳು ತುಂಬಿದ ಹೃದಯ ಹೇಳುತ್ತಿದೆ – ' ಅಂದು ಆ ಮಾತಾಡಿದವನು ನೀನಲ್ಲ."

ನಿಜ. ನಾನಲ್ಲ. ಇಂದು ಕಾತ್ಯಾಯನಿ ಮತ್ತೆ ಅದೇ ಪ್ರಶ್ನೆಯನ್ನು ಕೇಳಿದರೆ ಏನು ಹೇಳುವುದು—

ಅಂದಿನ ಆ ಹುಚ್ಚು ಆಶಾವಾದದ ನೌಕೆ ಈಗೆಲ್ಲಿ ?

ಎಲ್ಲಿ, ಎಲ್ಲಿ, ಎಲ್ಲಿ—

ಅಂದು - ಭವಿಷ್ಯ ಬಂಗಾರದ ಹೂಗಳನ್ನರಳಿಸಿದ ಬೆಳಕಿನ ಬಳ್ಳಿಯಾಗಿತ್ತು—

ನನ್ನ ತಂದೆ – ನಿಜ – ನನ್ನ ತಂದೆ, ನನಗಾಗಿ ಎಂದೂ ಯಾವುದಕ್ಕೂ ಇಲ್ಲ ಎನ್ನದವನು, ಎಂಥ ತ್ಯಾಗ ಮಾಡಲೂ ಸಿದ್ಧನಾದವನು, ನನ್ನ ಭವಿಷ್ಯದಲ್ಲೇ, ಶ್ರೇಯಸ್ಸಿನಲ್ಲೇ ತನ್ನ ಜೀವನದ ಸಕಲ ಬಯಕೆಗಳ ಪೂರ್ಣತೆಯನ್ನು ಕಂಡವನು—

ನನ್ನ ಜೀವನದ ಅತಿ ಮುಖ್ಯವಾದ ಈ ಪ್ರಶ್ನೆಯಲ್ಲಿ ನನ್ನ ಆಯ್ಕೆಯನ್ನು ತಳ್ಳಿ ಹಾಕಲಾರ, ಎಂದೇ ನಂಬಿದ್ದೆ.

ತಳ್ಳಿ ಹಾಕುವುದು – ಎಲ್ಲಿಯ ಮಾತು – ಉತ್ಸಾಹದಿಂದ ಸ್ವಾಗತಿಸುತ್ತಾನೆ ನನ್ನಷ್ಟೇ ಹರ್ಷ ಪಡುತ್ತಾನೆ, ಎಂದೇ ನಂಬಿದ್ದೆ.

ನಂಬಿದ್ದೆ – ಈಗ ?

ಈಗ ನನ್ನ ಆಯ್ಕೆಯನ್ನು ತೆಗೆದು ಹಾಕಿರಲಿಲ್ಲವಷ್ಟೇ ಅಲ್ಲ, ಕಾತ್ಯಾಯನಿ ಬೇಡವೆಂದಷ್ಟೇ ಹೇಳಿ ಮುಗಿಸಿರಲಿಲ್ಲ – ಅವಳು ನಿನಗೆ ಬೇಕಾದರೆ, ನನಗೆ ನೀನು ಬೇಡ ಎಂದು ಹೇಳಿದ್ದ.

ಹಾಗಾದರೆ ನನ್ನ ತಂದೆ ನನ್ನನ್ನು ಪ್ರೀತಿಸುವುದಿಲ್ಲವೇ ?

ಪ್ರೀತಿಸುತ್ತಾನೆ.... ಪ್ರೀತಿಸುತ್ತಾನೆ.. ಖಂಡಿತ ಪ್ರೀತಿಸುತ್ತಾನೆ–ಅದರಲ್ಲಿ ಏನೇನೂ ಸಂಶಯವಿಲ್ಲ, ಹೊರಡುವ ಗಳಿಗೆಯಲ್ಲಿ ಆವನ ಮುಖದಲ್ಲಿ ಮೂಡಿದ ದೈನ್ಯತೆ, ಕಣ್ಣಲ್ಲಿ ನನ್ನನ್ನು ನಿಲ್ಲಿಸಲೆತ್ನಿಸಿ ಕೂಗಿದ ಆರ್ತತೆ, ಮಾತಿನುಯ್ಯಾಲೆಯಲ್ಲಿ ತೂಗಿದ ಉದ್ವೇಗ ಆ ಆಕ್ರೋಶ – ನಿಜ, ಎಲ್ಲವೂ ಆತನಿಗೆ ನನ್ನಲ್ಲಿರುವ ಪ್ರೀತಿಗೆ ನಿತ್ಯ ಸಾಕ್ಷಿಗಳು.

ಆದರೆ ಈ ದ್ವೇಷ ?

ನನ್ನ ಒಲವನ್ನು ತುಳಿಯಲೆತ್ತಿನಿಂತ ಈ ದೈತ್ಯಪಾದ ?—ಇದು ನನ್ನ ತಂದೆಯದೇ, ಇದು ಪ್ರೀತಿಯದೇ ?

ಇದೇನಿದು ? ಇದೂ ಒಲವೇ ?

' ಒಲವೋ ಹಗೆಯೋ ಯಾವುದಿದು ? '

ಉಳಿದೆಲ್ಲ ಸಮಸ್ಯೆಗಳಿಗಂತ ಉತ್ತರವರಿಯದ ಈ ಪ್ರಶ್ನೆ ನನ್ನ ಮಿದುಳನ್ನು ಬೆಂಕಿಯ ಕಡೆಗೋಲಿನಿಂದ ಕಡೆಯುತ್ತಿತ್ತು.

ಪ್ರೇಮ – ಇದು ಪ್ರೇಮವೇ ? ತಾನು ಪ್ರೀತಿಸುವುದು ಅದರ ದಾರಿಯಲ್ಲೇ ನಡೆದು ಸುಖವಾಗಿರಲಿ ಎಂದು ಒಯಸುವುದನ್ನು ಬಿಟ್ಟು ನಾನು ತೋರಿದ ದಾರಿಯಲ್ಲೇ ನೀನು ಕಣ್ಣು ಕಪಡ ಧರಿಸಿದ ಕುದುರೆಯಂತೆ ನಡೆಯುವುದೇ ಸರಿ, ಎನ್ನುವ ಸರ್ವಾಧಿಕಾರಿ ಮನೋಭಾವ ಪ್ರೀತಿಯೇ ?

ಪ್ರೀತಿ— ಸರ್ವಾಧಿಕಾರಿಯೇ ? ಎಲ್ಲ ಪ್ರೀತಿಯೂ ಇಷ್ಟೆ ?

ನಾನು ಕಾತ್ಯಾಯನಿಯನ್ನು ಪ್ರೀತಿಸುವುದು, ಕಾತ್ಯಾಯನಿ ನನ್ನನ್ನು ಪ್ರೀತಿಸುವುದು— ನಾವಿಬ್ಬರೂ ಒಬ್ಬರನ್ನೊಬ್ಬರು ಪ್ರೀತಿಸುವುದು—

ಅದರ ಕೊನೆಯ ಮಜಲೂ ಇದೇನೇ ?— ಇದೊಂದು ಪ್ರಶ್ನೆ ?

ಪ್ರಶ್ನೆ—ಒಂದು ಪ್ರಶ್ನೆಯೇ—

ಪ್ರಶ್ನೆಯ ಸಾಲು ಸಾಲು, ತರಂಗ ತರಂಗವಾಗಿ, ಸೇನೆಯ ಸಾಲು ಸಾಲಿನಂತೆ ನುಗ್ಗಿ ಬಂದು ನನ್ನೆದೆಗೆ ಧಾಳಿ ಮಾಡಿ, ನನ್ನ ಹೃದಯವನ್ನು ಇರಿಯುತ್ತಿದ್ದವು.

ಎಲ್ಲಕ್ಕಿಂತ ಹೆಚ್ಚಾಗಿ— ' ಮುಂದೇನು ? '

ನಿನ್ನ ಓದು ?— ಮುಂದೇನು ?

ನಿನ್ನ ಬಾಳು— ಮುಂದೇನು ?

ನಿನ್ನ ಕಾತ್ಯಾಯನಿಯ ಬಾಳು— ಮುಂದೇನು ?

ಕಣ್ಣು ಸುಳಿದತ್ತ ಕತ್ತಲೆ, ಕೈಚಾಚಿದತ್ತ ಕತ್ತಲೆ, ಕಾಲಿಟ್ಟಲ್ಲಿ ಕತ್ತಲೆ – ನನ್ನ ಬಾಳನ್ನು ಕತ್ತಲು ಮುತ್ತಿಗೆ ಹಾಕಿತ್ತು. ಆ ಕತ್ತಲಿನಲ್ಲಿ ಕಣ್ಣುಗೆಡನಾಗಿ,

ಬುದ್ಧಿಗುರುಡನಾಗಿ, ಚಿಂತಾಮಣಿಯಲ್ಲಿ ಬಸ್ಸು ಹತ್ತಿ ಬೆಂಗಳೂರಿನಲ್ಲಿ ಬಂದು ಇಳಿದೆ.

ಬೆಂಗಳೂರಿನಲ್ಲಿ ನನಗೇನೂ ಕೆಲಸವಿರಲಿಲ್ಲ. ನನ್ನ ಗುರಿ ಮೈಸೂರು. ಆದರೆ ಮೈಸೂರಿನಲ್ಲಿ ಮುಂದೇನು ?

ಕಾಲೇಜು—ಕಾತ್ಯಾಯನಿ.

ಒಂದು ಪ್ರಶ್ನೆ—ಒಂದು ಭರವಸೆ, ಒಂದು ಸಂಶಯ—ಒಂದು ನಂಬಿಕೆ; ಒಂದು ಕತ್ತಲು—ಒಂದು ಬೆಳಕು.

ಆದರೆ ಏಕೋ, ಏಕೋ, ಏಕೋ, ಆ ಭರವಸೆ, ನಂಬಿಕೆ, ಬೆಳಕೂ ಎದೆಯನ್ನು ಬೆದರಿಸಿತು. ಮೈಸೂರಿನ ರೈಲು ಹತ್ತಲಾರದೆ, ಆ ದಿನ ಬೆಂಗ ಳೂರಿನಲ್ಲೇ ನಿಂತೆ.

ಬೆಂಗಳೂರಿನಲ್ಲಾದರೂ ಮಾಡುವುದೇನು, ಏನು ಕೆಲಸ ? ಯಾರಿಂದ ಏನು ಕೆಲಸ—

ಈ ಭಾವನೆಯಲ್ಲಿ ಬೀದಿ ಬೀದಿ ಅಲೆಯುತ್ತಿರುವಾಗ—ಶ್ರೀಧರನನ್ನು ನೋಡಿದೆ. ನಾನು ನೋಡಿದೆನೇ — ಇಲ್ಲ, ಅವನೇ ನನ್ನನ್ನು ನೋಡಿ ಗುರುತಿಸಿ ಕರೆದ,

" ರಾಜಶೇಖರ್, ಹಲೋ, ರಾಜಶೇಖರ್ "

ನಿರ್ಮಾನುಷಾರಣ್ಯದಲ್ಲಿ ಮಾನವತೆಯ ಕೂಗಿನಂತೆ ಕೇಳಿ ಬಂತು ಶ್ರೀಧರನ ಕರೆ. ಕರೆ ಬಂದ ಕಡೆ ಕಣ್ಣೆತ್ತಿ ನೋಡಿದೆ.

ಶ್ರೀಧರನ ಕರೆ, ಶ್ರೀಧರನ ಧ್ವನಿ—ಆದರೆ ಕರೆದಾತ ಶ್ರೀಧರನೇ ?

ನನ್ನನ್ನು ಕೂಗಿದ ವ್ಯಕ್ತಿಯತ್ತ ಕಣ್ತೆರೆದು ನೋಡಿದಾಗ, ಆತ ಶ್ರೀಧರ ನಂತೆ ಕಾಣಲಿಲ್ಲ ರೂಪು ಅಷ್ಟು ವ್ಯತ್ಯಾಸವಾಗಿತ್ತು. ಊಹೂ – ಹಿಂದಿನ ಶ್ರೀಧರನಲ್ಲ ಅವನು ? ಉಡುಪೊಂದೇ ಅಲ್ಲ — ಮುಖವೂ ಬದಲಾಗಿ ಹೋದಂತಿತ್ತು.

ಹಿಂದಿನ ಜುಬ್ಬಾ, ಪಯಿಜಾಮು, ಉಂಗುಷ್ಟ ಹರಿದ ಚಪ್ಪಲಿ, ಎಣ್ಣೆ ಕಾಣದ ಕ್ರಾಪುಕೂದಲಿನ ಶ್ರೀಧರನಲ್ಲ ಇವನು. ಗಿರಿಮುಡಿಯುದ ಸರ್ಜ್ ಕೋಟು, ಸಿಲ್ಕ್ ಷರಟು, ಎಣ್ಣೆಯ ಪರಿಮಳ ಬೀರುವ ತಿದ್ದಿದ ಕ್ರಾಪು, ಆರಂಗುಲ ಉದ್ದದ ದಂತದ ಹೋಲ್ಡರಿನಲ್ಲಿ ಉರಿಯುತ್ತಿರುವ ಸಿಗರೇಟಿನ ಈತ—ಶ್ರೀಧರನೇ ? ನಂಬುವುದು ಅಸಾಧ್ಯವೆನಿಸಿತು ನನಗೆ. ಆತ ನಂಬ ಲಾಗದ ಕಣ್ಣುಗಳಿಂದ ನೋಡುತ್ತಿದ್ದ ನನ್ನತ್ತ ನೋಡಿ ನಕ್ಕ. ನಕ್ಕಾಗ, ಆತನ ಮುಖ ನಗೆಯಿಂದ ಅರಳಿದರೂ ಕಣ್ಣೇನೋ ವ್ಯಥೆಯಿಂದ ಕಿರಿದಾದುವು.

ಆ ಕಣ್ಣುಗಳು ಹೇಳಿದವು 'ಇವನೇ ನಿನ್ನ ಶ್ರೀಧರ್.'

" ನನ್ನ ಗುರುತು ಸಿಗಲಿಲ್ಲವೇ ರಾಜಶೇಖರ್ ? "

—ಲಘು ಹಾಸ್ಯದ ಧ್ವನಿಯಲ್ಲಿ ಕೇಳಿದ ಅವನು. ಅವನ ಧ್ವನಿಯಲ್ಲಿ ಲಘು ಹಾಸ್ಯವಿತ್ತು. ಆದರೆ ನಾನು ಅವನನ್ನು ಗುರುತಿಸದಿದ್ದುದರಿಂದ ಅವನ ಹೃದಯಕ್ಕೇನೋ ಅಪಾರ ವ್ಯಥೆಯಾದಂತಿತ್ತು. ಆ ನೋವನ್ನು ಎಷ್ಟು ಹದುಗಿಸಲೆತ್ನಿಸಿದರೂ ಅದು ಹುದುಗದೆ, ನೀರಿನಲ್ಲಿ ಮುಳುಗಿಸಲೆತ್ನಿಸಿದ ರಬ್ಬರ್ ಚಂಡಿನಂತೆ ಮತ್ತೆ ಮತ್ತೆ ಮೇಲೆ ಬರುತ್ತಿತ್ತು. ಆ ನೋವು ದೂರದ ಬೆಂಕಿಯಂತೆ, ನನ್ನೆದೆಗೂ ತನ್ನ ಝಳ ತಾಕಿಸಿತು. ನಾನು ಅದನ್ನು ತೋರಗೊಡದೆ—

" ಗುರುತು ಸಿಗದೇನು, ಸಿಕ್ಕಿತು "—ಎಂದೆ

" ಸುಳ್ಳೇಕೆ ಹೇಳುತ್ತೀ ರಾಜಶೇಖರ್ – ಈ ಅನಿರೀಕ್ಷಿತ ಉಡುಪಿನಲ್ಲಿ ನನ್ನ ಗುರುತು ನಿನಗೆ ಸಿಗಲಿಲ್ಲ, ಅಲ್ಲವೇ ? "

" ಸಿಕ್ಕಿತು."

" ಮತ್ತೆ ? "

" ಏನು ಮತ್ತೆ "

" ಗುರುತ ಸಿಕ್ಕಿದರೆ, ಏನೋ ವಿಚಿತ್ರ ಪ್ರಾಣಿಯಂತೆ ನೋಡಿದುದೇಕೆ ?"

" ನಿನ್ನ ಉಡುಪಿರಲಿ – ನಿನ್ನ ಭೇಟಿಯೇ ಅನಿರೀಕ್ಷಿತವಾದದು. ಆರೀತಿ ನನಗೆ ಕಾಗದ ಬರೆದ ಮೇಲೆ, ಮತ್ತೆ ನೀನು ನನಗೆ ಕಾಣಸಿಗಬಹುದು ಎಂದು ನಿರೀಕ್ಷಿಸಿರಲಿಲ್ಲ, ಎಂತಲೇ ಒಂದು ಗಳಿಗೆ ಕಣ್ಣು ನಂಬುವುದೂ ಕಷ್ಟವಾಯಿತು."

" ನಿಜ. ಕಣ್ಣನ್ನು ನಂಬುವುದು ಎಂದೆಂದಿಗೂ ಕಷ್ಟವೇ. ಕಣ್ಣನ್ನು ನಂಬಿ ಬದುಕಿದವರೂ ಇಲ್ಲ."

ಒಗಟಿನಂತೆ ಮಾತನಾಡಿದ ಶ್ರೀಧರ.

" ಕಣ್ಣನ್ನು ನಂಬದಿದ್ದರೆ ಹೋಗಲಿ, ಅದರ ಅರ್ಥವೇನು ? "

" ಯಾವುದರ ಅರ್ಥ ? "

" ನೀನು ನನಗೆ ಬರೆದ ಕಾಗದದ್ದು ? "

" ನೋಡು – ಅಷ್ಟು ವರ್ಷಗಳ ಬಳಿಕ ಮತ್ತೆ ನಾವಿಬ್ಬರೂ ಒಬ್ಬರನ್ನೊಬ್ಬರು ನೋಡಿದುದು ಒಳ್ಳೆಯದಾಯಿತೋ, ಕೆಟ್ಟದೆ ಆಯಿತೋ ನಾನಿನ್ನೂ ನಿರ್ಧರಿಸಿಲ್ಲ. ಹೀಗಿರುವಾಗ – ದಯವಿಟ್ಟು – ಮತ್ತೆ ಅದಾವುದನ್ನೂ ನೆನಪಿಸಬೇಡ. ಒಬ್ಬರನ್ನೊಬ್ಬರು ಕಂಡೆವು, ಅದೇ ಸಂತೋಷ ಸಾಕು. ಬೀದಿಯಲ್ಲೇ ನಮ್ಮ ಆನಂದ ಪ್ರದರ್ಶನ ಮುಕ್ತಾಯವಾಗುವುದು ಬೇಡ. ಎಲ್ಲಿ

ಯಾದರೂ ಹೋಗಿ, ಹಾಯಾಗಿ ಕುಳಿತು ಮಾತನಾಡೋಣ."

" ನಡಿ ಹೋಗೋಣ – ಎಲ್ಲಿಗೆ ? "

" ಎಲ್ಲಿಗೆ ? – ಹೋಗುವುದು ಎಂದು ನಿಶ್ಚಯವಾದಮೇಲೆ ಎಲ್ಲಿಗಾದ ರೇನು ? ಎಲ್ಲಿಗೆ ಹೋಗಿ ನಿಂತರೆ ಅದೇ ಸರಿ. ಬಾರ್ ಆದರೇನು, ಬ್ರಾಧಿಲ್ ಆದರೇನು ? "

ಬಾರ್ – ಬ್ರಾಧಿಲ್ – ಆರಂಗುಲ ಉದ್ದದ ದಂತದ ಸಿಗರೇಟ್ ಹೋಲ್ಡರ್.

ಶ್ರೀಧರನ ಮಾತೇ ಅರ್ಥವಾಗದವನಂತೆ ಮಿಕಿಮಿಕಿ ನೋಡಿದೆ. ಅವನೂ ನನ್ನ ಮುಖವನ್ನು ನೋಡಿ, ಪೊಳ್ಳು ನಗು ನಕ್ಕು—

" ನೀನಿನ್ನೂ ಹಳೆಯ ಕಾಲದ ಮನುಷ್ಯ. ಆಗಿನ ರಾಜಶೇಖರನ ದೊಡ್ಡ ಸ್ವರೂಪ ಅಷ್ಟೇ. ನನಗರ್ಥವಾಯಿತು. ನಡಿ. ಕಬ್ಬನ್ ಪಾರ್ಕ್‌ಗೆ ಹೋಗಿ ಅಷ್ಟು ಕಾಫಿ ಕುಡಿದು, ಅಲ್ಲೇ ಎಲ್ಲಾದರೂ ಕುಳಿತು ಹರಟೋಣ "

—ಎಂದ. ಮಾತನಾಡದೆ ಅವನನ್ನು ಹಿಂಬಾಲಿಸಿದೆ........

ಕಾಫಿ ಮುಗಿಸಿ ಬಣ್ಣದ ಕಾರಂಜಿಯ ಬಳಿಯ ಮರಗಳಡಿಯಲ್ಲಿ ಇಬ್ಬರೂ ಕುಳಿತೆವು. ಯುದ್ಧ ಮುಗಿಯಿತೆಂದು ಪತ್ರಿಕೆಗಳು ಸಾರಿದ್ದರೂ ಬೆಂಗಳೂ ರಿನಲ್ಲಿನ್ನೂ ಯುದ್ಧ ಸಮಯ ವಾತಾವರಣವಿತ್ತು. ಕಾರಂಜಿಯ ಬಳಿಯಲ್ಲಿ ಅಲ್ಲಲ್ಲಿ ಸೈನಿಕರು, ಆಂಗ್ಲೋ ಇಂಡಿಯನ್ ಹುಡುಗಿಯರೊಂದಿಗೆ ಅಡ್ಡಾಡು ತ್ತಿದ್ದರು.

ಶ್ರೀಧರ ಒಂಟಿಯಾಗಿದ್ದ ಹುಡುಗಿಯೊಬ್ಬಳತ್ತ ನೋಡಿ ಸಣ್ಣಗೆ ಸಿಳ್ಳು ಹಾಕಿ—

" ಓ ನೀನು ಜೊತೆಯಲ್ಲಿರುವುದನ್ನು ಮರತೇ ಬಿಟ್ಟಿದ್ದೆ. ಕ್ಷಮಿಸು " ಎಂದು " ಹೂ. ಈಗ ಹೇಳು, ನಿನ್ನ ಕಥೆ ಏನು ?" ಎಂದ.

" ನನ್ನ ಕಥೆ ಹಾಗಿರಲಿ, ನಿನ್ನದೇನು ಹೇಳು "

—ಎಂದೆ. ಅವನ ಮಾತು, ರೀತಿ, ನಡತೆ ಒಂದೂ ಅರ್ಥವಾಗದೆ ನನ್ನ ಮಿದುಳು ದಿಗ್ಭ್ರಮೆಗೊಂಡಿತ್ತು. ಆ ದಿಗ್ಭ್ರಮೆಯಿಂದಲಾಗಿಯೋ ಏನೋ ಕೊಂಚ ಸಿಟ್ಟು ಬಂದಿತ್ತು

" ನಾನು ? ನಾನು ಏನೂ ಅಲ್ಲ, ಐ ಆಮ್ ಎ ಪರ್ಫೆಕ್ಟ್ ಪ್ರಾಡಕ್ಟ್ ಆಫ್ ದಿ ಏಜ್. ಅಷ್ಟೆ, ಏನೂ ಅಲ್ಲ "

—ಅಂದ.

" ಒಗಟಿನಂತೆ ಮಾತನಾಡುವುದೇ ನಿನ್ನಿಷ್ಟವಾದರೆ ಹಾಗೇ ಮಾತಾಡು.

ಇಲ್ಲವೇ ನೀನಾಡುವ ಮಾತು ನನಗೆ ಅರ್ಥವಾಗಬೇಕು ಎನ್ನುವ ಆಶೆಯಿದ್ದರೆ ಹಾಗೆ ಮಾತನಾಡು. ಆದರೆ ಯಾವ ಮಾತನ್ನೂ ಆಡುವ ಇಷ್ಟವಿಲ್ಲದಿದ್ದರೆ ಹಾಗಾದರೂ ಹೇಳು ಏನನ್ನೂ ಕೇಳುವುದಿಲ್ಲ"

"ಸತ್ಯ, ವಾಸ್ತವ ಪರಿಸ್ಥಿತಿ ಯಾವಾಗಲೂ ನಿನಗೆ ನೋವನ್ನುಂಟು ಮಾಡುತ್ತದೆಯಲ್ಲವೇ ರಾಜಶೇಖರ್ ?"

—ವಿಚಿತ್ರ ಧ್ವನಿಯಲ್ಲಿ ಕೇಳಿದ ಶ್ರೀಧರ. ಅವನ ಮಾತು ಗುರಿಯಿಟ್ಟು ಹೊಡೆದ ಗುಂಡಿನೇಟಿನಂತೆ ನನ್ನ ಹೃದಯವನ್ನು ಭೇದಿಸಿತು. ಆದರೂ ಅದನ್ನು ತೋರಗೊಡದೆ ಹೇಳಿದೆ.

"ಸತ್ಯದಿಂದ ನನಗೆ ನೋವಾಗುತ್ತದೆಯೋ ಇಲ್ಲವೋ ಹೇಳಲಾರೆ. ಆದರೆ ನಿನ್ನ ಇಂದಿನ ರೀತಿಯನ್ನು ಕಂಡು ನೋವಾಗಿರುವುದಂತೂ ಸತ್ಯ."

"ಏಕೆ ?"

"ಏಕೆಂದು ಹೇಳಲಾರೆ—ಆದರೂ ನೋವಾಗುತ್ತಿರುವುದು ಮಾತ್ರ ಸತ್ಯ."

"ನೋಡು ರಾಜಶೇಖರ್. ನಿನ್ನ ಹಾಗೆ ನೀನು ಮಾತಾಡು. ನಿನ್ನ ಅಜ್ಜನ ಹಾಗೆ ಮಾತನಾಡಬೇಡ. ಹಿಂದೆಯೇ ನಾನು ಹೇಳಿದ್ದೆ ನಿನಗೆ, ಅವರವರ ಜೀವನದ ದಾರಿ ಅವರವರಿಗೆ ಸರಿ ಎಂತ. ನನ್ನದು ನನಗೆ. ಅದೇನಾದರೂ ಆಗಲಿ—ನಿನ್ನದೇನಾಯಿತು ಹೇಳು. ನಿನ್ನ ಆದರ್ಶದ ಕಥೆ—ಅಂದ ಹಾಗೆ ಅದೂ ಎರವಲು ಆದರ್ಶ—ಅದರ ಕಥೆ ಏನಾಯಿತೋ ಹೇಳು ಎಲ್ಲಿಯವರೆಗೆ ಬಂದಿದೆ ಅದು ? ಅಥವಾ ಈಗಾಗಲೇ ಅದು ಸೇರಬೇಕಾದ ಮಜಲು ಸೇರಿದೆಯೇ ?"

"ಅಂದರೆ - ಯಾವ ಮಜಲು ?"

"ವಿಫಲತೆಯ ನಿಲ್ದಾಣ. ಎಲ್ಲ ಆದರ್ಶದ ಕೊನೆಯೂ ಅದೇ ತಾನೇ ?"

"ನೀನು ನಿರಾಶಾವಾದಿಯೆಂದು ನಾನು ಅರಿತಿದ್ದೆ ಶ್ರೀಧರ. ಆದರೆ ಅದು ನಿನ್ನನ್ನು ಈ ಮಾತಾಡುವವರೆಗೂ ಮುಟ್ಟಿಸಬಹುದು ಎಂದು ತಿಳಿದಿರಲಿಲ್ಲ."

"ನಿರಾಶಾವಾದ.....ನಿರಾಶಾವಾದ ...ನಿಜ—ನೀನು ಹಿಂದೆಯೇ ಆ ಮಾತನ್ನು ಆಡಿದ್ದೆ. ಆದರೆ ಅಂದೂ, ಇಂದಿನಷ್ಟು ಅಜ್ಞನಾಗಿಯೇ. ಜೀವನದಲ್ಲಿ ನಿನಗೆ ಸುಖಪಡಬೇಕೆಂದು ಆಸೆಯಿದೆಯೇ ರಾಜಶೇಖರ ?"

"ಎಂಥ ವಿಚಿತ್ರ ಪ್ರಶ್ನೆ ಶ್ರೀಧರ. ಸುಖಪಡಬೇಕೆಂಬ ಆಸೆ ಯಾರಿಗಿಲ್ಲ ?"

"ಇದೆಯೇ ?"

"ಇದೆ. ಏಕೆ ಅನುಮಾನವೇ ?"

" ನಿಜವಾಗಿಯೂ ನಿನ್ನನ್ನು ನೋಡಿದರೆ, ನಿನಗೆ ಸುಖಪಡಬೇಕೆಂಬ ಆಸೆಯಿದೆಯೆಂಬುದೇ ನನಗೆ ಅನುಮಾನ."

" ಏಕೆ ? "

" ಸುಖಪಡಬೇಕೆಂಬ ಬಯಕೆ ಇರುವವನು ನಿನ್ನಂತೆ ಆ ವಾದ, ಈ ವಾದಗಳ ಮಾತು ಆಡುವುದಿಲ್ಲ. ಈ ವಾದಗಳು ಜೀವನದಲ್ಲಿ ಎಲ್ಲ ಸುಖಗಳ ರುದ್ರಭೂಮಿ. ಈ ವಾದಗಳಿಗೆ ಮನಸ್ಸು ಮಾರುವುದು ಅದ್ಯಾವನೋ ಸಿಂದ ಬಾದ್ ಎಂಥದೋ ಭೂತವನ್ನು ಕರೆದು ಬೆನ್ನಿನ ಮೇಲೆ ಕೂಡಿಸಿಕೊಂಡ ನಂತಲ್ಲ – ಹಾಗೆ. ಒಮ್ಮೆ ಈ ಗುಣಿಗೆ ಬಿದ್ದೆಯೋ – ಅಲ್ಲಿಗೆ ನಿನ್ನ ಕಥೆ ಮುಗಿಯಿತು. ಆದ್ದರಿಂದ ಜೀವನದಲ್ಲಿ ಸುಖಪಡಬೇಕೆಂದರೆ, ಯಾವ ವಾದಗಳ ಮಾತನ್ನೂ ಆಡಬೇಡ. ಸುಖ. ಎನ್ನುವ ವಸ್ತು ಒಬ್ಬೊಬ್ಬರಿಗೂ ಬೇರೆಯಲ್ಲ, ಸುಖ ಕೊಡುವ ವಸ್ತುಗಳು ಎಲ್ಲರಿಗೂ ಒಂದೇ. ಆದುದರಿಂದ ' ವಾದಗಳ ' ಗೊಂದಲಕ್ಕೆ ತಲೆ ಕೊಡುವುದರಿಂದ ನಿನ್ನ ಸುಖಾನುಭವ ಹೆಚ್ಚುವುದೂ ಇಲ್ಲ, ಕಡಮೆಯಾಗುವುದೂ ಇಲ್ಲ. ಸುಮ್ಮನೆ ಸುಖಪಡು. ಅಕಸ್ಮಾತ್ತಾಗಿ ನಿನ್ನ ಸುಖದ ದಾರಿಯಲ್ಲಿ ಯಾವುದಾದರೂ ವಾದದ ಭೂತ ಅಡ್ಡ ಬಂದರೆ, ವಾದಕ್ಕೆ ತಿಲತರ್ಪಣ ಕೊಡು ; ಸುಖಪಡು. ಇಲ್ಲಿ ಸುಖಪಡದಿದ್ದವರಿಗೆ ಸ್ವರ್ಗ ದಲ್ಲಿ ಸ್ಥಳ ಮೀಸಲು ಎಂಬ ಓಬೀರಾಯನ ಕಾಲದ ನಂಬಿಕೆಯ ಆಲದ ಮರಕ್ಕೆ ನೇತುಹಾಕಿಕೊಳ್ಳಬೇಡ."

—ವಿನೋದವಾಗಲಿ, ವ್ಯಂಗ್ಯವಾಗಲಿ ಇಲ್ಲದ ಗಂಭೀರ ಸ್ವರದಲ್ಲಿ ಹೇಳಿದ ಶ್ರೀಧರ. ಅವನ ಮಾತು ಕೇಳಿ ಏಕೋ ನನ್ನ ಬಾಳ ನಂಬಿಕೆಗಳೆಲ್ಲಾ ಬಿರು ಗಾಳಿಗೆ ಸಿಕ್ಕಿದ ಗಿಡಗಳಂತೆ ಹೊಯ್ದಾಡತೊಡಗಿದವು. ಅವನ ಮಾತಿಗೆ ಇದಿ ರಾಗಿ ಯಾವ ಮಾತೂ ಆಡಲಾಗದೆ ಸುಮ್ಮನೆ ಕುಳಿತೆ. ನಾನು ಸುಮ್ಮನೆ ಕುಳಿತುದನ್ನು ಕಂಡು ಶ್ರೀಧರ ತಾನೇ ಮಾತು ಮುಂದುವರಿಸಿ ಹೇಳಿದ—

" ಏನು ರಾಜಶೇಖರ್ ಸುಮ್ಮನೆ ಕುಳಿತೆ ? ನನ್ನ ಮಾತು ನಂಬಿಕೆ ಯಾಗಲಿಲ್ಲವೇ ? ಹೋಗಲಿ ಬಿಡು. ಇಂದಲ್ಲ ನಾಳೆ, ಇಂದು ನನ್ನದಾದ ಅನುಭವ ನಿನ್ನದೂ ಆಗುತ್ತದೆ. ಆ ಬಗೆಯ ಅನುಭವವಾಗುವುದು – ನನ್ನ ನಿನ್ನ ವೈಯ್ಯಕ್ತಿಕ ಅದೃಷ್ಟವೇನೂ ಅಲ್ಲ ರಾಜಶೇಖರ್. ಅದು ಈ ಯುಗ ದಲ್ಲಿ ಜೀವಿಸುತ್ತಿರುವ ಎಲ್ಲರಿಗೂ ಒದಗುವ ಸಾಮಾನ್ಯ ಅನುಭವ. ಈ ಯುಗ ದಲ್ಲಿರುವಷ್ಟು 'ವಾದ'ಗಳೂ ಬೇರೊಂದು ಕಾಲದಲ್ಲಿರಲಿಲ್ಲ. ಈ ಯುಗದಲ್ಲಿ ರುವಷ್ಟು 'ವಿಫಲತೆಯೂ' ಬೇರೊಂದು ಯುಗದಲ್ಲಿರಲಿಲ್ಲ ; ಮುಂದೆ ಬೇರೆ ಯಾವ ಯುಗದಲ್ಲೂ ಇರುವುದಿಲ್ಲ. ಯೋಚನೆ ಮಾಡಿ ಹೇಳು – ಸೆಂಟಿಮೆಂ

ಟಲ್ ಆಗಿ ಮಾತನಾಡಬೇಡ. ನಾನಾಡುವುದು ನಿಜವಲ್ಲವೇ ? ಇಂದಿನ ಗಾಳಿಯಲ್ಲಿ ಹಲವಾರು ತಲೆಮಾರುಗಳ, ನೂರಾರು ದೇಶಗಳ ಎಷ್ಟೋ ಪ್ರತಿಭೆಗಳ ಬಯಕೆಗಳು, ವಾದಗಳಾಗಿ ಭೂತಗಳಂತೆ ಗಾಳಿಯಲ್ಲಿ ಅಲೆಯುತ್ತಿವೆ. ಒಂದೊಂದು ಭೂತವೂ ನೂರಾರು ಜನರ ಮೈಹೊಕ್ಕು ಆಡಿಸುತ್ತಿವೆ. ಆದರೆ ಪರಿಣಾಮ – ಈ ವಾದ ವಿವಾದ ಪ್ರತಿವಾದಗಳಲ್ಲಿ ಬದುಕಿ ಉಳಿಯುವ ಅಪವಾದ ಒಂದೂ ಇಲ್ಲ. ಯಾವ ವಾದಕ್ಕೇ ಮೈಕೊಡು, ಮನಸ್ಸು ಕೊಡು – ಪರಿಣಾಮ : ಕಣ್ಣೀರು, ರಕ್ತ, ವಿಫಲತೆ. ಎಲ್ಲೂ ಸಫಲತೆ ಕಾಣುವುದಿಲ್ಲ. ಯಾವ ನಂಬಿಕೆಯೂ ಬದುಕುವುದಿಲ್ಲ. ಎಲ್ಲ ನಂಬಿಕೆಗಳೂ ಬಾಲಗ್ರಹ ದೋಷದಿಂದ ಸಾಯುವವೇ. ಇದನ್ನು ನೋಡಿದಾಗ ಯಾರೋ ಕವಿ ಹೇಳಿದ ಒಂದು ಸಾಲು ನನಗೆ ನೆನಪಿಗೆ ಬರುತ್ತದೆ ರಾಜಶೇಖರ."

"ಯಾವ ಪದ್ಯ ?"

"'ಕೇದಿಗೆಯ ವನದೊಳಗೆ ಸಂಚರಿಸದಿರು ಚೆಲುವೆ – ಕಂಪಿನಾಗರವಲ್ಲ, ಸರ್ಪದೊಡಲು'. ನಿಜ. ಈ ಜಗತ್ತು ಕೇದಿಗೆಯ ವನ ಯಾವ ಆದರ್ಶದ ರಾಜಕನ್ಯೆಯೋ ಆಗಲಿ, ಈ ಬಂಗಾರದ ತೆನೆಯ ಕಂಪಿಗೆ ಮರುಳಾಗಿ, ಈ ಬೆಳೆಯನ್ನು ಹೊಕ್ಕರೆ, ಆಕೆಗೆ ಸಿಗುವುದು ಪರಿಮಳದ ಫಲವಲ್ಲ, ನಾಗದಂಷ್ಟ್ರದ ವಿಷಾನುಭವ. ಆ ಹಾವಿನ ಕೈಯಲ್ಲಿ ಕಡಿಸಿಕೊಂಡವನು ನಾನು ಹೇಳುತ್ತೇನೆ ಕೇಳು. ನನಗಾದುದು ಸಾಕು, ನನಗಾದ ಅನುಭವವೇ ನಿನಗೂ ಆಗುವುದು ಬೇಡ"

—ಅತ್ಯಂತ ಆತ್ಮೀಯತೆಯ ಕಳಕಳಿಯಿಂದ, ಬೆಂಕಿಯೊಡನೆ ಸರಸವಾಡುವ ಮಗುವನ್ನು ಆ ಆಟದಿಂದ ನಿವಾರಿಸುವ ತಾಯಿಯ ಅಕ್ಕರೆ ತುಂಬಿದ ಕಕ್ಕುಲತೆಯಿಂದ ಹೇಳಿದ ಶ್ರೀಧರ. ಅವನ ಮಾತು ಕೇಳಕೇಳುತ್ತಾ ನನ್ನ ಸುತ್ತಲೂ ದಟ್ಟವಾದ ಕತ್ತಲು ಹಬ್ಬಿದಂತಾಗಿ, ಆ ಕತ್ತಲಿನಲ್ಲಿ ಆದರ್ಶಕೊಂದ ಲಕ್ಷಾಂತರ ಪ್ರೇತಗಳು ಸುಯ್ಯುತ್ತಾ ಅಲೆಯುತ್ತಿರುವಂತೆ ತೋರಿತು. ಅವುಗಳ ನಿಟ್ಟುಸುರಿನೊಂದಿಗೆ ನನ್ನ ನಿಟ್ಟುಸಿರೂ ಬೆರೆಯಿತು. ಅವನ ಮಾತುಗಳಲ್ಲಿ ಸತ್ಯ ಮಾರಣ ಖಡ್ಗವಾಗಿ ಝಳಪಿಸುವಂತಿತ್ತು ; ಸತ್ಯ ನನ್ನೆದುರು ಬೆತ್ತಲೆಯಾಗಿ ಸುಳಿದಂತಿತ್ತು. ನಂಬಬೇಡ, ನಂಬಬೇಡ, ಅವನ ಮಾತನ್ನು ನಂಬಬೇಡ. ನಿರಾಶಾವಾದ ಭಯಂಕರ ಭೋಗತೃಷೆಯಾಗಿ ಪರಿವರ್ತಿತವಾಗಿ ಆಡುತ್ತಿರುವ ಆ ಸೈತಾನ ನುಡಿಗಳನ್ನು ನಂಬಬೇಡ. ಅದು ಸುಳ್ಳು ಎಂದು ನನ್ನೊಳಗಿನ ಯಾವುದೋ ಧ್ವನಿ ಸಾವು ಸನ್ನಿಹಿತವಾದ ಹಕ್ಕಿಯಂತೆ ಚಡಪಡಿಸಿ ಚೀರುತ್ತಿತ್ತು. 'ಶ್ರೀಧರ ಸಾಕು, ನಿಲ್ಲಿಸು ನೀನಾಡು

ತ್ತಿರುವ ಸುಳ್ಳು ನುಡಿಗಳನ್ನು' ಎಂದು ಹೇಳಬೇಕೆಂದಿರುವಷ್ಟರಲ್ಲಿಯೇ ನನ್ನ ಬಾಳಕಥೆಯೇ ನೆನಪಾಗಿ, ನನ್ನ ನಾಲಗೆಯನ್ನು ತಡೆದು 'ನಿನಗಾದುದನ್ನೇ ನೆನಪಿಸಿಕೋ. ಈಗ ಧೈರ್ಯವಿದ್ದರೆ ಸುಳ್ಳು ಎಂದು ಹೇಳು' ಎಂದಿತು. ಆ ನೆನಪಿಗೆ ಸೋತುಹೋದೆ. ಆ ಸೋಲಿನೊಂದಿಗೆ, ನನ್ನ ದೇಹದಲ್ಲಿ ಸಂಚರಿಸುತ್ತಿದ್ದ ಶಕ್ತಿಯೇ ಉಡುಗಿಹೋದಂತಾಯಿತು. ಬೀಕಲಾದ ಧ್ವನಿಯಲ್ಲಿ ಹೇಳಿದೆ—

" ನಿನ್ನ ಮಾತು ಸತ್ಯ ಎಂದು ಒಪ್ಪಿಕೊಳ್ಳುವ ಮನಸ್ಸು ನನಗಿಲ್ಲ ಶ್ರೀಧರ. ಆದರೆ ಅದು ಸುಳ್ಳು ಎಂದು ಹೇಳುವ ಸಾಹಸವೂ ಇಂದು ನನಗಿಲ್ಲ."

" ಓ – ಹಾಗೋ ! ಶೆಟ್ಟರ ಗಾಡಿ ನಾನು ನಿರೀಕ್ಷಿಸಿದ ದಾರಿಯಲ್ಲೇ ಹೋಗುತ್ತಿದೆ. ಹೋಗಲಿ ಬಿಡು – ಅದೇನಾಯಿತು ಹೇಳು.

" ಏನು ಹೇಳುವುದು ಶ್ರೀಧರ್ – ಅದನ್ನು ಕೇಳುವುದಕ್ಕಿಂತ ಕೇಳದಿರುವುದು ಲೇಸು."

" ಅದೇನೋ ನಿಜವೇ. ಕೇಳದಿರುವುದು ನನ್ನ ಮಟ್ಟಿಗೆ ಲೇಸಾದರೂ ಹೇಳುವುದು ನಿನ್ನ ಮಟ್ಟಿಗೆ ಲೇಸು. ನಮ್ಮ ಎದೆ ಕೊರೆವ ಗೋಳನ್ನು ಹಂಚಿಕೊಂಡು ಸುಖಪಡುವ ಜನವಿಲ್ಲದಿರುವಾಗ, ಅದನ್ನು ಗಾಳಿಯಾದರೂ ಅಷ್ಟು ಹೊತ್ತುಕೊಂಡು ಹೋಗಲಿ, ಹೇಳಿಬಿಡು."

ಶ್ರೀಧರ ಆ ಮಾತನಾಡಿದ ಗಳಿಗೆಯಲ್ಲಿ ನನಗೂ ಅನಿಸಿತು—

" ಹೇಳಬೇಕು, ಯಾರಲ್ಲಾದರೂ ಹೇಳಬೇಕು – ಗಾಳಿಗಾದರೂ ಹೇಳಬೇಕು."

ಹೇಳಿದೆ—

ಶ್ರೀಧರ ಕಾಗದ ಬರೆಯುವುದನ್ನು ನಿಲ್ಲಿಸಿದಂದಿನಿಂದ, ಆ ಗಳಿಗೆಯವರೆಗೂ ನಡೆದುದೆಲ್ಲವನ್ನೂ ಹೇಳಿದೆ; ಕಾಲೇಜಿನ ಜೀವನವನ್ನು, ಕಾತ್ಯಾಯನಿ ಪ್ರಸಂಗವನ್ನು, ತಂದೆಯ ಪ್ರತಿಭಟನೆಯನ್ನು, ಮನೆ ಬಿಟ್ಟು ಹೊರಬಿದ್ದುದನ್ನು, ಮುಂದೇನು ಎಂದರಿಯದೆ ಅಲೆಯುತ್ತಿರುವುದನ್ನು–ಎಲ್ಲವನ್ನೂ ಹೇಳಿದೆ. ಮರುಮಾತನಾಡದೆ, ನಡುವೆ ಪ್ರಶ್ನೆ ಕೇಳದೆ, ಯಾವ ಟೀಕೆಯನ್ನೂ ಮಾಡದೆ ಸುಮ್ಮನೆ ಕುಳಿತು, ಸಿಗರೇಟು ಸೇದುತ್ತಾ ಕೇಳಿದ ಶ್ರೀಧರ. ಎಲ್ಲವನ್ನೂ ಕೇಳಿಯಾದ ಮೇಲೆ ನನ್ನ ನಿಟ್ಟುಸಿರಿನೊಂದಿಗೆ, ಅವನ ನಿಟ್ಟುಸಿರೂ ಗಾಳಿಯಲ್ಲಿ ಬೆರೆಯಿತು.

ನಿಟ್ಟುಸಿರು – ಗಾಳಿಯಲ್ಲಿ ನಿಟ್ಟುಸಿರು –

ಎಷ್ಟು ಜನರ, ಎಷ್ಟು ಬಗೆಯ, ಎಷ್ಟು ಭಾವದ, ಎಷ್ಟು ಬಗೆ ನೋವಿನ

ನಿಟ್ಟುಸಿರು ಬೆರೆತಿರಬಹುದು ಈ ಗಾಳಿಯಲ್ಲಿ ?

ಏಕೋ ನನಗೆ ನಿಟ್ಟುಸಿರಿನ ನಂಜು ಬೆರೆತ ಆ ಗಾಳಿಯಲ್ಲಿ ಉಸಿರಾಡಿಸಲೂ ಭಯವಾಯಿತು. ಸುತ್ತ ಕವಿದಿದ್ದ ಕತ್ತಲೆ ನನ್ನ ಗಂಟಲಿನಲ್ಲಿ ಒತ್ತಿ ಬರುತ್ತಿರುವಂತೆ ತೋರಿತು. ಹೆದರಿ ಸುತ್ತಲೂ ಕಣ್ಣಾಡಿಸಿದೆ—

ಕಾರಂಜಿಯಲ್ಲಿ ಬಣ್ಣಬಣ್ಣದ ನೀರು ಯಾಂತ್ರಿಕವಾಗಿ ಚಿಮ್ಮುತ್ತಿತ್ತು. ಸೀಮೆಂಟಿನ ಬೆಂಚಿನ ಮೇಲೆ ಕುಳಿತ್ತಿದ್ದವರು ಕುಳಿತೇ ಇದ್ದರು ಹತ್ತಾರು ಜನ ಕಾರಂಜಿಯ ಬಳಿಯಲ್ಲಿ ಬೆಳಕಿನ ಸುತ್ತ ನೆರದ ನೆರಳುಗಳಂತೆ ನಿಂತಿದ್ದರು ಮರಗಳಡಿಯ ಕತ್ತಲಿನಲ್ಲಿ ಅಲ್ಲೊಂದು, ಇಲ್ಲೊಂದು ಕಾರು ನಿಂತಿದ್ದವು. ಆಗಾಗ ಒಂದೊಂದು ಕಾರು, ಕರ್ಕಶವಾದ ಬೆಳಕನ್ನು ಚೆಲ್ಲಿ, ಹಾರನ್ನಿನ ಕಿವಿ ಕತ್ತರಿಸುವ ಸದ್ದುಮಾಡಿ, ಮರುಗಳಿಗೆಯೇ ಸರಿಯುತ್ತಿದ್ದವು ಒತ್ತಿ ಬರುತ್ತಿದ್ದ ಎದೆಯುಸಿರನ್ನು ಬಿಗಿ ಹಿಡಿದು ಅದನ್ನು ನೋಡುತ್ತಾ ಕುಳಿತೆ ನನ್ನ ಸುತ್ತ ಮುತ್ತ ನಡೆವ ಅದೆಲ್ಲವೊ, ನನಗೆ ಸಂಬಂಧವಿಲ್ಲದ ಬೇರಾವುದೋ ಲೋಕದ ಘಟನೆಗಳಂತೆ ತೋರಿತು. ಅಷ್ಟು ಮಾತನಾಡಿದಬಳಿಕ ಬೇರೆ ಮಾತನಾಡುವ ಶಕ್ತಿಯೂ ನನ್ನಲ್ಲಿ ಇರಲಿಲ್ಲ ಏಕೋ ಶ್ರೀಧರನಿಗೂ ಮಾತನಾಡುವ ಮನಸ್ಸಿದ್ದಂತೆ ಇರಲಿಲ್ಲ. ಸ್ವಲ್ಪ ಹೊತ್ತು ಇಬ್ಬರೂ ಹಾಗೇ ಕುಳಿತಿದ್ದೆವು.

" ಸರಿ. ಇಷ್ಟಾಯಿತು. ಈಗ ಮುಂದೇನು ಮಾಡುವ ಆಲೋಚನೆ ? "

—ಶ್ರೀಧರನೇ ಮೌನವನ್ನು ಮುರಿದು ಕೇಳಿದ.

" ಏನು ಮಾಡುವುದೋ ನನಗೊಂದೂ ತೋಚುತ್ತಿಲ್ಲ. ನನ್ನ ಜೀವನದಲ್ಲಿ ಈ ಬಗೆಯ ಪ್ರಸಂಗ ಬರಬಹುದು ಎಂದೇ ನಾನು ನಿರೀಕ್ಷಿಸಿರಲಿಲ್ಲ. ಈ ಅನಿರೀಕ್ಷಿತ ಘಟನೆಯಿಂದಾಗಿ, ಯಾವುದೋ ಗುರಿ ಹಿಡಿದು ಸಾಗುತ್ತಿದ್ದ ಬಾಳು ಅಸ್ತವ್ಯಸ್ತವಾಗಿ ಹೋಗಿದೆ. ಏಕೋ, ಏಕೋ ನನ್ನ ಯಾವ ನಂಬಿಕೆಯೂ, ಗುರಿಯೂ ಬದುಕುವುದಿಲ್ಲವೆಂದೇ ತೋರುತ್ತದೆ."

" ಆಗ ನನ್ನದು ನಿರಾಶಾವಾದವೆಂದೆ. ಈಗ ಹೇಳು—ನಿನ್ನದು ನಿರಾಶಾವಾದವಲ್ಲವೇ ? "

" ನಿಜ. ಅದಕ್ಕೇ ನೀನು ಹೇಳಿದುದು ಸುಳ್ಳು ಎನ್ನುವ ಸಾಹಸವನ್ನು ನಾನು ಮಾಡಲಾರೆ ಎಂದದ್ದು."

" ಹಾಗಾದರೆ – ಮುಂದೆ ? ನೀನೂ ನನ್ನ ದಾರಿಯೇ ? "

" ಯಾವ ದಾರಿಯೋ ದೇವರಿಗೇ ಗೊತ್ತು. ನನಗಂತೂ ಯಾವ ದಾರಿಯೂ ಕಾಣುತ್ತಿಲ್ಲ."

" ದೇವರು – ನಿನ್ನ ವ್ಯವಹಾರವನ್ನು ನಡೆಸುವ ಕಂಟ್ರಾಕ್ಟನ್ನು ಯಾವ ದೇವರಿಗೂ ಒಪ್ಪಿಸಬೇಡ ರಾಜಶೇಖರ್. ನೀನು ಮಾಡಲಾಗದ್ದನ್ನು ಯಾವುದೋ ಕಾಣದ ದೇವರು ಮಾಡುತ್ತಾನೆ ಎಂಬ ನಂಬಿಕೆಯೇಕೆ ? "

" ದೇವರನ್ನು ನಂಬಬಾರದು ಎನ್ನುತ್ತೀಯಾ ? "

" ಹೌದು."

" ಹಾಗೆಂದರೆ ನನಗಾವ ನಂಬಿಕೆಯೂ ಇಲ್ಲ. ಏನಾದರಾಗಲಿ."

ನಿನ್ನಂಥ ಹೇಡಿ ಆದರ್ಶವಾದಿಗಳ ಊರೆಗೋಲಾಗಿ ದೇವರು ಸತ್ತ. ಅಲ್ಲ – ರಾಜಶೇಖರ್, ಹುಟ್ಟಿದಂದಿನಿಂದ ಅರಿತ ನಿನ್ನ ತಂದೆಯೇ ನಿನ್ನ ನಿರೀಕ್ಷೆಗೆ ವ್ಯತಿರಿಕ್ತವಾಗಿ ನಡೆದಿರುವಾಗ, ಇಂದೂ ಕಾಣದ ದೇವರು ಏನಾದರೂ ಮಾಡಬಹುದು ಎಂದು ನಿರೀಕ್ಷಿಸುವುದು ತಪ್ಪಲ್ಲವೇ ? ನಿಮ್ಮ ತೆವಲಿಗೆ ದೇವರು ಎನ್ನುವುದು, ದೇವರನ್ನು ನಂಬುವುದು, ಆಮೇಲೆ ಅವನನ್ನು ಬಯ್ಯುವುದು – ಇದು ಎಲ್ಲಾ ಸಲ್ಲದ ಕೆಲಸ. ದೇವರು ಇದ್ದರೆ ಇರಲಿ, ಬಿಟ್ಟರೆ ಬಿಡಲಿ. ಈಗ ನೀನೇನು ಮಾಡುತ್ತೀಯೋ ಹೇಳು."

" ಯಾವುದು – ಏನು ಮಾಡಲಿ ? ಒಂದು ಸಮಸ್ಯೆ, ಒಂದು ಬಗೆಯ ಸಮಸ್ಯೆಯಾಗಿದ್ದರೆ ಏನಾದರೂ ಒಂದು ನಿರ್ಧಾರ ಮಾಡಬಹುದಿತ್ತು. ಆದರೆ ಹತ್ತು ಬಗೆಯ ಸಮಸ್ಯೆ ಮುತ್ತಿ ಕೊಳ್ಳುತ್ತಿರುವಾಗ ಯಾವುದಕ್ಕೆ ಏನು ಎಂದು ಹೇಳಲಿ ? "

" ಈಗ ಎಲ್ಲಕ್ಕಿಂತ ಮುಖ್ಯವಾದುದು–ನನ್ನ ಉಳಿದೆಲ್ಲ ಸಮಸ್ಯೆಗಳಿಗಿಂತ ನನಗೆ ಹೆಚ್ಚು ಆಸಕ್ತಿ ಇರುವುದು ನಿನ್ನ ಓದಿನ ಪ್ರಶ್ನೆ. ಅದನ್ನೇನು ಮಾಡುತ್ತೀ ಹೇಳು ? "

" ಏನು ಮಾಡಲಿ ಇವೊಂದು ವರ್ಷ ಮುಗಿದಿದ್ದರೆ ಬಳಿಕ ಈ ಸಮಸ್ಯೆ ಇರುತ್ತಿರಲಿಲ್ಲ ನನ್ನ ಓದು ಮುಗಿಯುವವರೆಗೂ ಬೇರಾವ ಸಮಸ್ಯೆಯನ್ನೂ ಹಚ್ಚಿಕೊಳ್ಳಬಾರದು ಎಂತಲೇ ಇದ್ದೆ. ಆದರೆ ಏಕೋ ಎಲ್ಲಾ ನನ್ನ ನಿರೀಕ್ಷೆಗೆ ವ್ಯತಿರಿಕ್ತವಾಗಿಯೇ ನಡೆಯುತ್ತಿರುವಂತಿದೆ."

" ಇರಬಹುದು. ಈಗ ಮುಂದೆ ಓದಬೇಕೋ ಬೇಡವೋ ? "

" ಓದಬೇಕು. ಇಲ್ಲವಾದರೆ ನನ್ನ ಇಷ್ಟು ವರ್ಷದ ಶ್ರಮವೆಲ್ಲಾ ಹೊಳೆಯಲ್ಲಿ ಹುಣಸೆ ಹಣ್ಣು ತೊಳೆದಂತಾಗುತ್ತದೆ."

" ಹಾಗಾದರೆ ಓದು."

" ಓದಲಿಕ್ಕೆ ನನ್ನ ಅಭ್ಯಂತರವೇನೂ ಇಲ್ಲ. ಆದರೆ ಅವಕ್ಕೆ ಹಣ ಎಲ್ಲಿಂದ ತರಲಿ ಶ್ರೀಧರ ? "

" ನಿನ್ನ ಬಾಳಿಗೆ ಈ ಓದು ಅತ್ಯಂತ ಮುಖ್ಯವಾದುದಲ್ಲವೇ ? ಮೆಡಿಕಲ್ ಶಿಕ್ಷಣವನ್ನೇ ನೀನು ಏತಕ್ಕಾಗಿ ಆರಿಸಿಕೊಂಡೆ ಎಂಬುದು ನಿನಗೆ ನೆನಪಿದೆ ತಾನೇ ? "

" ಇಲ್ಲದೆ – ಅದು ನೆನಪಿಲ್ಲದೆ ಬೇರಾವುದು ನೆನಪಿದ್ದೀತು ? "

" ಅದೇ ನಿನ್ನ ಬಾಳಿನ ಪರಮ ಗುರಿ ಎಂದಲ್ಲವೇ ನೀನು ಹೇಳುತ್ತಿದ್ದುದು ? "

" ಅಹುದು."

" ಅಥವಾ ಈಚೆಗೆ ಅದಕ್ಕಿಂತ ದೊಡ್ಡದು, ಬೇರೆಯದು ಯಾವುದಾದರೂ ಕಂಡಿದೆಯೋ ? "

" ಇಲ್ಲ."

" ಖಂಡಿತ ತಾನೇ ? "

" ಖಂಡಿತ."

" ಹಾಗಾದರೆ ನಿನ್ನ ಸಮಸ್ಯೆ ತೀರುವುದು ಸುಲಭವಾಯಿತಲ್ಲ."

" ಆ—ಹೇಗೆ ? "

—ಶ್ರೀಧರನ ಮಾತು ಕೇಳಿ ಚಕಿತನಾಗಿ ಮರುಪ್ರಶ್ನೆ ಮಾಡಿದೆ.

" ಆದಷ್ಟು ಬೇಗ ನಿನ್ನ ಶಿಕ್ಷಣಾವಸ್ಥೆ ಮುಗಿಸಿ, ಸೇವಾ ಜೀವನಕ್ಕೆ ಇಳಿಯುವುದೇ ನಿನ್ನ ಗುರಿಯಾಗಿದ್ದರೆ, ಈ ಮಾರ್ಗಮಧ್ಯದ ಆಕರ್ಷಣೆಗಳು ಅಡ್ಡಿ ಬರುವುದೇಕೆ ? ನಿನ್ನ ತಂದೆಯ ಮಾತು ಕೇಳಿದರೆ, ಆತನಿಗೂ ಸಂತೋಷವಾಗುವುದಲ್ಲದೆ, ನಿನ್ನ ಶಿಕ್ಷಣದ ಸಮಸ್ಯೆ ಇತ್ಯರ್ಥವಾಗುವುದಲ್ಲಾ ? ಅದಕ್ಕೆ ಇಷ್ಟು ತೊಳಲಾಟವೇಕೆ ? "

" ಅಂದರೆ—ಶಿಕ್ಷಣ ಮುಗಿಯುವುದಕ್ಕಾಗಿ ಕಾತ್ಯಾಯನಿಗೆ ದ್ರೋಹ ಬಗೆಯಲೇ ? "

" ಅಂದರೆ — ಕಾತ್ಯಾಯನಿಗಾಗಿ ನಿನ್ನ ಶಿಕ್ಷಣಕ್ಕೆ, ಅದರ ಮುಂದಿನ ನಿನ್ನ ಬಾಳ ಆದರ್ಶಕ್ಕೆ ದ್ರೋಹ ಬಗೆಯುತ್ತೀಯಾ ? ಹಿಂದಿನ ಆದರ್ಶಕ್ಕಿಂತ ದೊಡ್ಡ ಆದರ್ಶ ಬೇರಾವುದೂ ಇಲ್ಲ ಎಂದೆ. ಆದರೆ ನಿನ್ನ ಈಗಿನ ಮಾತು, ಕೃತಿ ನೋಡಿದರೆ ಕಾತ್ಯಾಯನಿ ಅದೆಲ್ಲಕ್ಕಿಂತಲೂ ಹೆಚ್ಚಾದಳೆಂದೇ ತೋರುವುದಿಲ್ಲವೇ ? ಈ ವಿರೋಧಾಭಾಸಕ್ಕೆ ಏನು ಸಮಾಧಾನ ಹೇಳುತ್ತೀಯ ? "

—ಕೊನೆಯಾಗಿ ಕೇಳಿದ ಶ್ರೀಧರ. ಅವನ ಒಂದೊಂದು ಮಾತೂ ಗುರಿ ನೋಡಿ ಬಿಟ್ಟ ಬಾಣದಂತೆ ನನ್ನ ಮರ್ಮವನ್ನು ಭೇಧಿಸಿ, ನನ್ನ ನಡ

ತೆಯ ನಗ್ನತೆಯನ್ನು ನನಗೆ ತೋರಿ, ನನ್ನನ್ನು ನಿರುತ್ತರನಾಗಿ ಮಾಡಿತು.

" ಏಕೆ ಸುಮ್ಮನೆ ಕುಳಿತೆ ರಾಜಶೇಖರ್, ಹೇಳು. ಏನಾದರೂ ಹೇಳು."

" ನಿನ್ನ ಪ್ರಶ್ನೆಗೆ ನಾನೇನೂ ಹೇಳಲಾರೆ ಶ್ರೀಧರ್. ಆದರೆ ಕಾತ್ಯಾಯನಿಯನ್ನು ಬಿಡಲಾರೆ."

" ನಿನ್ನ ಆದರ್ಶ ? "

" ಅದನ್ನೂ ಬಿಡುವುದಿಲ್ಲ."

" ಅದನ್ನು ಹೇಗೆ ಉಳಿಸಿಕೊಳ್ಳುತ್ತೀಯ ? ಕಾತ್ಯಾಯನಿ ಬೇಕು ಅಂದರೆ, ನಿನ್ನ ಶಿಕ್ಷಣ ಇಲ್ಲಿಗೇ ತುಂಡಾಗುತ್ತದೆಯಲ್ಲ."

" ಊಹೂ. ಆದನ್ನು ತುಂಡಾಗಲು ಬಿಡುವುದಿಲ್ಲ."

" ಏನು ಮಾಡುತ್ತೀ ? "

" ಉಪವಾಸ ಮಾಡಿ, ಬೀದಿಯಲ್ಲಿ ಮಲಗಿ, ಭಿಕ್ಷೆ ಬೇಡಿಯಾದರೂ ನನ್ನ ಶಿಕ್ಷಣ ಮುಗಿಸುತ್ತೇನೆ."

" ಅಷ್ಟು ಪಡಿಪಾಟಲು ಪಡುವುದರ ಬದಲು ಕಾತ್ಯಾಯನಿಯನ್ನು ಕೈ ಬಿಡುವುದೇ ಸುಲಭವಾದ ದಾರಿಯಲ್ಲವೇ ? "

" ಇರಬಹುದು – ಆದರೆ ಬಿಡಲಾರೆ "

" ಇದೇನು ಹಟ ರಾಜಶೇಖರ. ಗಂಡಿಗೆ ಹೆಣ್ಣು ಬೇಕು. ಒಪ್ಪುತ್ತೇನೆ. ಹೆಣ್ಣು ಬೇಡ ಎಂದ ಧೀರ ಯಾವನೂ ಇಲ್ಲ. ಆದರೆ ಎಲ್ಲ ಹೆಣ್ಣು ಗಂಡಿಗೆ ಕೊಡುವ ಸುಖ ಒಂದೇ. ಬಣ್ಣ ಬದಲಾಗಬಹುದು, ಆಕಾರ ಬದಲಾಗಬಹುದು. ಆದರೆ—ಸುಖ. ಅದು ಒಂದೇ—ನೀನು ವೈದ್ಯ ವಿದ್ಯಾರ್ಥಿ, ದೇಹದ ಭೌತಿಕ ವಿಷಯ ನನಗಿಂತ ನಿನಗೇ ಚೆನ್ನಾಗಿ ಗೊತ್ತು. ಹಾಗಿರುವಾಗ ಅವಳೇ ಬೇಕು, ಇವಳು ಬೇಡ ಎನ್ನುವ ಮೂರ್ಖತನಕ್ಕೆ ಏನು ಅರ್ಥ?"

—ಕಠೋರ ನಿಷ್ಠುರತೆಯಿಂದ ಕೇಳಿದ ಶ್ರೀಧರ. ಅವನ ಮಾತು ಕೇಳಿ ನನಗೇಕೋ ಸಿಟ್ಟು ಬಂತು

" ನಿನ್ನ ತರ್ಕ ಸರಿಯಾಗೇ ಇರಬಹುದು ಶ್ರೀಧರ. ಆದರೆ ಅದನ್ನು ನಾನು ಒಪ್ಪಲಾರೆ. ನೀನು ನನ್ನ ಪರಮ ಮಿತ್ರ. ಆದರೂ ಕಾತ್ಯಾಯನಿಯ ವಿಷಯದಲ್ಲಿ ಈ ರೀತಿ ಮಾತನಾಡುವುದು ನನಗೆ ಸಹಿಸುವುದಿಲ್ಲ. ಆ ವಿಷಯವನ್ನು ಅಲ್ಲಿಗೇ ಬಿಟ್ಟರೆ ನಾನು ತುಂಬಾ ಕೃತಜ್ಞನಾಗಿರುತ್ತೇನೆ."

— ನಾನೂ ಕಟುವಾಗೇ ಹೇಳಿದೆ.

" ನಿಜ ಕಾತ್ಯಾಯನಿ ನಿನ್ನ ಬಾಳಿನ ಅತ್ಯಂತ ಖಾಸಗಿ ತಲೆನೋವು. ನನಗೂ ಅದಕ್ಕೂ ಸಂಬಂಧವಿಲ್ಲ. ನೀನು ಕಾತ್ಯಾಯನಿಯ ವಿಷಯ ಹೇಳಿ

ದುದನ್ನೆಲ್ಲಾ ಕೇಳಿ—ನಾನಾಗಿದ್ದರೆ ಅವಳಿಂದ ಆರುಗಾವುದ ದೂರವಿರುತ್ತಿದ್ದೆ. ಬಹಳ ಭಯಂಕರ ಹೆಣ್ಣಿನಂತೆ ತೋರುತ್ತಾಳೆ. ಆದರೂ ನಿನ್ನ ಅವಳ ಸ್ನೇಹ—ನಿಮ್ಮಿಬ್ಬರ ಸಮಸ್ಯೆ—ಆ ಬಗ್ಗೆ ನಾನೇನೂ ಹೇಳಬಯಸುವುದಿಲ್ಲ. ಆದರೆ ನಿನ್ನ ಆದರ್ಶದ ವಿಷಯದ ಬಗ್ಗೆ ಮಾತನಾಡುವ ಅಧಿಕಾರ ನನಗಿದೆ. ಅಲ್ಲವೇ ? "

" ಹೇಗೆ ? "

" ಹೇಗೆಂದರೆ—ಆ ಆದರ್ಶ ಮೂಲತಃ ನಿನ್ನದಲ್ಲ, ನನ್ನದು. ಆದ್ದರಿಂದ ಅದು ಸಫಲವಾಗಬೇಕು ಎಂಬ ಬಯಕೆ ನಿನಗಿಂತ ನನಗೆ ಹೆಚ್ಚಾಗಿರುವುದು ಸಹಜ. ಕಾತ್ಯಾಯನಿಯಲ್ಲ. ಜಗದಾಂಬೆಯಾದರೂ ಅದಕ್ಕೆ ಅಡ್ಡ ಬರುವದು ನನಗೆ ಸೈರಿಸುವುದಿಲ್ಲ. ಇನ್ನೊಬ್ಬರ ಆದರ್ಶವನ್ನು ಬೇರೆಯವರು ಹೊರಲೆತ್ನಿಸುವುದು ಭಯಂಕರ ಜವಾಬ್ದಾರಿ ಎಂದು ನಾನು ಮೊದಲೇ ಹೇಳಿದೆ. ಆದರೆ ನೀನು ಕೇಳಲಿಲ್ಲ. ನಾನು ಬೇಡವೆಂದರೂ ನೀನು ಇರಲಿ ಎಂದೆ. ಆದುದರಿಂದ ಈಗ ನೀನು ನಾನು ಹೇಳಿದ ಹಾಗೆ ಕೇಳಲೇಬೇಕು."

—ಶ್ರೀಧರನಾಡಿದ ಮಾತನ್ನು ಕೇಳಿ ನನಗೆ ಪುನಃ ನನ್ನ ತಂದೆ ಆಡಿದ ಮಾತು ನೆನಪಿಗೆ ಬಂದಿತು. ಅಲ್ಲಿ ತಂದೆಯನ್ನು ಬಿಟ್ಟು ಬಂದುದಾಗಿತ್ತು. ಇಲ್ಲಿ ಶ್ರೀಧರನಿಗೂ ಎರವಾಗಬೇಕೋ ಎನಿಸಿ ಚಿಂತೆಯಾಯಿತು. ಆ ಸಂದೇಹದ ವ್ಯಥೆಯಲ್ಲೇ ಹೇಳಿದೆ—

" ಶ್ರೀಧರ .. ದಯವಿಟ್ಟು ... ದಯವಿಟ್ಟು ಕಾತ್ಯಾಯನಿಯ ಮಾತೊಂದನ್ನು ಬಿಟ್ಟು ಬೇರೆ ಏನನ್ನಾದರೂ ಹೇಳು ಕೇಳುತ್ತೇನೆ."

" ಅಂತೂ ನಿನಗೆ ಉಳಿದೆಲ್ಲಕ್ಕಿಂತ ಕಾತ್ಯಾಯನಿಯೇ ಹೆಚ್ಚಾದಳು – ಅಲ್ಲವೇ ? "

— ಎತ್ತಲೋ ನೋಡುತ್ತ ಕೇಳಿದ ಶ್ರೀಧರ.

" ಎಲ್ಲದಕ್ಕಿಂತಲೂ ಕಾತ್ಯಾಯನಿ ಹೆಚ್ಚು ಎಂದು ಹೇಳುವ ಸಾಹಸವನ್ನು ನಾನು ಮಾಡುವುದಿಲ್ಲ ಶ್ರೀಧರ್. ಆದರೆ ಯಾವುದಕ್ಕಾದರೂ ಕಾತ್ಯಾಯನಿಯನ್ನು ಬಿಡು ಎಂದರೆ ಅದಕ್ಕೆ ನಾನು ಸಿದ್ಧವಾಗಿಲ್ಲ. ಕಾತ್ಯಾಯನಿ ವಿನಿಮಯದ ವಸ್ತುವಲ್ಲ."

" ಅದು ನಿನ್ನ ಭಾವನೆ. ಅಲ್ಲವೇ ? "

" ನಿಜ."

" ಆದರೆ ಒಂದು ವೇಳೆ — ಹಾಗಾಗದಿರಬಹುದು ಹಾಗಾಗದಿರಲಿ ಎಂದು ನಾನು ಬಯಸುತ್ತೇನೆ – ಆದರೆ ಒಂದು ವೇಳೆ ಕಾತ್ಯಾಯನಿಯೇ

ನಿನ್ನನ್ನು ಬಿಟ್ಟರೆ ಆಗ ?—"

—ಹರಿತವಾದ ದೃಷ್ಟಿಯಿಂದ ನೋಡುತ್ತಾ ಕೇಳಿದ ಶ್ರೀಧರ. ಅವನ ಮಾತು ಅನಿರೀಕ್ಷಿತವಾದ ಸಿಡಿಲಿನಂತೆ ನನ್ನ ಮೆದುಳಿನ ಮೇಲೆ ಅಪ್ಪಳಿಸಿತು.

ಏನು–ಮುಂದೇನು–ಕಾತ್ಯಾಯನಿಯೇ ನನ್ನನ್ನು ಬಿಟ್ಟರೆ ಮುಂದೇನು–

ಈ ಸಮಸ್ಯೆ ಎಂದೂ ನನ್ನ ಮನದಲ್ಲಿ ಸುಳಿದಿರಲಿಲ್ಲ. ಆ ಪ್ರಶ್ನೆ ನನ್ನ ಬಾಳಿನಲ್ಲಿ ಎಂದಾದರೂ ಬರಬಹುದೆಂಬ ಕಲ್ಪನೆಯೂ ನನಗಿರಲಿಲ್ಲ. ಎಂದಾದರೂ....ನಿಜ... ಎಂದಾದರೂ ಈ ಸಮಸ್ಯೆ ಬರಬಹುದೇ ? ಬಂದರೆ—ಆಗ ?

ಆ ಪ್ರಶ್ನೆ ಎಷ್ಟು ಅನಿರೀಕ್ಷಿತವಾಗಿತ್ತೋ ಅಷ್ಟೇ ಭಯಂಕರವಾಗಿತ್ತು. ಅದರ ಬಗ್ಗೆ ಚಿಂತಿಸುವುದಕ್ಕೂ ನನ್ನ ಮನಸ್ಸು ಒಪ್ಪಲಿಲ್ಲ. ಯಾವುದೋ ಅಂಧಶ್ರದ್ಧೆಗೆ ಕಟ್ಟುಬಿದ್ದು ಹೇಳಿದೆ—

" ನನ್ನ ಬಾಳಿನಲ್ಲಿ ಎಂದೂ ಆ ಪ್ರಶ್ನೆ ಬರಲಾರದು."

" ಬರಲಾರದು—ಅಷ್ಟು ನಂಬಿಕೆಯೇ ನಿನಗೆ ? "

—ಮತ್ತೆ ಕೇಳಿದ ಶ್ರೀಧರ.

" ನನ್ನ, ಕಾತ್ಯಾಯನಿಯ ವಿಷಯವನ್ನೆಲ್ಲಾ ನಿನಗೆ ಹೇಳಿದೇನೆ. ನೀನೇ ಹೇಳು, ಕಾತ್ಯಾಯನಿ ಹಾಗೆ ಮಾಡಬಹುದೆಂದು ತೋರುತ್ತದೆಯೇ ನಿನಗೆ ?"

" ನೀನು ಕಾತ್ಯಾಯನಿಯ ವಿಷಯದಲ್ಲಿ ಹೇಳಿದುದನ್ನೆಲ್ಲಾ ಕೇಳಿದ ಮೇಲೇ ಈ ಪಶ್ನೆಯನ್ನು ಕೇಳಬೇಕು ಎನಿಸಿದ್ದು."

" ಏಕೆ ಏಕೆ ಕಾತ್ಯಾಯನಿ ನಂಬಿಕೆಗೆ ಅರ್ಹಳಲ್ಲ ಎಂದು ನಿನ್ನ ಅಭಿಪ್ರಾಯವೇ ? ಉಳಿದ ಹೆಂಗಸರಂಥ ಬಣ್ಣದ ಚಿಟ್ಟೆಯಲ್ಲ ನನ್ನ ಕಾತ್ಯಾಯನಿ."

" ಆ ಮಾತನ್ನು ನಾನೂ ಒಪ್ಪುತ್ತೇನೆ."

" ಮತ್ತೆ ? "

" ಅದಕ್ಕಾಗಿಯೇ ಆ ಪ್ರಶ್ನೆಯನ್ನು ಕೇಳಬೇಕಾಗಿ ಬಂತು. ನಿನ್ನ ಕಾತ್ಯಾಯನಿ ಉಳಿದ ಹೆಂಗಸರಂತೆಯೇ ಆಗಿದ್ದಿದ್ದರೆ ಈ ಪ್ರಶ್ನೆಯನ್ನೇ ನಾನು ಎತ್ತುತ್ತಿರಲಿಲ್ಲ. ಆದರೆ ಅವಳಲ್ಲಿ ಉಳಿದವರಲ್ಲಿಲ್ಲದ ಏನೋ ಒಂದು ವಿಶಿಷ್ಟ ಶ್ರದ್ಧೆ ಎನಿಸುತ್ತದೆ. ಅವಳು ನಿನ್ನನ್ನು ಪ್ರೀತಿಸುತ್ತಾಳೆ ಎಂದು ಹೇಳಿದೆ, ನಿಜ. ಆದರೆ ನಿನ್ನ ಹಾಗೆ ಆ ಪ್ರೀತಿಯೇ ಅವಳ ಬಾಳ ಸರ್ವಸ್ವವಾಗಬಹುದು ಎಂದು ನನಗೆ ನಂಬಿಕೆಯಾಗುವುದಿಲ್ಲ ಆದುದರಿಂದ ಈ ಪ್ರಶ್ನೆಯನ್ನು ಕೇಳುತ್ತಿದ್ದೇನೆ ರಾಜಶೇಖರ್. ಕಾತ್ಯಾಯನಿ ನಿನ್ನ ಬಾಳ ಒಲವಲ್ಲ, ಸಮಸ್ಯೆ. ಅಷ್ಟೇ ಅಲ್ಲ— ಬಹು ದೊಡ್ಡ ಸವಾಲು. ಆ ಸವಾಲನ್ನು ಎದುರಿಸುವ ಶಕ್ತಿಯನ್ನು ನೀನು

ಗಳಿಸಿಕೊಂಡಿಲ್ಲ. ಅದಕ್ಕೇ ನನಗೆ ಭಯವಾಗುತ್ತದೆ. ನಿನ್ನ ಆದರ್ಶ - ನಿನ್ನ ಕಾತ್ಯಾಯನಿ ಎರಡನ್ನೂ ಉಳಿಸಿಕೊಳ್ಳುವ ಬಲ ನಿನಗಿದೆಯೋ ಇಲ್ಲವೋ ಎಂದು."

"ಆ ನಂಬಿಕೆ ನಿನಗಲ್ಲದಿರಬಹುದು ಶ್ರೀಧರ. ಆದರೆ – ನನಗಿದೆ."

"ಇದೆಯೇ ?"

"ಇದೆ."

"ನಿನ್ನ ನಂಬಿಕೆ ಸತ್ಯವಾಗಲಿ ಎಂದು ನಾನು ಬಯಸುತ್ತೇನೆ ರಾಜಶೇಖರ. ನನ್ನ ಬಾಳಿನ ದಾರಿ ಏನೋ ಆಯಿತು. ಆದರೆ ನಿನ್ನದು ಸಫಲವಾಗಲಿ. ಆದರೆ ಒಂದು ಮಾತನ್ನು ನೆನಪಿನಲ್ಲಿಡು ರಾಜಶೇಖರ. ನಾನು ನಿನಗೆ ಬರೆದ ಆ ಕೊನೆಯ ಕಾಗದ ನಿನಗೆ ನೆನಪಿದೆಯೇ ?"

"ಯಾವುದು ?"

"ನಿನ್ನ ಬಾಳು ಸುಖಮಯವಾಗಬೇಕೆಂದಿದ್ದರೆ ನಿನ್ನ ಜೀವನದಿಂದ ದಿನಪತ್ರಿಕೆಯನ್ನು ಬಹಿಷ್ಕರಿಸು ಎಂದು ಬರೆದದ್ದು."

"ನಿಜ. ನೆನಪಿದೆ."

"ಇದ್ದರೆ – ನಿನ್ನ ಬಾಳಿನಂತೆ ಕಾತ್ಯಾಯನಿಯ ಬಾಳನಲ್ಲೂ ಆ ಸರ್ಪ ನುಸುಳದಂತೆ ನೋಡಿಕೋ. ಅಷ್ಟೇ ನಾನು ಹೇಳಬೇಕಾದುದು. ಅಲ್ಲ— ಇನ್ನೊಂದಿದೆ."

"ಏನು ?"

"ನೀನು ಭಿಕಾರಿಯಾಗಿ ನಿನ್ನ ಓದು ಮುಗಿಸಬೇಕಾಗಿಲ್ಲ."

"ಅಂದರೆ—?"

"ಅಂದರೆ—ನನ್ನ ಬಳಿ ಕೊಂಚ ಹಣವಿದೆ. ತೆಗೆದುಕೊಂಡು ಹೋಗು ನಿನ್ನ ಅಗತ್ಯವೆಲ್ಲವನ್ನೂ ಪೂರೈಸುವಷ್ಟು ಹಣ ನನ್ನ ಬಳಿ ಇಲ್ಲ ಆದರೆ ಮೈಸೂರಿನಲ್ಲಿ ಕಾಲಿಡುತ್ತಿದ್ದ ಹಾಗೇ ಭಿಕ್ಷಾನ್ನದ ಪಾತ್ರೆ ಹಿಡಿದುಕೊಂಡು ಹೋಗದಿರಲು ಎಷ್ಟು ಬೇಕೋ ಅಷ್ಟಿದೆ—ಸುಮಾರು ಇನ್ನೂರು— ಮುನ್ನೂರು ರುಪಾಯಿ."

—ಶ್ರೀಧರನ ಮಾತು ಕೇಳಿ ನನಗೆ ಆಶ್ಚರ್ಯವಾಯಿತು. ಅವನ ಮಾತಿಗೆ ಉತ್ತರ ಕೊಡದೆ ಸುಮ್ಮನೆ ಅವನ ಮುಖವನ್ನೇ ನೋಡಿದೆ.

"ಏಕೆ, ಹಾಗೆ ನೋಡುತ್ತೀ ರಾಜಶೇಖರ. ಅಷ್ಟು ಹಣ ಕೊಡುವ ಯೋಗ್ಯತೆ ನನಗಿಲ್ಲವೆಂದೇ ? ನಾನಾಗಲೇ ಹೇಳಲಿಲ್ಲವೇ ? ನಾನು ಈಗ ಅರ ಹೊಟ್ಟೆಂ ಕೂಲಿಯ ಪತ್ರಿಕೋದ್ಯೋಗಿಯಲ್ಲ—ಈಗ ನನ್ನ ಬಳಿ ಹಣವಿದೆ.

ಬೇಕಿದ್ದರೆ ಹೆಚ್ಚು ಗಳಿಸುವ ದಾರಿಯೂ ಗೊತ್ತಿದೆ. ಮಿಲಿಟರಿ ಕಂಟ್ರಾಕ್ಟರ್ ಸೋಹನ್‌ಲಾಲ್‌ನ ಸ್ನೇಹವಿರುವವರೆಗೂ, ಹಣಕ್ಕೇನೂ ನನಗೆ ಕೊರತೆ ಯಾಗುವುದಿಲ್ಲ."

ನಿನಗೆ ಕೊರತೆಯಾಗದಿರಲಿ ಬಿಡಲಿ. ಆದರೆ – ನಿನ್ನ ಮನೆಯವರಿಗೆ ಹಣಬೇಡವೇ ? "

" ನನ್ನ ಮನೆಯವರಿಗೆ ? "

" ಹೌದು."

" ಅಂಥವರು ಯಾರೂ ಇಲ್ಲ."

" ನಿನ್ನ ತಾಯಿ ..."

" ನನ್ನ – ತಾಯಿ....ತಂಗಿ . ಎಲ್ಲಾ ಇದ್ದರು , ಈಗಿಲ್ಲ. ನನ್ನ ಆದ ರ್ಶವಾದದ ಬೆಂಕಿಯಲ್ಲಿ ಅವರೆಲ್ಲಾ ಸುಟ್ಟು ಬೂದಿಯಾದಮೇಲೇ ನನಗೆ ಬದು ಕುವ ದಾರಿ ಯಾವುದೆಂದು ತಿಳಿದದ್ದು. ಆದರ್ಶವಾದ – ಯಾವ ವಾದವೂ– ಹೊಟ್ಟೆಗೆ ಅನ್ನವಲ್ಲ, ರೋಗಕ್ಕೆ ಔಷಧವಲ್ಲ. ನಾನು ಮಾಡಿದ ಮೂರ್ಖತನ ನೀನೂ ಮಾಡಬೇಡ. ನಾನೀಗ ಪ್ರತಿದಿನ 'ಹಾಲಿವುಡ್ ಸಿಟಿ'ಯಲ್ಲಿ ಜೂಜಿಗೆ ಎಷ್ಟು ಹಣ ಖರ್ಚುಮಾಡುತ್ತೇನೆ ಎಂಬುದು ನಿನಗೆ ತಿಳಿಯದು."

" ಏನಾದರೂ ಮಾಡು—ಅದು ನಿನ್ನ ಹಣ."

" ಆಹುದಲ್ಲವೇ ? ಹಾಗಾದರೆ ಇದನ್ನೂ ಮಾಡುತ್ತೇನೆ. ಇದೂ ಒಂದು ಜೂಜು ನೀನು ಜೂಜಿನ ಕುದುರೆ. ನಿನ್ನ ಆದರ್ಶದ ಪಂದ್ಯದಲ್ಲಿ ಗೆಲ್ಲುತ್ತೀಯೋ ಸೋಲುತ್ತೀಯೋ ಎಂದು ಈ ಪಣ ಕಟ್ಟಿದೇನೆ. ನೀನು ಬಾಯಿಬಿಟ್ಟು ಆಡದಿದ್ದರೂ ನಿನ್ನ ಮನಸ್ಸಿನ ಹೋರಾಟವನ್ನು ನಾನು ಬಲ್ಲೆ. ದಾನವೆಂದು ನಿನಗೆ ನಾನು ಹಣ ಕೊಡುತ್ತಿಲ್ಲ. ದಾನ ಕೊಡುವುದು, ಸ್ವೀಕ ರಿಸುವುದು ಎರಡೂ ಅಪಮಾನವೇ. ಇದು ಬರೀ ಪಂದ್ಯದ ಹಣ. ನೀನು ಜೂಜಿನಲ್ಲಿ ಗೆದ್ದರೆ ಹಿಂದಿರುಗಿ ಬರಲಿ, ಇಲ್ಲವಾದರೆ ಹೋಗಲಿ, ' ಇ ೀ ತೆಗೆದುಕೋ '

—ಎಂದು ಶ್ರೀಧರ ತನ್ನ ಜೇಬಿನಲ್ಲಿದ್ದ ನೋಟಿನ ಕಂತೆಯನ್ನು ತೆಗೆದು ನನ್ನ ಕೈಯಲ್ಲಿಟ್ಟು—

" ಅಂದ ಹಾಗೆ ರಾಜಶೇಖರ್, ಮರೆತುಬಿಟ್ಟಿದ್ದೆ. ಈ ದಿನ ಒಬ್ಬ ರಿಗೆ ನಾಲ್ಕು ಬಾಟಲು ವಿಸ್ಕಿ ತಂದುಕೊಡುತ್ತೇನೆ ಎಂದು ಹೇಳಿದ್ದೆ. ಈಗಲೇ ಹೋಗದಿದ್ದರೆ ಮತ್ತೆ ಸೋಹನ್‌ಲಾಲನನ್ನೂ ಸೂಳಗೇರಿಯಲ್ಲಿ ಹುಡುಕಬೇ ಕಾದೀತು ನಾನು ಬರುತ್ತೇನೆ ಹಾ—ಮರೆಯಬೇಡ ನಾನು ಕೊಟ್ಟಿದ್ದು

ಹಣ ; ಆದರ್ಶದ ಗೊಬ್ಬರವಲ್ಲ. ಎಚ್ಚರವಾಗಿಟ್ಟುಕೋ ”

—ಎಂದು ಹೇಳಿ ಎದ್ದು ಹೊರಡಲು ಸಿದ್ಧನಾಗಿ—

“ ಮರೆಯಬೇಡ ರಾಜಶೇಖರ್. ನಿನ್ನ ಆದರ್ಶ ನಿನ್ನದಲ್ಲ, ನನ್ನದು— ಬರುತ್ತೇನೆ. ಮೈಸೂರಿಗೆ ಯಾವಾಗಲಾದರೂ ಬಂದಾಗ ಸಿಗುತ್ತೇನೆ. ಕಾತ್ಯಾಯನಿಯ ಕನಸಿನಲ್ಲಿ ನನ್ನನ್ನು ಮರೆಯಬೇಡ ”

—ಎಂದವನೇ ಕೂಡಲೇ ಸಾನಲ್ಲಿರುವುದನ್ನೂ ಮರೆತವನಂತೆ ಹೊರಟುಹೋದ.

ಶ್ರೀಧರ ನನ್ನೆದುರಿಗೆ ಹಣವಿಟ್ಟುದು ನನಗೆ ನೆನಪಿನಲ್ಲಿರಲಿಲ್ಲ. ಆವನಾಡಿದ ಮಾತುಗಳು ನನ್ನ ಮಿದುಳಿನಲ್ಲಿ ಸುತ್ತುತ್ತಿದ್ದವು.

ಶ್ರೀಧರ—ಸೋಹನ್‌ಲಾಲ್ – ವಿಸ್ಕಿ ಬಾಟಲು – ಸೂಳೆಗೇರಿ - ‘ ನಿನ್ನ ಆದರ್ಶ ನಿನ್ನದಲ್ಲ ನನ್ನದು ? ’ ಕಾತ್ಯಾಯನಿಯ ಬಾಳಿನಲ್ಲಿ ದಿನ ಪತ್ರಿಕೆಯ ಸರ್ಪ ಸುಳಿಯದಿರಲಿ. ‘ಆದರ್ಶ–ಕಾತ್ಯಾಯನಿ ಎರಡನ್ನೂ ನೀನು ಗೆಲ್ಲಲಾರೆ.’

ಮಿದುಳು ಬಿರುಗಾಳಿಗೆ ಸಿಕ್ಕಿದ ಗಾಳಿಪಟದಂತೆ ಹೊಯ್ದಾಡುತ್ತಿತ್ತು

ಶ್ರೀಧರ ಹೀಗೇಕಾದ – ಅವನ ಮಾತಿಗೆ ಏನು ಬೆಲೆ ?—

ಹಾಗೇ ಚಿಂತಿಸುತ್ತಾ ಕುಳಿತಿದ್ದೆ. ಪಾರ್ಕಿನಲ್ಲಿ ಬೀಸಿದ ಗಾಳಿಗೆ ಸಿಕ್ಕಿ ಒಂದು ನೋಟು ಮೇಲೆ ಹಾರಿದಾಗ, ಅವನು ಕೊಟ್ಟ ಹಣದ ಎಚ್ಚರವಾಯಿತು.

‘ ಅದು ಹಣ – ಆದರ್ಶದ ಗೊಬ್ಬರವಲ್ಲ ’

—ಎಂದ ಮಾತು ನೆನೆಪಿಗೆ ಬಂದಿತು ಹಣವನ್ನು ತೆಗೆದು ಜೇಬಿನಲ್ಲಿಟ್ಟೆ ಆದರೆ ಮಾತು ಎದೆಯಲ್ಲಿ ಕೋಲ್ಮಿಂಚಾಡಿಸುತ್ತಿತ್ತು

ಶ್ರೀಧರ ಹೊರಟುಹೋದ. ಅವನ ಮೇಲೆ ನನಗೆ ಸಿಟ್ಟು ಬಂದಿತ್ತು. ಹಣವನ್ನು ತೆಗೆದು ಜೇಬಿನಲ್ಲಿಟ್ಟುಕೊಂಡು, ಪಾರ್ಕಿನಿಂದ ಎದ್ದು ಇಳಿದುಕೊಂಡಿದ್ದ ಹೋಟಲಿನತ್ತ ನಡದೆ.

ನನಗೆ ಸಿಟ್ಟು ಬಂದಿತ್ತು. ಹಾಗೇ, ಏಕೋ ದುಃಖವೂ ಆಗಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ಅರ್ಥವಾಗದ ಭಯವೊಂದು ನನ್ನ ಸುತ್ತಲ ಗಾಳಿಯಲ್ಲಿ ಸುಳಿಯುತ್ತಿತ್ತು.

೭

ಬಿರುಗಾಳಿಯಂತೆ ಅನಿರೀಕ್ಷಿತವಾಗಿ ಬಂದು ಸುಳಿದುಹೋದ ಶ್ರೀಧರ.

ಅವನ ಅನಿರೀಕ್ಷಿತ ಆಗಮನದಿಂದ ತಾತ್ಕಾಲಿಕವಾಗಿ ನನಗಿದ್ದ ಹಣದ ತೊಂದರೆ ತಪ್ಪಿತ್ತು. ಮೈಸೂರಿಗೆ ಹೋದ ಕೂಡಲೇ ಮುಂದೇನು ಎಂಬ ಪ್ರಶ್ನೆ ಕೊಂಚ ದೂರವಾಗಿತ್ತು. ಆದರೂ ಆ ಹಣದಿಂದ ಏಕೋ ಅಸಮಾಧಾನ

ವಾಗಿತ್ತು. ನಾನು ಅವನಿಗೆ ನನ್ನ ಜೀವನದ ವಿಷಯವೆಲ್ಲವನ್ನೂ ಹೇಳಿದ್ದೆ. ಅವನು ಏನೂ ಹೇಳಿರಲಿಲ್ಲ, ಆದರೂ ಅಲ್ಲಲ್ಲಿಯ ಒಂದು ಮಾತು, ಯಾವುದೋ ಆರೆಗತ್ತಲಿನಲ್ಲಿ ಅವನ ಜೀವನದ ಚಿತ್ರವನ್ನು ಕಾಣಿಸಿ, ಆ ಭಯಂಕರ ಪರಿವರ್ತನೆ ನನ್ನನ್ನು ಬೆದರಿಸುವಂತಿತ್ತು. ಅದರಷ್ಟೇ, ಅವನಾಡಿದ ಮಾತುಗಳು.

ಆದರೆ ಆ ಯೋಚನೆಯಲ್ಲೇ ಮುಳುಗಿರಲು ಅವಕಾಶವಿರಲಿಲ್ಲ. ಮೈಸೂರು ಕರೆಯುತ್ತಿತ್ತು. ಕಾಲೇಜೋ – ಕಾತ್ಯಾಯನಿಯೋ ನಾನು ಹೇಳಲಾರೆ – ಶ್ರೀಧರ ಹಣ ಕೊಟ್ಟಾಗಿನಿಂದ, ಮೈಸೂರಿನ ಕರೆ ಬಲವಾಗಿತ್ತು.

ಬೆಂಗಳೂರಿನಿಂದ ಮೈಸೂರಿಗೆ ಹಿಂದಿರುಗಿದೆ – ಆದರೆ ಹಿಂದಿರುಗಿದಾಗ ಹಿಂದೆ ಇದ್ದ ಉತ್ಸಾಹವಿರಲಿಲ್ಲ. ಬಿಟ್ಟು ಬಂದ ತಂದೆಯ ನೆನಪು ಮನಸ್ಸಿನಲ್ಲಿ ತುಂಬಿ ಎದೆಯನ್ನು ಬರಿದಾಗಿಸಿತ್ತು.

ಮೈಸೂರಿಗೆ ಬಂದ ಒಂದೆರಡು ದಿನಗಳಲ್ಲೇ ಪರೀಕ್ಷೆಯ ಫಲಿತಾಂಶ ತಿಳಿಯಿತು. ತೇರ್ಗಡೆಯಾಗಿದ್ದೆ. ಆ ವಿಷಯವನ್ನು ತಿಳಿಸಿ ಚಿಂತಾಮಣಿಗೆ ಕಾಗದ ಬರೆದೆ–ಈ ಸುದ್ದಿಯನ್ನು ಕೇಳಿಯಾದ ಸಂತೋಷದಲ್ಲಾದರೂ ಉತ್ತರ ಬರಬಹುದೆಂದು. ಆದರೆ ಉತ್ತರ ಬರಲಿಲ್ಲ

ಕಾಗದ ಬರೆವಾಗ ತುಂಬಿ ಬಂದ ಎದೆ ಮತ್ತೊಮ್ಮೆ ಬರಿದಾಯಿತು. ಏಕೋ... ಏಕೋ... ಆ ಚಿಂತೆಗೆ ತೆರುವಷ್ಟು ಕಾಲವಿಲ್ಲದ್ದೇ ಮೇಲಾಯಿತು ಎನಿಸಿತು.

ಕೊನೆಯ ವರ್ಷದ ಓದು, ಅದರ ಸಮಸ್ಯೆ ಉಳಿದೆಲ್ಲವನ್ನೂ ನುಂಗಿ ನಿಂತಿತು.

ಎಲ್ಲ ಚಿಂತೆಯನ್ನೂ—ಕಾತ್ಯಾಯನಿಯದನ್ನೂ.

ನಿಜ. ಕಾತ್ಯಾಯನಿಯ ಚಿಂತೆ ನನ್ನನ್ನು ಬಿಟ್ಟಿರಲಿಲ್ಲ. ನಾನೇ ಅದನ್ನು ದೂರವಿಟ್ಟಿದ್ದೆ. ಊರಿನಲ್ಲಾದ ಘಟನೆ, ನನ್ನ ಬಯಕೆಯನ್ನು ಹಿಮ್ಮೆಟ್ಟಿಸುತ್ತಿತ್ತು. ಅವಳನ್ನು ಕಂಡಾಗ ಚಿಂತಾಮಣಿಯಲ್ಲಿ ನಡೆದುದನ್ನು ಹೇಳುವುದೇ ? ಹೇಳಿದರೆ ಅದರ ಪರಿಣಾಮ ಏನಾದೀತು ?

ಈ ಚಿಂತೆ ನನ್ನನ್ನು ಏಕೋ ತಡೆಯುತ್ತಿತ್ತು.

ಆ ಚಿಂತೆ – ಅದರೊಂದಿಗೆ ಉಳಿದ ಚಿಂತೆಗಳೂ.

ಮೈಸೂರಿಗೆ ಹಿಂದಿರುಗಿದವನೇ ಹಾಸ್ಟಲಿನ ರೂಮನ್ನು ಖಾಲಿ ಮಾಡಿ, ಶಿವರಾಂಪೇಟೆಯಲ್ಲಿ ಸಣ್ಣದೊಂದು ರೂಮನ್ನು ಬಾಡಿಗೆಗೆ ತೆಗೆದುಕೊಂಡು, ಅಡಿಗೆಗೆ ಬೇಕಾದ ಸಾಮಾನುಗಳನ್ನು ಕೊಂಡು ಹೊಸ ಸಂಸಾರ ಆರಂಭ ಮಾಡಿದೆ.

ರೇಷನ್ ಕಾರ್ಡನ್ನು ದೊರಕಿಸಿ, ಡಿಪೋದಿಂದ ತಂದ ಅಕ್ಕಿಯನ್ನು ಇದ್ದಿಲ ಒಲೆಯಲ್ಲಿ ಬೇಯಿಸಿ, ತಿನ್ನಲು ಬಾಯಿಗಿಟ್ಟುಕೊಂಡಾಗ ಹೊಸ ಜಗತ್ತೇ ನನ್ನಿದುರು ಕಣ್ಣು ತೆರೆಯಿತು. ಹೋಟಲಿನಿಂದ ತಂದ ಹುಳಿಯಲ್ಲಿ ಮುಳುಗಿದ ಅನ್ನ ಗಂಟಲಿನ ಒಳಕ್ಕೆ ಇಳಿಯಲಿಲ್ಲ. ಇನ್ನೆಷ್ಟು ದಿನ ಈ ಅನ್ನ ತಿನ್ನುವುದು ಎನಿಸಿದಾಗ – ಮೈಸೂರು ಬಿಟ್ಟು ಓಡಿಹೋಗಬೇಕೆನ್ನುವಷ್ಟು ಗಾಬರಿಯ್ಯಾಯಿತು.

ಮರುಗಳಿಗೆಯೇ ನಾಚಿಕೆಯಾಯಿತು – ಈ ಅನ್ನಕ್ಕೆ ಹೆದರಿದರೆ ನನ್ನ ಓದು ಮುಗಿಸುವ ಆಸೆ ಎಲ್ಲಿಯದು ? ಅನ್ನ ನಿಧಾನವಾಗಿ ಗಂಟಲಿನಲ್ಲಿಳಿಯಿತು. ಉಳಿದ ಸಮಸ್ಯೆಗಳು ಮೇಲೆ ಬಂದವು. ಹೇಗಾದರೂ ಇದೊಂದು ವರ್ಷ ಮುಗಿದರೆ, ಅಲ್ಲಿಗೆ ಎಲ್ಲ ಸಮಸ್ಯೆಗಳೂ ತೀರ್ಮಾನವಾಗುತ್ತವೆ ಎಂಬ ಭರವಸೆಯಿಂದ ಓದಲಾರಂಭಿಸಿದೆ.

ದಿನಚರಿಯ ಚಕ್ರತೀರ್ಥದಲ್ಲಿ ಮುಳುಗಿದೆ–ಉಳಿದುದೆಲ್ಲವನ್ನೂ ಮರೆತು.

ಎಲ್ಲವನ್ನೂ ಮರತೆ ಎಂದು ಹೇಳಲಾರೆ – ಮತ್ತೆ ಮತ್ತೆ ಕಾತ್ಯಾಯನಿಯ ನೆನಪು ಮರುಕಳಿಸುತ್ತಿತ್ತು. ತನ್ನ ಓದು ಮುಗಿಸಿ, ಚೆಲುವಾಂಬಾ ಆಸ್ಪತ್ರೆಯಲ್ಲಿ 'ಹೌಸ್ – ಸರ್ಜನ್' ಆಗಿ ಕೆಲಸ ಮಾಡುತ್ತಿದ್ದ ಕಾತ್ಯಾಯನಿ ದಿನಕ್ಕೊಂದು ಬಗೆಯ ಬೆಳಕಾಗಿ ಕಂಡು ನನ್ನೆದೆಯನ್ನು ಸೆಳೆಯುತ್ತಿದ್ದಳು. ಹಗಲು ಹಾಸ್ಪಿಟಲ್ ಡ್ಯೂಟಿಗೆ ಹೋದಾಗ ಕಣ್ಣಿಗೆ ಬೀಳುತ್ತಿದ್ದಳು. ಆದರೆ ನಾನೇ ತಪ್ಪಿಸಿಕೊಳ್ಳುತ್ತಿದ್ದೆ – ನನ್ನ ಎದೆಯೇ ನನ್ನ ವಿರುದ್ಧ ದಂಗೆ ಎದ್ದರೂ.

ಇದು ಅವಳಿಗೂ ಅರಿವಾಗದಿರಲಿಲ್ಲ. ಒಂದು ದಿನ ಕಂಡೂ ಕಾಣದಂತೆ ಹೋಗುತ್ತಿದ್ದ ನನ್ನನ್ನು ಕೂಗಿ ನಿಲ್ಲಿಸಿದಳು, ನಿಂತೆ. ಆದರೆ ಅವಳ ಮುಖ ನೋಡುವ ಧೈರ್ಯವಾಗಲಿಲ್ಲ. ಅವಳ ಕಣ್ಣಲ್ಲಿಯ ನೋವು ನನ್ನನ್ನು ನಿಂದಿಸಿ ಕೇಳುತ್ತಿತ್ತು. ' ಹೀಗೇಕೆ ಮಾಡುತ್ತಿದೀಯ ? ' ಎಂದು. ನಮ್ಮ ಸುತ್ತಮುತ್ತ ಓಡಾಡುತಿದ್ದ ಜನಗಳ ನಡುವೆ, ಅವಳು ಕೇಳಲಾಗದ ನೂರು ಪ್ರಶ್ನೆಗಳನ್ನು, ಅವಳ ಕಣ್ಣ ಕೆಳರೆಪ್ಪೆಯಡಿಯಲ್ಲಿ ಹುದುಗಿದ್ದ ಕಂಬನಿ ಕೇಳುತ್ತಿತ್ತು. ಕಾತ್ಯಾಯನಿಯೂ ಕೇಳಿದಳು—

" ಊರಿನಿಂದ ಎಂದು ಬಂದಿರಿ ರಾಜಶೇಖರ್ ? "

" ಹದಿನೈದು ದಿನವಾಯಿತು."

" ಹದಿನೈದು ದಿನವಾಯಿತೇ ? ಹಾಗಾದರೆ........"

" ಏನೋ ಗದ್ದಲದಲ್ಲಿ ಬರಲಾಗಲಿಲ್ಲ........"

" ಏನೋ ಗದ್ದಲವಾಗಿದೆ. ನನಗೂ ತಿಳಿಯಿತು. ಇಲ್ಲವಾದರೆ ನೀವು

ಮೈಸೂರಿಗೆ ಬಂದಕೂಡಲೇ ಬರದೆ ಇರುತ್ತಿರಲಿಲ್ಲ. ನನ್ನನ್ನು ನೋಡುವುದೂ ಬೇಸರವಾಗಿದೆಯೋ ಏನೋ. ಆದರೂ... ........"

"ಪ್ಲೀಸ್ ............ಕಾತ್ಯಾಯನಿ... .. ...."

—ಅವಳ ಮಾತು ಕೇಳಿ ಎದೆಗೆ ಚೂರಿ ತಿವಿದಂತಾಗಿ ಹೇಳಿದೆ.

"ನನ್ನ ಮೇಲೆ, ಹಾಗಾದರೆ ಬೇಸರವಿಲ್ಲ."

"ಇಲ್ಲ."

"ನಂಬಲೇ ?"

"ಖಂಡಿತವಾಗಿಯೂ"

"ಹಾಗಾದರೆ ಈ ದಿನ ಸಂಜೆ ಸಿಗುತ್ತೀರಾ ?....... ....ಬರಲು ಸಾಧ್ಯವಿಲ್ಲವೆಂದರೆ ಇಲ್ಲ ಎಂದು ಬಿಡಿ. ತೊಂದರೆ ಕೊಡುವುದಿಲ್ಲ."

"ಇಲ್ಲ, ಬರುತ್ತೇನೆ."

"ಮನೆಯಲ್ಲಿ ಕಾಯಲೇ ?"

"ಹೂ."

"ನಾನು ಕಾಯುತ್ತಿರುತ್ತೇನೆ."

—ಆ ಮಾತಿನಲ್ಲಿ 'ನಾನು' ಎನ್ನುವುದನ್ನು ಒತ್ತಿಹೇಳಿ, ಮಾತನ್ನು ಮುಗಿಸಿ ಹೊರಟುಹೋದಳು ಕಾತ್ಯಾಯನಿ.

ಆ ದಿನ ಸಂಜೆ ಕಾತ್ಯಾಯನಿಯನ್ನು ನೋಡಿದೆ – ಕಾತ್ಯಾಯನಿಯೂ ನನ್ನನ್ನು ನೋಡಿದಳು, ನೂರು ಪ್ರಶ್ನೆ ಕೇಳುವ ನೋಟದಿಂದ. ಏನು ಉತ್ತರ ಕೊಡಲಿ ? ಆ ನೋಟಕ್ಕೆ ಉತ್ತರ ಕೊಡುವ ಶಕ್ತಿ ಇರಲಿಲ್ಲ ನನಗೆ. ಸುಮ್ಮನೆ ಅವಳ ಮುಖವನ್ನೇ ನೋಡುತ್ತಾ ನಿಂತಿದ್ದೆ. ಅದನ್ನು ಕಂಡು ಕಾತ್ಯಾಯನಿ, ತನ್ನ ವ್ಯಾನಿಟಿಬ್ಯಾಗ್‌ನಲ್ಲಿದ್ದ ಕನ್ನಡಿಯನ್ನು ತೆಗೆದುಕೊಂಡು, ಅದರಲ್ಲಿ ತನ್ನ ಮುಖವನ್ನು ನೋಡಿಕೊಂಡು, ಮತ್ತೆ ನನ್ನತ್ತ ನೋಡಿ—

"ಊಹೂ. ಅಂಥದೇನೂ ಮಾರ್ಪಾಟಾಗಿಲ್ಲ."

—ಎಂದಳು. ಅವಳ ಮಾತು, ರೀತಿ ಒಂದೂ ನನಗೆ ಅರ್ಥವಾಗಲಿಲ್ಲ.

"ಇದೇನು ?"

—ಎಂದು ಕೇಳಿದೆ.

"ಏನಿಲ್ಲ – ನನ್ನ ಮುಖ ಇದ್ದಕ್ಕಿದ್ದ ಹಾಗೇ ನೋಡಲಾಗದಷ್ಟು ವಿಕಾರವಾಗಿದೆಯೇನೋ ಅನಿಸಿ ಭಯವಾಯಿತು. ಅದಕ್ಕೇ ಕನ್ನಡಿಯಲ್ಲಿ ನೋಡಿಕೊಂಡೆ. ಸಧ್ಯ ಹಾಗೇನೂ ಆಗಿಲ್ಲ."

—ನಗುವ ಪ್ರಯತ್ನ ಮಾಡಿ ಹೇಳಿದಳು ಕಾತ್ಯಾಯನಿ. ಕಂಬನಿಗಿಂತ ಕಠೋರವಾಗಿತ್ತು ನಗು.

" ನಿನ್ನ ಮುಖ ವಿಕಾರವಾಗಿದೆಯೆಂದು ಯಾರಾದರೂ ಹೇಳಿದರೇ ? "

" ಓ–ಮಾತೂ ನೆನಪಿದೆ."

" ಏಕೆ ? "

" ಏನಿಲ್ಲಾ – ನನ್ನ ನೆನಪಿನೊಂದಿಗೆ ಮಾತನಾಡುವ ನೆನಪೂ ಹೋಯಿ ತೇನೋ ಎಂದು ಹೆದರಿದ್ದೆ. ನಾನು ಮರೆತುಹೋದರೂ ಮಾತಾದರೂ ನೆನಪಿದೆಯಲ್ಲ, ನನ್ನ ಅದೃಷ್ಟ."

" ನಾನು ನಿನ್ನನ್ನು ಮರೆತಿದ್ದೆ ಎಂದು ಯಾರು ಹೇಳಿದರು ? "

" ಕಳೆದ ಹದಿನೈದು ದಿನಗಳು "—ಎಂದವಳೇ ತಟಕ್ಕನೆ ಉದ್ರಿಕ್ತಳಾಗಿ ಕೇಳಿದಳು ಕಾತ್ಯಾಯನಿ – " ರಾಜಾ, ನಿಜ ಹೇಳು–ನಿನಗೇನಾಗಿದೆ ? ಏಕೆ ಬರಲಿಲ್ಲ ? ನೀನೀಗ ಎಲ್ಲಿದೀಯ ? "

" ಎಲ್ಲಿ ? "

—ಅವಳ ಮಾತೇ ಅರ್ಥವಾಗದವನಂತೆ ಕೇಳಿದೆ ನಾನು.

" ನಿಜ. ಎಲ್ಲಿ ? "

" ಎಲ್ಲಿ ಅಂದರೆ–ಇಲ್ಲೇ. ಹಾಸ್ಟಲಿನಲ್ಲಿ – ಮತ್ತೆಲ್ಲಿ ? "

" ನನ್ನೊಂದಿಗೂ ಸುಳ್ಳಾಡಬೇಡ ರಾಜಾ."

" ನಾನು - ಸುಳ್ಳಾಡಿದೆನೆ ? "

" ನಿಜ - ಸುಳ್ಳು. ನೀನೀಗ ಹೇಳಿದುದು ಸುಳ್ಳು."

" ಯಾವುದು ? "

" ಹಾಸ್ಟಲಿನಲ್ಲಿದೇನೆ ಎಂದದ್ದು. ನೀನು ಹಾಸ್ಟಲಿನಲ್ಲಿಲ್ಲ."

" ಹಾಗೆಂದು ಯಾರು ಹೇಳಿದರು ? "

" ನಿನ್ನ ರೂಂ ಮೇಟ್. ಊರಿನಿಂದ ಬರುತ್ತಿದ್ದ ಹಾಗೆಯೇ ಹಾಸ್ಟ ಲನ್ನು ಬಿಟ್ಟು ಬೇರೆ ಎಲ್ಲೋ ರೂಂ ಮಾಡಿಕೊಂಡಿದೀಯ ಎಂದು ಹೇಳಿದ."

" ಹಾಸ್ಟಲಿಗೆ ನೀನೇ ಹುಡುಕಿಕೊಂಡು ಹೋಗಿದ್ದೆಯಾ ? "

—ನಾಚಿಕೆಯಿಂದ ಮುಖ ತಗ್ಗಿಸಿ ಕೇಳಿದೆ.

" ಊಹೂ. ಆ ಅದೃಷ್ಟವೊಂದು ತಪ್ಪಿತು. ಪರೀಕ್ಷೆಯಲ್ಲಿ ತೇರ್ಗಡೆ ಯಾದ ಸಂತೋಷಕ್ಕೆ ಅಣ್ಣ ಒಂದು ದಿನ ಮನೆಯಲ್ಲಿ ಕೆಲವರು ಬೇಕಾದವ ರನ್ನು ಊಟಕ್ಕೆ ಕರೆದಿದ್ದರು. ನೀನು ಊರಿಗೆ ಬಂದದ್ದು ಗೊತ್ತಿದ್ದುದರಿಂದ ಆ ದಿನ ನಿನ್ನನ್ನು ಕರೆತರಲು ಅಣ್ಣ ಹಾಸ್ಟಲಿಗೆ ಕಾರು ಕಳಿಸಿದ್ದರು. ಆಗ ಗೊತ್ತಾಯಿತು. ಹಾಸ್ಟಲನ್ನು ಬಿಟ್ಟದ್ದೇಕೆ, ಇಲ್ಲಿಗೆ ಬರುವುದನ್ನು ಬಿಟ್ಟದ್ದೇಕೆ? ಈಗ ಎಲ್ಲಿದೀಯಾ ? "

ಮತ್ತೆ ಅದೇ ಪ್ರಶ್ನೆ – ಮಾಲೆ ಮಾಲೆಯಾಗಿ. ಏನು ಉತ್ತರ ಕೊಡಲಿ? ನಡೆದುದನ್ನು ಹೇಳಲೇ? ಬೇಡವೇ ಹಾಗಾದರೆ ಏನು ಹೇಳಲಿ?

ಅವಳ ಮಾತಿಗೆ ನಾನು ಉತ್ತರ ಕೊಡದೆ ಕುಳಿತುದನ್ನು ಕಂಡು ಕಾತ್ಯಾಯನಿಯ ಮನಸ್ಸಿಗೆ ನೋವಾಗಿರಬೇಕು. ಅವಳ ಮುಖವನ್ನೇ ನೋಡುತ್ತಾ ಕುಳಿತಿದ್ದ ನನಗೆ ಕಾಣುವಂತೆಯೇ ಒಂದು ಗಳಿಗೆ ಅವಳ ಮುಖದಲ್ಲಿದ್ದ ಉತ್ತರವನ್ನು ಅರಿಯಬೇಕೆನ್ನುವ ಉತ್ಸಾಹ ಕ್ರಮೇಣ ಕಡಮೆಯಾಗಿ ಕಣ್ಣಲ್ಲಿ ವ್ಯಥೆ ತುಂಬಿ, ಧ್ವನಿಯಲ್ಲಿ ನಿರಾಶೆ ತೇಲಿ ಬಂದು ಹೇಳಿದಳು :

" ಹೋಗಲಿ ಬಿಡು; ಅಷ್ಟು ಚಿಂತೆಯೇಕೆ? ಹೇಳುವ ಮನಸ್ಸಿಲ್ಲವಾದರೆ ಹೇಳಬೇಡ. ಇಷ್ಟಂತೂ ನಿಜ. ನೀನು ಹೇಳದಿದ್ದರೂ ನನಗೆ ಅರ್ಥವಾಗುತ್ತದೆ. ನೀನು ಮೊದಲಿನ ರಾಜಶೇಖರನಲ್ಲ."

" ನಿನ್ನ ಊಹೆ ತಪ್ಪು ಕಾತ್ಯಾಯನಿ. ಜಗತ್ತಿನಲ್ಲಿ ಏನೋ ಬದಲಾಗಬಹುದು. ಆದರೆ ನನ್ನ ನಿನ್ನ ನಡುವಿನ ಭಾವನೆ ಮಾತ್ರ ಎಂದೂ ಬದಲಾಗದು."

" ನಿಜ – ಆ ಮಾತನಾಡುವ ರೀತಿ ಎಂದೂ ಬದಲಾಗುವುದಿಲ್ಲ. ನಾನೂ ಬಲ್ಲೆ."

—ತೀವ್ರ ನಿರಾಶೆಯ ಕಹಿ ಧ್ವನಿಯಲ್ಲಿ ಹೇಳಿದಳು ಕಾತ್ಯಾಯನಿ.

" ಅಂದರೆ—"

" ಎಲ್ಲ ಪ್ರೇಮಿಗಳೂ ಆಡುವ ಮಾತು ಅದೇ ರಾಜಶೇಖರ್ – ಆದರೆ ಆ ಮಾತಿಗೆ ಕೃತಿಯ ನಿಕಷಕ್ಕೆ ನಿಲುವ ಶಕ್ತಿ ಇರುವುದಿಲ್ಲ."

" ನಿಜವಾಗಿಯೂ – ನೀನು ಏನೋ ಅಪಾರ್ಥ ಮಾಡಿಕೊಂಡು ಮಾತಾಡುತ್ತಿದೀಯ."

" ಏನೂ ಇಲ್ಲ. ನಿನ್ನ ನಡತೆಯೇ ನಾನು ಅಪಾರ್ಥ ಮಾಡಿಕೊಂಡಿಲ್ಲ ಎನ್ನುವುದಕ್ಕೆ ಸಾಕ್ಷಿ. ನನ್ನದು ಅಪಾರ್ಥವಾಗಿದ್ದರೆ – ನೀನು ಯಾವುದೋ ಮಾತನ್ನು ನನಗೆ ಹೇಳಲು ಇಷ್ಟು ಹಿಂಜರಿಯುತ್ತಿರಲಿಲ್ಲ."

" ನಾನು ಹಿಂಜರಿಯುತ್ತಿಲ್ಲ ಕಹಿಯಾದ ಮಾತನ್ನು ಹೇಗೆ ಹೇಳಲಿ ಎಂದು ಯೋಚಿಸುತ್ತಿದ್ದೇನೆ."

" ಕಹಿಯಾದ ಮಾತಾದರೆ ಆಗಲಿ, ಅದು ಸತ್ಯವೇ ತಾನೆ?"

" ಹೌದು."

" ಹಾಗಾದರೆ ಹೇಳಲು ಯೋಚನೆ ಏಕೆ?"

" ನಿನ್ನ ಮನಸ್ಸಿಗೇಕೆ ನೋವುಂಟುಮಾಡಲಿ ಎಂದು...."

" ನೋವು—ಅಂದರೆ—ಆ ಸತ್ಯವನ್ನು ಅರಿಯುವ ಶಕ್ತಿ, ಬಲ ಇರುವುದು

ನಿನಗೊಬ್ಬನಿಗೇ ಎಂದುಕೊಂಡಿದೀಯ ರಾಜ ? ಸತ್ಯವನ್ನು ಅರಿಯುವ ಶಕ್ತಿ ಇರುವುದು ಕೆಲವರಿಗೆ ಮಾತ್ರ ಎನ್ನುವುದು ಬೂರ್ಜ್ವಾ ಬುದ್ಧಿ. ಸುಳ್ಳು ಹೇಳಲು ಹಿಂಜರಿಯಬೇಕೇ ಹೊರತು ಸತ್ಯವನ್ನು ಹೇಳಲು ಏಕೆ ಹಿಂಜರಿಯಬೇಕು ? ಹಾಗೂ – ಅದು ನನಗೆ ಸಂಬಂಧವಿಲ್ಲದ್ದು ಎಂದರೆ ಹೇಳಬೇಡ ನಾನು ನಿನ್ನನ್ನು ಕೇಳುವುದಿಲ್ಲ. ಆಯಿತೇ ?—"

" ನಿನಗೆ ಸಂಬಂಧವಿರುವ ಮಾತೇ ಇದು."

" ಹಾಗಾದರೆ ಹೇಳು."

ಹೇಳು....ಹೇಳು ...ಹೇಳು....ಅದೇ ಮಾತು. ಹೇಳದೆ ಬೇರೆ ದಾರಿಯೇ ಇದ್ದಂತಿರಲಿಲ್ಲ. ಏನಾದರಾಗಲಿ–ಹೇಳು. ಆ ನಿರ್ಧಾರಕ್ಕೆ ಬಂದು ಹೇಳಿದೆ—

" ಯಾವುದು ಆಗಬಾರದು, ಯಾವ ಸಮಸ್ಯೆ ಇಷ್ಟು ಬೇಗ ಬರಬಾರದು. ಎಂದು ನಾನು ಬಯಸುತ್ತಿದ್ದೆನೋ, ಅದೇ ಇಂದು ಕೈಮೀರಿ ಘಟಿಸಿ, ನನ್ನ ಬಲವನ್ನು ಪರೀಕ್ಷಿಸುತ್ತಿದೆ ಕಾತ್ಯಾಯನಿ."

" ಏನಾಯಿತು ? "

" ಒಂದು ದಿನ ನಮ್ಮಿಬ್ಬರ ಮಾತು ಬಂದಾಗ ನೀನೇ ಹೇಳಿದ್ದೆ – ' ನಮ್ಮಿಬ್ಬರ ವಿವಾಹಕ್ಕೆ ನಿಮ್ಮ ತಂದೆ ಒಪ್ಪಬಹುದೇ ? ' ಎಂತ ಆದಿನ ನಿನ್ನ ಸಂಶಯ ನಿರಾಧಾರವಾದದ್ದು ಎಂದು ನಾನು ಅಲ್ಲಗಳೆದಿದ್ದೆ, ಆದರೆ ಇಂದು –"

" ಇಂದು ನನ್ನ ಸಂಶಯವೇ ಸತ್ಯವಾಯಿತು, ಅಲ್ಲವೇ ? "

—ನನ್ನ ಮಾತನ್ನು ತಾನೇ ಮುಗಿಸಿ ಕೇಳಿದಳು ಕಾತ್ಯಾಯನಿ.

" ಹೂ."

" ಇದು ಹೀಗೆ ಆಗಬಹುದು ಎಂದು ನಾನು ಊಹಿಸಿದ್ದೆ. ಆದರೆ ಆ ಮಾತೇಕೆ ಬಂತು ಈಗ ? ಇಷ್ಟೇಕೆ ಅವಸರವಾಗಿ ಅವರ ಮುಂದೆ ಈ ಮಾತ ನ್ನಾಡಿದೆ ನೀನು ? ಆ ಮಾತು ತಾನಾಗಿಯೇ ಬರುವಾಗ ಬರಲಿ ಎನ್ನುವಷ್ಟು ತಾಳ್ಮೆ ಇರಲಿಲ್ಲವೇ ? "

—ಕೊಂಚ ಉದ್ರಿಕ್ತಳಾಗಿ ಕೇಳಿದಳು.

" ನಿನ್ನ ಊಹೆ ತಪ್ಪು ಕಾತ್ಯಾಯನಿ, ನಾನಾಗಿಯೇ ಆ ಮಾತನ್ನೆತ್ತಲಿಲ್ಲ. ಅದನ್ನು ಎತ್ತುವುದೂ ನನಗೆ ಬೇಕಾಗಿರಲಿಲ್ಲ."

" ಮತ್ತೆ....? "

" ಬೇಡವೆಂದರೂ ಬಿಡದೆ ತಾನಾಗಿಯೇ ಬಂದಿತು ಅದು...."

—ಎಂದು ಚಿಂತಾಮಣಿಯಲ್ಲಿ ನಡೆದುದೆಲ್ಲವನ್ನೂ ವಿವರಿಸಿ ಹೇಳಿದೆ. ನನ್ನ ಮಾತನ್ನು ಕೇಳಕೇಳುತ್ತಾ ಅವಳ ಮುಖ ಗಂಭೀರವಾಯಿತು. ಸ್ವಲ

ಹೊತ್ತು ಏನೂ ಮಾತನಾಡದೆ ಸುಮ್ಮನೆ ಕುಳಿತಿದ್ದು ಬಳಿಕ ಕೇಳಿದಳು—

" ಮುಂದೇನು ಮಾಡುತ್ತೀಯ ? "

" ಯಾವುದು ? "

" ನಿನ್ನ ಜೀವನದ ಸಮಸ್ಯೆ...."

" ಒಂದು ಗಳಿಗೆ ನನಗೂ ಅದು ಸಮಸ್ಯೆಯಾಗೇ ಕಂಡಿತ್ತು. ಆದರೆ ಈಗ ಹಾಗಿಲ್ಲ."

" ಅಂದರೆ ..."

" ಮುಂದೇನು ಮಾಡಬೇಕು ಎಂದು ನನಗೀಗ ಅರಿವಾಗಿದೆ. ನೀನೇ ಹೇಳಿದ ಹಾಗೆ ನಮ್ಮಿರ್ವರ ಒಲವು ಶಾಶ್ವತವಾಗಿರುವಾಗ ನಮ್ಮ ವಿವಾಹದ ಪ್ರಶ್ನೆ ಇಂದು ಮುಖ್ಯವಾಗಿಲ್ಲ. ಮೊದಲು ನನ್ನ ಓದು ಮುಗಿಯಬೇಕು. ನಿಜ. ಈಗ ನನ್ನ ಬಗ್ಗೆ ನನ್ನ ತಂದೆಯ ಮನಸ್ಸು ತುಂಬಾ ಬಿರುಸಾಗಿದೆ. ಆದರೆ ಅದು ಕಡೆಯ ವರೆಗೂ ಹಾಗೇ ಉಳಿದೀತು ಎಂದು ನಾನು ನಂಬಲಾರೆ. ಇಂದಲ್ಲ ನಾಳೆ, ಅವರು ಮನಸ್ಸು ಬದಲಿಸುವುದು ಖಂಡಿತ. ಆ ನಂಬಿಕೆ ನನಗಿದೆ ಆದರೂ....ಆದರೂ....ಉಳಿದೆಲ್ಲದಕ್ಕಿಂತ ಹೆಚ್ಚಾಗಿ ಅವರು ಈಗ ಹೀಗೇಕೆ ಮಾಡಿದರು ಎನ್ನುವುದೇ ನನಗೆ ಅರ್ಥವಾಗದಾಗಿ, ಉಳಿದೆಲ್ಲದಕ್ಕಿಂತ ಅದೇ ನನಗೆ ಹೆಚ್ಚು ನೋವನ್ನುಂಟುಮಾಡುತ್ತಿದೆ ಕಾತ್ಯಾಯನಿ. ಜೀವನದಲ್ಲಿ ಎಂಥ ಕಷ್ಟವನ್ನೂ ನಾನು ಭರಿಸಬಲ್ಲೆ. ಆದರಿ ಈ ನೋವು ದುರ್ಭರವಾಗಿದೆ."

" ಅದು ಅಗತ್ಯವಲ್ಲ."

ಏಕೆ ? "

" ನಿನಗಾಗಿರುವ ನೋವು ನಿನ್ನ ತಂದೆಯಿಂದಾದುಲ್ಲ ರಾಜಶೇಖರ – ನಿನ್ನಿಂದಲೇ ನಿನಗೆ ಆದುದು ; ನಿನ್ನ ಭ್ರಮೆಯೇ ನಿನ್ನ ಎದೆಯನ್ನು ಇರಿದ ಚೂರಿ."

" ಅಂದರೆ...."

" ಇಂದಿನ ಪರಿಸ್ಥಿತಿಯಲ್ಲಿ ಅವರು ಹೀಗಲ್ಲದೆ ಬೇರೆ ಯಾವ ರೀತಿಯಲ್ಲೂ ನಡೆದುಕೊಳ್ಳಲಾರರು ಎಂಬ ನಗ್ನಸತ್ಯವನ್ನು ನೀನು ಅರ್ಥ ಮಾಡಿಕೊಂಡಿದ್ದರೆ ಇಷ್ಟು ತೊಳಲಾಡುವ ಅಗತ್ಯವೇ ಬೀಳುತ್ತಿರಲಿಲ್ಲ. ನಿನ್ನ ತಂದೆ—ನನ್ನ ಅಣ್ಣ – ಸುತ್ತಲ ಜನ ಎಲ್ಲರೂ ಒಂದೇ ಅಚ್ಚಿನಲ್ಲಿ ಎರಕ ಹೊಯ್ದ ಮನಸ್ಸುಗಳು – ಎಲ್ಲ ಕಣ್ಣುಗಳು ಧರಿಸಿರುವ ಕನ್ನಡಕವೂ ಒಂದೇ ಬಣ್ಣದ್ದೇ. ಅವರು ಹೀಗಲ್ಲದೆ ಬೇರೆ ಯಾವ ರೀತಿಯಲ್ಲೂ ನಡೆದುಕೊಳ್ಳಲಾರರು. ಬೇರೆ ರೀತಿ ಯೋಚಿಸುವ ಶಕ್ತಿಯೇ ಅವರಿಗಿಲ್ಲ. ಗುಲಾಮಗಿರಿಗೆ ಒಗ್ಗಿದ ಅವರ ಮನಸ್ಸು ಸ್ವತಂತ್ರವಾಗಿ

ಯೋಚಿಸಲಾರವು. ಅಷ್ಟೇ ಅಲ್ಲ–ಸ್ವತಂತ್ರವಾಗಿ ಯೋಚಿಸುವುದನ್ನು ಸಹಿಸಲೂ ಆರವು ಆದ್ದರಿಂದ ವೃಥಾ ನಿರೀಕ್ಷೆಯನ್ನು ನಿರ್ಮಿಸಿಕೊಂಡು, ಅದಕ್ಕೆ ಬಲಿಯಾಗುವುದೇಕೆ ? ”

“ ಇಲ್ಲ ಕಾತ್ಯಾಯನಿ, ನನ್ನ ತಂದೆಗೆ ನನ್ನ ಮೇಲೆ ಎಷ್ಟು ಪ್ರೀತಿ ಇದೆ ಎಂಬುದನ್ನು ನೀನರಿಯೆ.”

“ ನಿಜ. ನನಗದು ಗೊತ್ತಿಲ್ಲ. ಆದರೆ ನೀನು ಈ ವ್ಯಕ್ತಿಗತವಾದ ಆಲೋಚನೆಯನ್ನು ಬಿಟ್ಟಷ್ಟೂ ನಿನ್ನ ಬಾಳ ಮಾರ್ಗ ಸುಗಮವಾಗುತ್ತದೆ. ರಾಜಾ, ನಿನ್ನ ತಂದೆ, ಅವರು ಹೀಗೇ ಮಾಡುತ್ತಾರೆ ಎಂದು ನಿರೀಕ್ಷಿಸಿದರೆ ನೀನು ತಪ್ಪು ಮಾಡುತ್ತೀಯೆ. ಅವರ ಮನಸ್ಸು ಆ ರೀತಿ ಪರಿವರ್ತನೆಯಾಗಲಾರದು.”

“ ಅಂದರೆ – ಅವರ ಹೃದಯ ಪರಿವರ್ತನೆಯಾಗಲು ಏನಾಗಬೇಕು ? ”

“ ಆಗಬೇಕೇ – ಇಂದಿನ ಸಮಾಜವೇ ಬದಲಾಗಬೇಕು. ವ್ಯಕ್ತಿಯ ಜೀವನಕ್ಕೆ ಸಂಪ್ರದಾಯದ ಸಂಕೋಲೆಯನ್ನು ಬಿಗಿದ ಇಂದಿನ ಸಮಾಜ ಪದ್ಧತಿಯೇ ಬದಲಾಗಬೇಕು. ಆದಾದಾಗ ಎಲ್ಲವೂ ತನ್ನಷ್ಟಕ್ಕೆ ತಾನೇ ಬದಲಾಗುತ್ತದೆ. ಇಂದಿನ ಕುಟುಂಬ ಪದ್ಧತಿಯೇ ತಪ್ಪಾದದ್ದು. ಹೆಂಡತಿ, ಮಕ್ಕಳು, ಎಲ್ಲವೂ ಯಾವುದೋ ತನ್ನ ನಿರೀಕ್ಷೆಗೆ ತಕ್ಕಂತೆ, ನಡೆಯುವ ಸಾಧನ ಸಾಮಗ್ರಿಗಳು ಎನ್ನುವ ಭಾವನೆ ಕುಟುಂಬದ ಯಜಮಾನನಲ್ಲಿ ಬೆಳೆದು ಬಂದಿದೆ. ಈ ಮರಿ ಪಾಳೇಗಾರತನದ ಭಾವನೆ ನಿರ್ನಾಮವಾಗದ ಹೊರತು, ಸಮಾಜದ ದೃಷ್ಟಿಯಲ್ಲಿ ಸಮೂಹಿಕ ಪರಿವರ್ತನೆಯಾಗದ ಹೊರತು, ನನ್ನಂಥ, ನಿನ್ನಂಥ ವ್ಯಕ್ತಿಗಳ ಆಕಾಂಕ್ಷೆ, ಆದರ್ಶಗಳಿಗೆ ಏನೂ ಬೆಲೆಯಿಲ್ಲ – ಎಲ್ಲವೂ ಭ್ರಮೆಯ ಬುದ್ಬುದಗಳಾಗುತ್ತವೆ. ಇಷ್ಟು ದಿನವಾದರೂ ಈಮಾತು ನಿನಗೆ ಮನವರಿಕೆಯಾಗಿಲ್ಲ ಅದಕ್ಕೇ ಇಷ್ಟು ವ್ಯಥೆ ಪಡುತ್ತೀಯೆ.”

“ ಅಂತೂ ಎಲ್ಲವೂ ರಾಜಕೀಯವೇ ಎನ್ನುವ ಮಟ್ಟಕ್ಕೆ ಇಳಿಸಿಬಿಟ್ಟೆ ನೀನು.”

“ ನಾನು ಇಳಿಸುವುದೇನು – ಅದು ಇರುವುದೇ ಹಾಗೆ. ಈ ಅರಿವು ಬಂದಾಗಲೇ ನಮ್ಮ ಉದ್ಧಾರವಾಗುವುದು. ರಾಜಕೀಯ ಪ್ರಜ್ಞೆ, ಸಮಾಜ ಪ್ರಜ್ಞೆ ಇಲ್ಲದಿರುವುದೇ ನಮ್ಮ ಅವನತಿಯ ಮೂಲಕಾರಣ ರಾಜಶೇಖರ ”

“ ನನ್ನ ಉದ್ಧಾರಕ್ಕೆ ಅದಾವುದೂ ಅಗತ್ಯವಿಲ್ಲವೆಂದೇ ನನಗೆ ತೋರುತ್ತದೆ.”

“ ಅಂದರೆ—ಯಾವುದರಿಂದ ನಿನ್ನ ಉದ್ಧಾರವಾಗುತ್ತದೆ ? ”

“ ನಿನ್ನಿಂದ – ನಿನ್ನ ಒಲವಿನಿಂದ. ಅದೊಂದು ಶಾಶ್ವತವಾಗಿದ್ದರೆ

ಉಳಿದಾವುದರ ಚಿಂತೆಯೂ ನನಗಿಲ್ಲ."

" ಇದೇನು ತಮಾಷೆಯೇ, ಅಥವಾ—"

" ತಮಾಷೆಯಲ್ಲ ಸೀರಿಯಸ್ ಆಗಿ ಹೇಳುತ್ತೇನೆ ಕಾತ್ಯಾಯನಿ. ಮಾನವನ ಸಮಸ್ಯೆಗಳೆಲ್ಲಾ ರಾಜಕೀಯವಲ್ಲ. ರಾಜಕೀಯವೇ ಎಲ್ಲ ಮಾನವ ಸಮಸ್ಯೆಗಳಿಗೂ ಪರಿಹಾರಕವಲ್ಲ. ನನ್ನ ತಂದೆಗೆ ಸಂಪ್ರದಾಯದ ಗರ ಬಡಿದಿದೆ ಎಂದೆ. ಇರಬಹುದು ಆದರೆ ನಿನ್ನ ದೃಷ್ಟಿಯೂ ಅಷ್ಟೇ ದೋಶಗ್ರಸ್ತ."

" ರಾಜಾ ರಾಜಾ . ಎಚ್ಚರವಾಗಿದ್ದು ಈ ಮಾತು ಹೇಳುತ್ತಿದೀಯಾ ನೀನು ? "

" ನಿಜ ಎಚ್ಚರವಾಗಿದ್ದೇ ಹೇಳುತ್ತಿದೇನೆ ಕಾತ್ಯಾಯನಿ. ಯಾವುದು ಸುಳ್ಳೋ, ಯಾವುದು ಸತ್ಯವೋ, ಯಾವುದು ಭ್ರಮೆಯೋ, ಯಾವುದು ವಾಸ್ತವಿಕವೋ – ಅದು ನನಗೆ ತಿಳಿಯದು. ಅದನ್ನು ತಿಳಿಯಬೇಕಾದ ಅಗತ್ಯವೂ ನನಗಿಲ್ಲವೆಂದೇ ಅನಿಸುತ್ತದೆ ನಿಜವಾಗಿಯೂ ನನ್ನಷ್ಟು ರಾಜಕೀಯವೂ ನನಗೆ ಗೊತ್ತಿಲ್ಲ ಆದರೆ ಇಷ್ಟು ಮಾತ್ರ ನಾನು ಬಲ್ಲೆ—ಸಮಾಜವೋ, ರಾಜಕೀಯವೋ, ಸಂಪ್ರದಾಯವೋ ಯಾವುದೂ ಯಾವ ರೂಪಿನಲ್ಲೂ ನಮ್ಮೀರ್ವರ ನಡುವೆ ಬರುವುದು ನನಗೆ ಸಹಿಸುವುದಿಲ್ಲ. ನನ್ನ ದಾರಿಯಲ್ಲಿ ಅದು ಅಡ್ಡವಾದರೆ ಅದನ್ನು ಬಿಟ್ಟು ನಡೆಯುತ್ತೇನೆ. ಅದರ ಗೋಜಿಲಿಕ್ಕೆ ತಲೆ ಮಾರುವುದು ನನಗೆ ಇಷ್ಟವಿಲ್ಲ ಕಾತ್ಯಾಯನಿ. ನಾನು ನಿನ್ನನ್ನು ಪ್ರೀತಿಸಿದೆ. ಯಾವ ರಾಜಕೀಯ, ಪ್ರಜ್ಞೆ, ಸಮಾಜವಾದವೂ ಅದಕ್ಕೆ ಪ್ರೇರಕವಾಗಲಿಲ್ಲ. ನೀನೂ ನನ್ನನ್ನು ಪ್ರೀತಿಸಿದೆ. ನಿಜ – ಇದೊಂದೇ ಸತ್ಯ ಕಾತ್ಯಾಯನಿ. ಉಳಿದುದೆಲ್ಲವೂ ಉರಿದು ಹೋಗಲಿ – ನೀನೊಬ್ಬಳಿದ್ದರೆ ಸಾಕು ಇಂದಿನ ನೂರು ಯೋಚನೆಯನ್ನು ಎದುರಿಸಲು ನಿನ್ನ ಒಲವು ನನಗೆ ಶಕ್ತಿ ನೀಡಿದೆ ನಾಳೆ ಬರುವುದನ್ನು ಎದುರಿಸಲೂ ಅದೇ ಒಲವೇ ಸಾಕು "

" ನಾನು ನಾನು ...ನನ್ನ ಒಲವು . .ಅದೇ ನಿನ್ನ ಬಾಳಿನ ಪರಮ ಗುರಿಯೇ ರಾಜಾ ? "

—ಯಾವುದೋ ಅಗೋಚರವಾದ ಬೆಂಕಿ ಅವಳ ಹೃದಯಕ್ಕೆ ಸೋಕಿದಂತಿತ್ತು ಅವಳ ಧ್ವನಿಯ ರೀತಿ. ಅವಳು ಆಡಿದ ಮಾತನ್ನು ಕೇಳಿದಾಗ ನನಗೆ ಶ್ರೀಧರನಾಡಿದ ಮಾತು ತಟಕ್ಕನೆ ನೆನಪಿಗೆ ಬಂತು–

' ಕಾತ್ಯಾಯನಿಯೇ ನಿನ್ನ ಆದರ್ಶವೇ ? '

ಕಾತ್ಯಾಯನಿಯು ಕೇಳುವ ಪ್ರಶ್ನೆಯೂ ಅದೇ ಒಂದು ಗಳಿಗೆ ಚಿಂತಿಸಿದೆ – ಯಾವುದು ನನ್ನ ಆದರ್ಶ ? ಡಾಕ್ಟರಾಗುವುದು ನಿಜ – ಡಾಕ್ಟರಾಗು

ವುದು. ಹಾಗಾದರೆ ಕಾತ್ಯಾಯನಿ ? ನಿಜ – ಕಾತ್ಯಾಯನಿ ಆದರ್ಶವಲ್ಲ. ಆ ಆದರ್ಶ ಸಾಧನೆಗೆ ಬಲ ಕೊಡುವ ಶಕ್ತಿ ದೇವತೆ. ಆ ಮಾತು ಮನವರಿಕೆಯಾಗಿ ಹೇಳಿದೆ :

" ನಿಜ ಹೇಳಲೇ ಕಾತ್ಯಾಯನಿ ? "

" ಹೇಳು – ಈದಿನ ಏನಾದರಾಗಲಿ ನಿಜವನ್ನೇ ಹೇಳು."

" ನಿನ್ನ ಬಳಿ ಸುಳ್ಳು ಹೇಳುವ ಅಗತ್ಯ ನನಗೆಂದೂ ಬಂದಿಲ್ಲ ಕಾತ್ಯಾಯನಿ – ನೀನು ನನ್ನ ಬಾಳಿನ ದೇವತೆ. ನಿನ್ನಲ್ಲಿ ಸುಳ್ಳು ನುಡಿಯಲಾರೆ. ನಾನು ಈ ವೈದ್ಯ ವಿದ್ಯೆಯನ್ನೇ ಆರಿಸಿಕೊಂಡುದು ಏಕೆ ಎಂದು ನಿನಗೆ ಹೇಳಿದೇನೆ. ಆದಷ್ಟು ಮಟ್ಟಿಗೆ ರೋಗಿಗಳ ಸೇವೆ ಮಾಡಿ, ಸಾವಿನ ಕತ್ತಲು ಕವಿದ ಹೃದಯಕ್ಕೆ ಜೀವದ ಬೆಳಕು ನೀಡಬೇಕೆಂಬುದೇ ನನ್ನ ಆದರ್ಶ. ಆ ಆದರ್ಶಕ್ಕೆ ನನ್ನ ಬಾಳು ಮೀಸಲು."

" ಹಾಗಾದರೆ ನಿನ್ನ ಬಾಳಿನಲ್ಲಿ ನನಗೇನು ಸ್ಥಾನ ? "

" ನೀನೇ....ನೀನೇ....ನೀನೇ ನನ್ನ ಬಾಳು ; ಸಾಧನೆಯ ದಾರಿಯಲ್ಲಿ ನಡೆವ ಶಕ್ತಿ ನೀಡುವ ಮಹಾಶಕ್ತಿ."

" ಆದರೆ........ಆದರೆ........ನನ್ನ ವಿಚಾರವೇ ನಿನಗೆ ಸೇರದಲ್ಲ."

" ನಿನ್ನ ವಿಚಾರ ನಿನ್ನದು. ಅದು ನನಗೆ ಒಪ್ಪಿಗೆಯಾಗಬಹುದು ಬಿಡಬಹುದು. ಆದರೆ ನೀನು ನನ್ನ ಬಾಳಿನ ಬುನಾದಿ."

" ಅಂದರೆ–ನನ್ನ ವಿಚಾರದ ರೀತಿ ನಿನಗೆ ಒಪ್ಪಿಗೆ ಇಲ್ಲವೇ ? "

" ಇಲ್ಲ."

"ಯೋಚನೆ ಮಾಡಿ ಹೇಳುತ್ತಿದೀಯಾ ರಾಜಾ ಇದನ್ನು."

" ನಿನ್ನಲ್ಲಿ... ....ಯೋಚನೆ ಮಾಡದೆ ಮಾತಾಡುತ್ತೇನೆಯೇ ಕಾತ್ಯಾಯನಿ. ನಿನ್ನ ಕಣ್ಣನೋಟವೇ ನನಗೆ ಮಹಾದಾಜ್ಞೆಯಾಗಿರುವಾಗ ನೀನು ಆಡುವ ಮಾತನ್ನು ವಿಚಾರ ಮಾಡುವುದಿಲ್ಲವೇ ? ಮಾಡಿದೇನೆ - ಒಂದಲ್ಲ, ಹಲವು ಬಾರಿ. ಒಮ್ಮೊಮ್ಮೆ ನೀನು ಆ ಮಾತಾಡಿದಾಗಲೂ ವಿಚಾರ ಮಾಡಿ ನೋಡಿದೇನೆ."

" ಅಷ್ಟು ಯೋಚನೆ ಮಾಡಿಯೂ ಇದೇ ನಿರ್ಧಾರವೇ ? "

" ನಿಜ."

" ಆದರೆ........ನಾನು ಹೇಳುವುದು ಸುಳ್ಳೇ ? "

" ಅಲ್ಲ. ಸುಳ್ಳೆಂದು ನಾನು ಹೇಳಲಾರೆ. ಸುಳ್ಳೆಂದು ಹೇಳುವುದಕ್ಕೂ ಸಾಕಷ್ಟು ಅಭ್ಯಾಸ, ಅನುಭವ ಬೇಕು. ನನಗೆ ಅವೆರಡೂ ಇಲ್ಲ. ಆದರೆ

ನೀನಾಡುವ ಮಾತು ನನ್ನ ಬಾಳಿಗೆ ಎಷ್ಟು ಅನ್ವಯಿಸುತ್ತದೋ ಆ ಮಟ್ಟಿಗೆ ವಿಚಾರಮಾಡಿ ನೋಡಿದ್ದೇನೆ – ಆದರೆ ನನಗದು ಅನ್ವಯಿಸುತ್ತದೆ ಎಂದು ನಂಬಿಕೆಯಾಗಿಲ್ಲ."

"ಈ ನಿರ್ಧಾರದ ಬಲದಮೇಲೆ ನಿನ್ನ ಆದರ್ಶ ಸಾಧಿಸಲು ಯತ್ನಿಸುತ್ತೀಯಾ ?"

"ನನ್ನ ಆದರ್ಶಕ್ಕೂ–ಈ ವಿಚಾರಕ್ಕೂ ಏನೂ ಸಂಬಂಧವಿಲ್ಲ."

"ಅಂದರೆ – ಇಂದು ಸಮಾಜ ಇರುವ ಈ ರೀತಿಯಲ್ಲೇ ನಿನ್ನ ಆದರ್ಶ ಸಾಧನೆ ಆಗುತ್ತದೆ ಎಂದೇ ನಂಬಿದೀಯಾ ?"

"ಆಗುತ್ತದೆ. ಯಾವ ಬಗೆಯ ಸಮಾಜವೂ ಡಾಕ್ಟರು ರೋಗಿಗೆ ಔಷಧ ಕೊಡುವುದನ್ನು ತಡೆಯಲಾರದು. ರೋಗಿಗೆ ಕುಲವಿಲ್ಲ, ವರ್ಗವಿಲ್ಲ, ರಾಜಕೀಯ ಪಕ್ಷವಿಲ್ಲ. ಆ ರೋಗಕ್ಕೆ ಚಿಕಿತ್ಸೆ ಮಾಡುವ ಡಾಕ್ಟರನಿಗೂ ಅಷ್ಟೇ. ಡಾಕ್ಟರಾಗುವವನಿಗೆ ಬೇಕಾದುದು ವೈದ್ಯವಿದ್ಯೆ, ರಾಜಕೀಯ ಪ್ರಜ್ಞೆಯಲ್ಲ. ರಾಜಕೀಯ ರಾಜಕಾರಣಿಗಳ ಕೆಲಸ. ನನಗೂ ನಿನಗೂ ಅದರ ಚಿಂತೆ ಏಕೆ ಕಾತ್ಯಾಯನಿ. ರಾಜಕಾರಣಿಗಳು ಬೇಕಾದ ರಾಜಕಾರಣದ ಮಾತಾಡಲಿ, ಎಂಥ ಸಮಾಜ ಬೇಕೋ ನಿರ್ಮಾಣ ಮಾಡಲಿ. ನಾನು, ನೀನು ರೋಗಿಗಳಿಗೆ ಚಿಕಿತ್ಸೆ ಮಾಡೋಣ. ಅದೊಂದು ಚಿಂತೆಯೇ ನಮಗೆ ಸಾಲದೇ ? ಇಂದಿನ ಸಮಾಜ ಪರಿಸ್ಥಿತಿಯಲ್ಲಿ ಎಲ್ಲ ಆದರ್ಶವೂ ಭ್ರಮೆ ಎಂದು ನೀನು ಹೇಳಿದೆ. ನಿಜ. ಶ್ರೀಧರನೂ ಅದೇ ಮಾತನ್ನೇ ಹೇಳಿದ. ನಾನೂ ಯೋಚನೆ ಮಾಡಿದೆ. ಒಂದು ದಿನ ನನ್ನ ನಿನ್ನ ಪರಿಚಯ ಬೆಳೆವ ಮೊದಲು ಆಸ್ಪತ್ರೆಯಲ್ಲಿ ನಡೆದ ಒಂದು ಘಟನೆ ನಿನಗೆ ನೆನಪಿದೆಯೇ ಕಾತ್ಯಾಯನಿ ?"

"ಯಾವುದು ?"

"ಸೊಂಟದ ಎಲಬುಗಳ ಕ್ಷಯದಿಂದ ಪೀಡಿತಳಾದ ಪಾರ್ಸಿ ಹುಡುಗಿ ಬಂದಿದ್ದಾಗ. ಆ ದಿನ ಅವಳನ್ನು ನೋಡಿ ಕನಿಕರಿಸಿದ ವಿದ್ಯಾರ್ಥಿಯೊಬ್ಬ 'ಹಾಸಿಗೆಯಲ್ಲೂ ಅವಳು ಮಹಾರಾಣಿಯಂತಿದ್ದಾಳೆ. ಪಾಪ – ಆಜೀವ ಪರ್ಯಂತ ಹಾಸಿಗೆಯೇ ಅವಳ ಸಾಮ್ರಾಜ್ಯವಾಯಿತು.' ಎಂದಾಗ ನೀನು 'ಷಿ ಕೆನ್ ಅಫೋರ್ಡ್ ಇಟ್' (ಹಾಗಿರುವ ಶಕ್ತಿ ಅವಳಿಗಿದೆ) ಎಂದೆ–ಅವಳು ಶ್ರೀಮಂತರ ಮಗಳು ಎಂಬುದನ್ನು ಅರಿತು, ನೀನು ಆ ಮಾತು ಆಡಿದೆ. ಆದರೆ ಆ ಮಾತು ಕೇಳಿದಾಗ ಅವಳ ಮುಖ ಹೇಗೆ ಬಾಡಿಹೋಯಿತು – ಅದನ್ನು ನೋಡಲಿಲ್ಲ. ನಾನು ನೋಡಿದೆ – ಕಾತ್ಯಾಯನಿ... ... ಆ ನೋಟ ನನ್ನ ಹೃದಯಕ್ಕೆ ಬೆಂಕಿ ಹೊತ್ತಿಸಿತು. ಎಷ್ಟು ನೊಂದುಕೊಂಡಳೋ ಅವಳು. ಆಗ

ನೀನು ಹಾಗೇಕೆ ಮನ ಸಿಡಿಯುವ ಮಾತಾಡಿದೆ ಎಂದು ನನಗರಿವಾಗಲಿಲ್ಲ. ಆದರೆ ಈಗ ಆಗಿದೆ. ಶ್ರೀಮಂತಿಕೆಯನ್ನು ನೀನು ದ್ವೇಷಿಸುತ್ತೀಯ. ಶ್ರೀಮಂತಿಕೆ ಘೋರ ಅಪರಾಧ ಎಂದು ನಂಬಿದ್ದೀಯ. ಅದು ನಿನ್ನ ರಾಜಕೀಯ ಕಲಿಸಿದ ಪಾಠ. ಆ ದೃಷ್ಟಿದೋಷವೇ ನಾವು ಕೈಕೊಂಡ ವೃತ್ತಿಗೆ ಭಂಗಕಾರಕವಾದ ಆ ಮಾತನ್ನು ನಿನ್ನಿಂದ ಆಡಿಸಿತು. ಆಕೆಯ ರೋಗದ ಭಯಂಕರ ದುರಂತವನ್ನು ಮರೆಯಿಸಿ, ನಿನ್ನಿಂದ ಆ ಅಮಾನುಷವಾದ ಮಾತನ್ನಾಡಿಸಿತು. ನಿನ್ನ ರಾಜಕೀಯ, ಸಮಾಜ, ಪರಿವರ್ತನೆ, ಕ್ರಾಂತಿ ಎನ್ನುವ ಮಾತನ್ನಾಡಿದಾಗಲೆಲ್ಲಾ ನನಗದು ನೆನಪಿಗೆ ಬರುತ್ತದೆ ಕಾತ್ಯಾಯನಿ. ನೆನಪಿಗೆ ಬಂದಾಗ ಮತ್ತೆ ಮತ್ತೆ ಅನಿಸುತ್ತದೆ – ಡಾಕ್ಟರರಿಗಲ್ಲ ಈ ರಾಜಕೀಯ. ಎಲ್ಲ ಮಕ್ಕಳನ್ನೂ ಕಾಪಾಡುವ ತಾಯಿಗೆ ಹೇಗೆ ರಾಜಕೀಯ ಅನಗತ್ಯವೋ ಹಾಗೆ ಡಾಕ್ಟರರಿಗೂ ಕೂಡದು ಎಂದೇ ತೋರುತ್ತದೆ. ಶ್ರೀಧರ ನನಗೆ ಒಂದು ಮಾತನ್ನು ಹೇಳಿದ್ದ ಕಾತ್ಯಾಯನಿ 'ದಿನ ಪತ್ರಿಕೆಯನ್ನು ನಿನ್ನ ಬಾಳಿನಿಂದ ಬಹಿಷ್ಕರಿಸು' ಎಂದು. ನಿನಗೂ ನಾನು ಅದೇ ಮಾತನ್ನೇ ಹೇಳುತ್ತೇನೆ. ನಮ್ಮೀರ್ವರ ಬಾಳು ಬೆಳಗಲು, ನನ್ನ ಆದರ್ಶ ಸಾಧನೆಯಾಗಲು ಈ ರಾಜಕೀಯ ಚರ್ಚೆ, ವಾದ, ವಿವಾದ ಅನಗತ್ಯ ಆ ಚರ್ಚೆಯನ್ನು ಯಾರಾದರೂ ಮಾಡಿಕೊಳ್ಳಲಿ ನಾವಿಬ್ಬರೂ ಡಾಕ್ಟ ರಾಗೋಣ, ಮನುಷ್ಯರಾಗೋಣ, ಪ್ರೇಮಿಗಳಾಗೋಣ. ಯಾವುದೂ ನನ್ನ ನಿನ್ನ ನಡುವೆ ಬರದಿರಲಿ."

"ಎಂದೂ ಅಷ್ಟು ಮಾತನ್ನಾಡದ ನಾನು, ಯಾವುದೋ ಶಕ್ತಿನುಡಿಸಿದಂತೆ ಮಾತನಾಡಿದೆ. ಕಾತ್ಯಾಯನಿ ನನ್ನ ಮಾತಿನ ನಡುವೆ ಒಂದೂ ಮಾತನ್ನಾಡದೆ ಸುಮ್ಮನೆ ಕುಳಿತು ಕೇಳಿದಳು. ನನ್ನ ಮಾತನ್ನು ಕೇಳ ಕೇಳುತ್ತಾ ಅವಳ ಮುಖದ ಕಾಂತಿ ಮಲಿನವಾಗಿ, ಕಣ್ಣಲ್ಲಿ ಹಿಂದೆಂದೂ ಕಾಣದ ಅಪಾರ ನೋವು ತಾನೇ ತಾನಾಗಿ ತುಂಬಿ ಬಂದು ತುಳುಕಿತು. ಯಾವುದೋ ಭಾವಕ್ಕೇ ಬಗ್ಗಿದ ತಲೆಯನ್ನು ತಗ್ಗಿಸಿಯೇ ಕೇಳಿದಳು ಕಾತ್ಯಾಯನಿ.

"ರಾಜಾ, ನಾನು ಸುಖವಾಗಿರುವುದು, ಸಂತೋಷವಾಗಿರುವುದು ನಿನಗೆ ಇಷ್ಟವಿಲ್ಲವೇ ?"

—ಆ ಮಾತಿನ ರೀತಿ ನನ್ನ ಕರುಳಿನಲ್ಲಿ ಕತ್ತರಿಯಾಡಿಸಿತು. ಅನಿರೀಕ್ಷಿತವಾದ ಆ ಪ್ರಶ್ನೆಯನ್ನು ಕೇಳಿ ದಿಗ್ಭ್ರಾಂತನಾಗಿ, ಆ ನೋವು ದಿಗ್ಭ್ರಮೆಯಲ್ಲೇ ಕೇಳಿದೆ—

"ಇದೇನು ಪ್ರಶ್ನೆ ಕಾತ್ಯಾಯನಿ. ನನ್ನ ಪ್ರೀತಿಯಲ್ಲಿ ನಿನಗೆ ನಂಬಿಕೆ ತಪ್ಪಿತೇ ? ನಿನ್ನ ಮೊಗದ ನಗೆಗಾಗಿ ಬಾಳನ್ನೇ ಒಲಿಗೊಡಲು ಸಿದ್ಧನಾ

ನನ್ನಲ್ಲೂ ಸಂಶಯವೇ ? ಹೇಳು....ಹೇಳು ಕಾತ್ಯಾಯನಿ.....ಇಂಥ ಮಾತಾಡಿ ನನ್ನನ್ನೇಕೆ ಇರಿಯುತ್ತೀಯ ? "

" ನಿನ್ನ ಪ್ರೀತಿಯಲ್ಲಿ ನನಗೆ ಸಂಶಯವಿಲ್ಲ ರಾಜಾ ? "

" ಮತ್ತೆ . ಮತ್ತೆ....ಏಕೆ ಆ ಹಾಳು ಪ್ರಶ್ನೆ ? ನನ್ನನ್ನು ಪರೀಕ್ಷಿಸಲೆಂದೇ ? ಎಲ್ಲಿ..... . .ತಲೆ ಎತ್ತಿ ನನ್ನ ಮುಖವನ್ನು ನೋಡು."

ತಲೆ ಬಗ್ಗಿಸಿ ಕುಳಿತ ಅವಳ ಮೊಗವನ್ನು ಎತ್ತಿ ನನ್ನತ್ತ ತಿರುಗಿಸಿಕೊಂಡು ಕೇಳಿದೆ—

" ಹೇಳು ಏಕೆ ಆ ಪ್ರಶ್ನೆ ಕೇಳಿದೆ ? "

" ನಿನ್ನ ಒಲವಿನಲ್ಲಿ ನನ್ನಾಣೆಗೂ ನನಗೆ ಸಂಶಯವಿಲ್ಲ ರಾಜಾ........ ಆದರೂ .......ಆದರೂ........"

" ಏನು........ಆದರೂ........"

" ನೀನು ನನ್ನನ್ನು ಸಂತೋಷಪಡಿಸಲಾರೆ."

" ಏಕೆ ? "

" ನನ್ನ ಪಾಲಿಗೆ ನಿನ್ನ ಸಂತೋಷವೇ ನನ್ನದಾದ್ದರಿಂದ."

" ಅಂದರ . ..."

" ನಿನ್ನನ್ನು ನಾನು ಎಷ್ಟು ಪ್ರೀತಿಸುತ್ತೇನೆ ಎಂದು ನೀನರಿಯೆ ರಾಜಾ ... ....ಊಹೂ........ಏನೂ ಹೇಳಬೇಡ.... ..ನಿನಗೆ ನನ್ನ ಪ್ರೇಮದ ಆಳ ಅರ್ಥವಾಗಿಲ್ಲ ಇಡೀ ಲೋಕವೇ ಸುಖವಾಗಿರಬೇಕೆಂಬು ನನ್ನ ಬಯಕೆ. ಆದರೆ ಎಲ್ಲಕ್ಕಿಂತ ಹೆಚ್ಚಾಗಿ ನೀನು ಸುಖವಾಗಿರಬೇಕೆಂಬುದೇ ನನ್ನ ಹೆಬ್ಬಯಕೆ. ಅದಕ್ಕಾಗಿ ನನ್ನ ಪ್ರಾಣ ಕೊಡಲೂ ಸಿದ್ಧವಾಗಿದೇನೆ."

" ನೀನದನ್ನು ಹೇಳಬೇಕೇ ಕಾತ್ಯಾಯನಿ, ನಾನದನ್ನು ಬಲ್ಲೆ. ನಮ್ಮೀರ್ವರ ಬಾಳೂ ಎರಡಲ್ಲ–ಒಂದೇ."

" ನಿಜ, ರಾಜಾ, ನಿಜ. ಅದಕ್ಕೇ ನೀನು ಬಾಳಿನಲ್ಲಿ ತಪ್ಪುದಾರಿ ಇಟ್ಟಾಗ ನನಗೆ ನೋವಾಗುತ್ತದೆ. ಎಂಥ ನೋವು ಎಂದು ನೀನು ಊಹಿಸಲೂ ಆರೆ. ಅದಕ್ಕೇ, ನನ್ನದು ಸ್ವಾರ್ಥವೇ ಎನ್ನು, ಆದರೂ ಬಾಳಿನಲ್ಲಿ ನಿನಗೆ ಎಂದೂ ನೋವಾಗದ ದಾರಿಯಲ್ಲಿ ನಿನ್ನನ್ನು ಒಯ್ಯಲು ಯತ್ನಿಸಿದೆ. ಆದರೆ ನಿನಗದು ಸರಿಯಾಗಲಿಲ್ಲ. ನಿನ್ನ ದಾರಿಯಲ್ಲಿ ನಿನಗೇನು ಕಾದಿದೆ ಎಂಬುದನ್ನು ನಾನು ಬಲ್ಲೆ ರಾಜಾ. ನಿಶ್ಚಿತವಾಗಿ ಕಾದಿರುವ ಆ ಬೇಗೆಯಲ್ಲಿ ನೀನು ಬೇಯುವುದನ್ನು ನಾನು ಊಹಿಸಲೂ ಹೆದರುತ್ತೇನೆ. ಆದರೆ ನಾನು ಏನು ಹೇಳಿದರೂ ನಿನಗದು ನಂಬಿಕೆಯಾಗಲಿಲ್ಲ ..."

" ಮತ್ತೆ ಅದೇ ವಿಚಾರದ ಗೊಂದಲವೇ ಕಾತ್ಯಾಯನಿ. ನನ್ನದು ದುಃಖದ ದಾರಿ, ನನ್ನದು ದುರಂತ ಭವಿಷ್ಯ ಎನ್ನುತ್ತೀಯ. ಆಗಲಿ-ನರಕವೇ ನನ್ನ ಮೇಲೆ ಮುನಿದು ದೊಂಬಿ ಏಳಲಿ – ನನಗದರ ಭಯವಿಲ್ಲ ಕಾತ್ಯಾಯನಿ. ನೀನೊಬ್ಬಳು ನನ್ನ ಜೊತೆಗಿರು – ಎಲ್ಲವನ್ನೂ ನಾನು ಭರಿಸುತ್ತೇನೆ. ಎಲ್ಲ ವನ್ನೂ ನಾನು ಎದುರಿಸುತ್ತೇನೆ."

" ನೀನು ಎದುರಿಸಬಲ್ಲೆಯೋ ಇಲ್ಲವೋ ನಾನರಿಯೆ. ಆದರೆ ಭರಿಸಬಲ್ಲೆ ಎಂಬುದನ್ನು ನಾನೂ ಬಲ್ಲೆ. ಅದನ್ನೇ ನಾನು ನೋಡಲಾರೆ ಎಂದದ್ದು. ಊಹೂ ನನಗದನ್ನು ನೋಡುವ ಇಚ್ಛೆಯಿಲ್ಲ. ನಿಜ ಹೇಳಲೇ ರಾಜಾ..."

" ಹೇಳು ಕಾತ್ಯಾಯನಿ."

" ನಮ್ಮಿರ್ವರ ಬಾಳೂ ಒಂದು ಎಂದಲ್ಲವೇ ನೀನು ಹೇಳಿದ್ದು ? "

" ನಿಜ. ಅದರಲ್ಲಿ ಸಂಶಯವೆ ? "

" ಅದರಲ್ಲಿ ಸಂಶಯವಿಲ್ಲ. ನಮ್ಮಿರ್ವರ ಆದರ್ಶಗಳೂ ಒಂದೇ."

" ನಾನೂ ಅದನ್ನು ಬಲ್ಲೆ ಕಾತ್ಯಾಯನಿ."

" ಆದರೂ........ಆದರೂ........

—ಯಾವುದೋ ಭಯಂಕರವಾದ ಮಾತನ್ನು ಹೇಳಲಾರದಂತೆ ಅವಳ ಧ್ವನಿ ಕಂಪಿಸಿ, ತುಟಿ ನಡುಗಿ, ಕಣ್ಣಲ್ಲಿ ಕಂಬನಿ ತುಂಬಿತು. ಅದನ್ನು ನೋಡಿ ನನ್ನೆದೆಯಲ್ಲೂ ಯಾವುದೋ ಭಯದ ಬಿರುಗಾಳಿ ಬೀಸಲಾರಂಭಿಸಿತು. ಆ ಭಯದಲ್ಲಿ ಅವಳಿಂದ ದೂರವಿರಲಾರದೆ, ಕಾತ್ಯಾಯನಿಯನ್ನು ಬಿಗಿದಪ್ಪಿ ಹೇಳಿದೆ—

" ಆದರೂ.... ಆದರೂ.... ಅದೇನು ಹೇಳು ಕಾತ್ಯಾಯನಿ. ಮಾತು ತಡೆದು ನನ್ನನ್ನು ಕೊಲ್ಲಬೇಡ."

ಅರ್ಥವಾಗದ ಆ ಭಯಕ್ಕೆ ನನ್ನಷ್ಟೇ ಕಾತ್ಯಾಯನಿಯೂ ಬೆವರಿದಂತಿತ್ತು. ನನ್ನನ್ನು ಅಪ್ಪಿದ ಅವಳ ತೋಳ ಬಿಗಿ ಸಡಲಿದರೆ ನಾನೆಲ್ಲಿ ಕರಗಿಹೋಗುವೆನೋ ಎಂದು ಬೆದರಿದಂತೆ ತಬ್ಬಿ ಬಿಗಿ ಹಿಡಿದಿದ್ದಳು ಕಾತ್ಯಾಯನಿ. ಕಣ್ಣಲ್ಲಿ ನಿಂತ ನೀರು, ಕಡಿದ ಮುತ್ತಿನ ಮಾಲೆಯಂತೆ ಕೆನ್ನೆಯಮೇಲೆ ಹರಿದಿತ್ತು ಮಾತು ಮಾತ್ರ ತಲೆಮರೆಸಿಕೊಂಡಿತ್ತು. ಅಸಹ್ಯ ಮೌನದ ಭಯಂಕರ ಯಾತನೆ ಯನ್ನು ಸಹಿಸಲಾಗದೆ ಕೇಳಿದೆ–

" ಹೇಳು ಕಾತ್ಯಾಯನಿ, ಅದೇನೆಂಬುದನ್ನು ಹೇಳಿಬಿಡು.........ಮಾತು ನಿಲ್ಲಿಸಬೇಡ."

ಅವಳು ಮಾತನಾಡಲಿಲ್ಲ ಆದರೆ ಅವಳ ಮನಸ್ಸಿನಲ್ಲಾಗುತ್ತಿದ್ದ ಯಾವುದೋ ಭಯಂಕರ ಹೋರಾಟಕ್ಕೆ ಪ್ರತೀಕವಾದಂತೆ ಅವಳ ಮೈ ಕಂಪಿಸುತ್ತಿತ್ತು. ಒಂದು ಗಳಿಗೆಯ ಬಳಿಕ, ಕಾತ್ಯಾಯನಿ ನನ್ನ ಮುಖವನ್ನೆಳೆದುಕೊಂಡು, ಹುಚ್ಚು ಹಿಡಿದಂತೆ ನಾಲ್ಕಾರು ಬಾರಿ ಚುಂಬಿಸಿ—

" ರಾಜಾ, ನಿನ್ನನ್ನು ನಾನು ಪ್ರೀತಿಸುತ್ತೇನೆ... ನಿನ್ನನ್ನು ನಾನು ಪ್ರೀತಿಸುತ್ತೇನೆ ರಾಜಾ ಪ್ರೀತಿಸುತ್ತೇನೆ... "

—ಎಂದವಳೇ ಬಲವಂತವಾಗಿ ಜಾರಿ—

" ಹೋಗು ರಾಜಾ.. .ಹೋಗು ಹೊರಟು ಹೋಗು....ಇಂದು ನನ್ನನ್ನೇನೂ ಕೇಳಬೇಡ. ಏನೂ ಮಾತಾಡಿಸಬೇಡ... ಹೋಗು ರಾಜಾ ನನ್ನೆದುರು ನಿಂತು ನನ್ನನ್ನು ಕೊಲ್ಲಬೇಡ."

ಎಂದವಳೇ ಕೋಣೆಯಿಂದ ಓಡಿ, ಬದಿಯಲ್ಲಿದ್ದ ಮಲಗುವ ಮನೆಗೆ ಹೋಗಿ ಬಾಗಿಲನ್ನು ಹಾಕಿಕೊಂಡಳು.

ಒಳಗಿನ ಚಿಲುಕದ ಸದ್ದಾಗಿ ಬಾಗಿಲು ಮುಚ್ಚಿತೆಂದು ಅರಿವಾಗಿ, ಇದ್ದಕ್ಕಿದ್ದ ಹಾಗೇ ಸಿಡಿಲು ಹೊಡೆದ ಹಾಗಾಯಿತು ನನಗೆ.

ಗರ ಬಡಿದಂತೆ ನಿಂತಲ್ಲಿಯೇ ನಿಂತೆ.

ಏನಾಯಿತು, ಏನಾಯಿತು, ಇದ್ದಕ್ಕಿದ್ದ ಹಾಗೇ ಏನಾಯಿತು – ಚಿಂತಿಸುವ ಶಕ್ತಿಯೂ ನನಗಿರಲಿಲ್ಲ. ಅನಿರೀಕ್ಷಿತ ವಜ್ರಾಘಾತದಿಂದ ನನ್ನ ಮಿದುಳು ಕುಂಠಿತವಾಗಿತ್ತು.

ಮುಚ್ಚಿದ ಬಾಗಿಲ ಬಳಿಗೆ ಸರಿದೆ. ಕೋಣೆಯೊಳಗೆ ಕಾತ್ಯಾಯನಿ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು ನನ್ನೆದೆಗೆ ಭಯಂಕರ ಯಾತನೆಯ ಬೆಂಕಿಯನ್ನು ಹಚ್ಚಿ ಬೇಯಿಸುತ್ತಿತ್ತು, ಆ ಅಳುವಿನ ಧ್ವನಿ.

ಮೂರು ನಾಲ್ಕು ಬಾರಿ ಬಾಗಿಲು ತಟ್ಟಿದೆ. ' ಕಾತ್ಯಾಯನೀ ' ಎಂದು ಕೂಗಿದೆ.

ಉತ್ತರ ಬರಲಿಲ್ಲ. ಬಾಗಿಲು ತೆರೆಯಲಿಲ್ಲ.

ನೆಲಕ್ಕೆ ಕೀಲಿಸಿದಂತಿದ್ದ ಕಾಲನ್ನು ಕಿತ್ತು ಕೋಣೆಯಿಂದ ಹೊರಗೆ ಹೊರಟೆ.

ನಾನು ಹೊರಗೆ ಹೊರಟೆ. ನನ್ನ ಹೃದಯ ಕೋಣೆಯಲ್ಲೇ, ಕಾತ್ಯಾಯನಿಯ ಬಳಿಯಲ್ಲೇ ಉಳಿಯಿತು.

ತಲೆ ತಗ್ಗಿಸಿ ಹೆಜ್ಜೆ ಹಾಕಿದೆ – ಮಸಣದ ನಿಟ್ಟುಸಿರಿನಂತೆ ಗಾಳಿ ಸುಳಿಯುತ್ತಿದ್ದ ಇರುಳಿನಲ್ಲಿ.

೮

ಎರಡು ದಿನ, ಮೂರು ದಿನ, ಉಳಿದೆಲ್ಲ ವಿಷಯಗಳೂ ನನ್ನ ಮಿದುಳಿನಿಂದ ಹಾರಿ ಹೋಗಿ, ಎಲ್ಲವನ್ನೂ ಕಾತ್ಯಾಯನಿಯ ಮೂರ್ತಿ ವ್ಯಾಪಿಸಿತು.

ಆದರೆ ಕಾತ್ಯಾಯನಿ ಕಾಣಲಿಲ್ಲ.

ಮನೆಗೆ ಹೋಗಿ ವಿಚಾರಿಸಿದೆ. 'ಇಲ್ಲ'ವೆಂದು ಉತ್ತರ ಬಂತು. ಆಸ್ಪತ್ರೆಯಲ್ಲೂ ಇಲ್ಲ – ರಜಾ.

ಎಲ್ಲೆಲ್ಲಿ ಹುಡುಕಿದರೂ ಕಾತ್ಯಾಯನಿ ಕಾಣಲಿಲ್ಲ

ಗುರುತರಿಯದ, ಹೆಸರು ತಿಳಿಯದ ಘೋರ ಭೀತಿಯೊಂದು ಹಗಲಿರುಳೂ ನನ್ನನ್ನು ಕಾಡತೊಡಗಿತು. ಹೋದತ್ತ ಬಂದತ್ತ ಭೀತಿಯ ನೆರಳುಗಳು ನನ್ನ ಸುತ್ತಲೂ ಸುಳಿದಾಡತೊಡಗಿದವು. ಅರ್ಥವಾಗದ ವ್ಯಾಕುಲತೆಯ ಮಂಜು ನನ್ನೆದೆಯನ್ನು ಆವರಿಸಿದಂತೆಯೇ ನನ್ನ ಸುತ್ತಲ ಜಗತ್ತಿಗೂ ಹೊಗೆಯ ತೆರೆಯನ್ನು ಎಳೆಯಿತು – ಏಕೋ ಏಕೋ ನನ್ನ ಕಾಲಕೆಳಗಿನ ನೆಲವೇ ಎತ್ತಲೋ ಜಾರುವಂತಿತ್ತು.

ಮೂರು ದಿನ–ಮೂರು ಯುಗಗಳನ್ನು ಕಬಳಿಸಿ ಬೆಳೆದ ಮೂರುದಿನ—

ಕಾತ್ಯಾಯನಿ ಕಾಣಲಿಲ್ಲ.

ನಾಲ್ಕನೆಯ ದಿನ—

ಕಾತ್ಯಾಯನಿ ಕಾಣಲಿಲ್ಲ—ಕಾಗದ ಬಂದಿತು.

ಕಾಗದ.

ಕಾಲೇಜಿನಿಂದ ಮಧ್ಯಾಹ್ನ ಹಿಂತಿರುಗಿದಾಗ ಬಂದು ಬಿದ್ದಿದ್ದ ಕಾಗದವನ್ನು ಕಂಡು ಆಶ್ಚರ್ಯವಾಯಿತು—

ಯಾರದು ಈ ಕಾಗದ ?

ತಂದೆಯವರದೇ ? ಇರಲಾರದು – ಎಂದಾದರೊಂದು ದಿನ ಅವರಿಂದ ಕಾಗದ ಬರಬಹುದೆಂಬ ನಿರೀಕ್ಷೆ ನನ್ನ ಹೃದಯದಲ್ಲಿತ್ತು. ಆದರೆ ಇಷ್ಟು ಬೇಗ – ಊಹೂ. ಅವರದು ಇರಲಾರದು.

ಶ್ರೀಧರನದೇ - ಮೈಸೂರಿಗೆ ಬಂದಾಗ ನೋಡುತ್ತೇನೆ ಎಂದು ಹೇಳಿದ್ದ. ಅವನು ಕಾಗದವನ್ನು ಬರೆಯುವುದು ಬಿಟ್ಟೇ ಎಷ್ಟೋ ದಿನಗಳಾಗಿತ್ತು ಅವನಿಂದ ಕಾಗದ ಬರುವ ನಿರೀಕ್ಷೆಯೇ ಇರಲಿಲ್ಲ.

ಹಾಗಾದರೆ ಮತ್ತೆ ಯಾರದು ?

ಮತ್ತೆ ಯಾರಿಂದಲೂ ಕಾಗದ ಬರುವ ನಿರೀಕ್ಷೆಯೇ ನನಗಿರಲಿಲ್ಲ. ನನಗೆ ಕಾಗದ ಬರೆಯುವವರು ತಾನೇ ಯಾರು ?

ಬಾಗಿಲ ಸಂದಿನಿಂದ ತೂರಿ ಕೆಳಗೆ ಬಿದ್ದಿದ್ದ ಕಾಗದವನ್ನು ಕೈಗೆ ತೆಗೆದುಕೊಂಡೆ – ಕಾಗದ ಕೈಗೆ ತೆಗೆದು ಕೊಂಡೆ. ಅವನ್ನು ಒಡೆಯಲು ಬೆರಳು ಧಾವಿಸಿದರೂ, ಮನಸ್ಸು ಹೆದರಿ ಹಿಂಜರಿಯಿತು. ಅಷ್ಟು ಹೊತ್ತು ಒಡೆಯಲೇ ಬಿಡಲೇ ಎನ್ನುವ ಹೋರಾಟ ನಡೆದು, ಬಳಿಕ ಭಯವನ್ನು ಕುತೂಹಲ ಗೆದ್ದು ಕಾಗದವನ್ನು ಒಡೆದು ಕಾಗದದ ಕೊನೆಯಲ್ಲಿದ್ದ ಸಹಿಯನ್ನು ನೋಡಿದೆ–ಕಾತ್ಯಾಯನಿಯದು. ಆ ಹೆಸರು ಕಂಡ ಕೂಡಲೇ ಬೇಡ ಬೇಡವೆಂದರೂ ತುಟಿ ಆ ಹೆಸರನ್ನೇ ಚುಂಬಿಸಿ, ಕಾಗದದ ನೀರಸ ಸ್ಪರ್ಶದಲ್ಲೇ ಬೇರಾವುದೋ ಆನಂದವನ್ನು ಅನುಭವಿಸಿತು. ಕಣ್ಣು ಕೊನೆಯ ಪುಟದಿಂದ ಮೊದಲ ಪುಟಕ್ಕೆ ಹಾರಿತು. ಓದಿದೆ :

" ಪ್ರಿಯ ರಾಜಶೇಖರ,

ನಮ್ಮಿಬ್ಬರ ಪರಿಚಯ ಬೆಳೆದು, ಒಲವಾಗಿ ಅರಳಿದ ಈ ಐದುವರ್ಷಗಳಲ್ಲಿ ಇದು ನಾನು ನಿನಗೆ ಬರೆಯುತ್ತಿರುವ ಮೊದಲ ಪತ್ರ. ಎಷ್ಟೋಜನರ ಪ್ರೇಮ, ಪತ್ರಗಳಲ್ಲೇ ಬೆಳೆದು ಅರಳುತ್ತದೆ. ಬಹು ಜನ ಪ್ರಣಯಿಗಳ ಪಾಲಿಗೆ ಅಂಚೆಯಾಳೇ ಮೇಘದೂತ. ಎಷ್ಟೋ ಜನ ಪ್ರಣಯಿಗಳು ಪತ್ರ ಲೇಖನ, ಪ್ರತಿಪತ್ರ ನಿರೀಕ್ಷಯಲ್ಲೇ ತಮ್ಮ ಬಾಳಿನ ಆನಂದದ ಪರಮಾವಧಿಯನ್ನು ಕಾಣುತ್ತಾರೆ.

ಆದರೆ ನಿನಗೆ ಎಲ್ಲರ ಹಾಗೆ ಪತ್ರಬರೆಯಬೇಕು ಎನಿಸಿತ್ತೋ ಇಲ್ಲವೋ ನಾನರಿಯೆ. ಆದರೆ ನನಗೇನೋ ಒಂದೊಂದು ಬಾರಿ ನಿನಗೆ ಪತ್ರ ಬರೆಯಬೇಕು, ನೀನು ಬಳಿ ಇಲ್ಲದಾಗ, ಈ ದೇಹ ಯಂತ್ರದೊಳಗೆ ಎಲ್ಲೋ ಹುದುಗಿ ಕುಳಿತ ಕಲ್ಪನೆಯ ಮಾಟಗಾರ ಚಿತ್ರಿಸಿದ ನೂರು ಚಿತ್ರಗಳನ್ನು, ಹಾಡಿದ ನೂರು ಭಾವಗೀತೆಗಳನ್ನು, ಕಾಗದದಲ್ಲಿ ಬರೆದು, ಆ ಆನಂದವನ್ನು ನಿನ್ನೊಡನೆ ಪಾಲುಗೊಳ್ಳಬೇಕು ಎಂದು ಬಯಕೆಯಾಗುತ್ತಿತ್ತು. ಆದರೆ ಏಕೋ ಇಷ್ಟುದಿನ ಬರೆಯಲಿಲ್ಲ, ಈ ದಿನ ಬರೆಯುತ್ತಿದ್ದೇನೆ.

ನಮ್ಮ ಜೀವನಲ್ಲಿ ಇಂಥ ಸಂದರ್ಭ ಬರಬಹುದು, ನಾನು ನಿನಗೆ–ನಿಜ ನಿನಗೆ, ನನ್ನ ಬಾಳಿನಲ್ಲಿ ಬಹು ವಿಚಿತ್ರವಾದ ಸ್ಥಾನವನ್ನು ಪಡೆದ ನಿನಗೆ – ಈ ಬಗೆಯ ಪತ್ರ ಬರೆಯಬಹುದು ಎಂದು ಯಾರಾದರೂ ಹೇಳಿದ್ದರೂ ನಾನು ನಂಬುತ್ತಿರಲಿಲ್ಲ. ಆದರೆ ಎಲ್ಲ ನಂಬಿಕೆ, ನಿರೀಕ್ಷೆಗಳನ್ನೂ ಮೆಟ್ಟಿ ಅಂಥ ಸಂದರ್ಭವೇ ಬಂದಿದೆ.

ರಾಜಾ, ನನ್ನ ಈ ಬಹು ದೀರ್ಘವಾದ ಕಾಗದದ ಮುಂದಿನ ಭಾಗವನ್ನೋದಿ ನಿನ್ನ ಹೃದಯ ಕಹಿಯಾಗುವುದಕ್ಕೆ ಮೊದಲೇ ಒಂದು ಮಾತನ್ನು ನಿನಗೆ ಹೇಳುತ್ತೇನೆ. ನಾನು ನಿನ್ನನ್ನು ಪ್ರೀತಿಸುತ್ತೇನೆ. ಇಂದಿನ ಜಗತ್ತಿನಲ್ಲಿ ಉಳಿದೆಲ್ಲ ಶಬ್ದಗಳಂತೆಯೇ. ಪ್ರೀತಿಯೆಂಬುದೂ ಅರ್ಥ ಕಳೆದುಕೊಂಡು ಬೆಲೆ ಕಡಿಮೆಯಾದ ಸವುಕಲು ನಾಣ್ಯ; ಹೆಣ್ಣು ಗಂಡಿನ ಲೈಂಗಿಕ ದಾಹಕ್ಕೆ ಕೊಟ್ಟ ಸಭ್ಯ ಹೆಸರು. ಒಬ್ಬರೊಬ್ಬರ ವ್ಯವಮಾಟಕ್ಕೆ ಮರುಳಾದ ಹೆಣ್ಣು ಗಂಡುಗಳು, ತಮ್ಮನ್ನೇ ತಾವು ಮೋಸಗೊಳಿಸಿಕೊಳ್ಳಲು ಕಾಮಕೇಳಿಗಿಟ್ಟ ಇನ್ನೊಂದು ಹೆಸರು ಪ್ರೇಮ.

ಹಾಗೆಂದು ಆ ಕಾಮವನ್ನೇ, ಪ್ರೇಮವನ್ನೇ ನಾನು ತಾತ್ಸಾರ ಮಾಡುತ್ತಿಲ್ಲ. ಹೆಣ್ಣು ಗಂಡಿನ ಬಾಳಿನಲ್ಲಿ ಅದೊಂದು ಅವಶ್ಯ ಭಾವನೆ. ಆಹಾರ, ನಿದ್ರೆಯಷ್ಟೇ ನಿಸರ್ಗ ಸಹಜವಾದ ಕ್ರಿಯೆ. ಮಾನವ ಕುಲದ ಅನಂತತೆಗೆ ವ್ಯಕ್ತಿ ನೀಡುವ ಸಂತಾನ ನಿರ್ಮಾಣಕ್ರಿಯೆ. ಇದು ಎಷ್ಟು ಅವಶ್ಯಕವೋ ಅಷ್ಟೇ ಆಕರ್ಷಣೀಯ—ಅಷ್ಟೆ. ಅದನ್ನು ನಾನು ಹೇಗೆ ತಾತ್ಸಾರ ಮಾಡಲಾರೆನೋ, ಅಷ್ಟೇಮಟ್ಟಿಗೆ ಅದಕ್ಕೆ ಇಲ್ಲಸಲ್ಲದ ಭಾವನಾಪರವಶವಾದ ಅತಿ ಮೌಲ್ಯವನ್ನು ಕೊಡಲೂ ಇಚ್ಛಿಸುವುದಿಲ್ಲ ಹಾಗೇ ಸ್ತ್ರೀ ಪುರುಷರಸೌಖ್ಯಕ್ಕೆ ಅದೇ ಬುನಾದಿಯೆನ್ನುವುದನ್ನೂ ಒಪ್ಪುವುದಿಲ್ಲ. ನೀನಾದರೂ ಅದಕ್ಕೆ ಇಷ್ಟಕ್ಕಿಂತ ಹೆಚ್ಚಿನ ಬೆಲೆ ಕೊಡಬೇಕೆಂದು ನಾನು ಬಯಸುವುದಿಲ್ಲ.

ನಮ್ಮಿರ್ವರ ಸ್ನೇಹದ ಬಗ್ಗೆ ನನಗಿದ್ದ ಭಾವನೆಯೂ ಅಷ್ಟೆ. ನಿಸರ್ಗ ನಿಯಮಕ್ಕೆ ಅತೀತವಾಗದೆ, ಹೆಚ್ಚಿನ ಅರ್ಥ ಪಡೆದ ಸಮ್ಮಿಲನವಾಗಬೇಕು ಎಂಬ ಆಶೆ ನನಗಿತ್ತು.

ಒಂದು ದಿನ ನೀನು ನನ್ನನ್ನು 'ನನ್ನನ್ನು ವಿವಾಹವಾಗುತ್ತೀಯಾ ಕಾತ್ಯಾಯನಿ' ಎಂದು ಕೇಳಿದ್ದೆ. 'ಆಗಲಿ' ಎಂದು ನಾನೂ ಹೇಳಿದ್ದೆ. ವಿವಾಹ ಎನ್ನುವ ಶಬ್ದವನ್ನು ನೀನು ಯಾವ ಅರ್ಥದಲ್ಲಿ ಬಳಸಿದೆಯೋ ನಾನರಿಯೆ. ಆದರೆ ನಾನು ಅದಕ್ಕೆ ಕೊಟ್ಟ ಅರ್ಥವೇ ಬೇರೆ.

ನಾನಾಗಲೇ ಅರ್ಥಗೆಟ್ಟ ಸವುಕಲು ನಾಣ್ಯದಂಥ ಶಬ್ದದಮಾತು ಹೇಳಿದೆನಲ್ಲಾ – ಇಂದಿನ ಪರಿಸ್ಥಿತಿಯಲ್ಲಿ 'ವಿವಾಹ' ಎನ್ನುವುದೂ ಅದೇ ಜಾತಿಗೇ ಸೇರಿದುದು. ನನ್ನ ಮಾತನ್ನು ನೀನು ಒಪ್ಪದಿರಬಹುದು. ಆದರೂ ಸತ್ಯವನ್ನು ಹೇಳಬೇಕೆಂದರೆ ಇಂದು ಕಾಮದ ಬುನಾದಿಯ ಮೇಲೆ ಸ್ಥಾಪಿತವಾದ ವಿವಾಹ, ಬರ್ನಾಡ್ ಷಾ ಹೇಳಿದಂತೆ, 'ರಹದಾರಿ ಪಡೆದ ವೇಶ್ಯಾವೃತ್ತಿ' ಯಾಗಿದೆ; ಫ್ರೆಡರಿಕ್ ಎಂಜಲ್ಸ್ ಹೇಳಿದಹಾಗೆ ಮದುವೆ ಗಂಡು ಹೆಣ್ಣಿನ

ಮೇಲೆ ಹೊರಿಸುವ ಗುಲಾಮಗಿರಿಯ ಸರಪಳಿಯ ಹೆಸರಾಗಿದೆ. ಅಂಥ ಪತ್ನಿ ಗಂಡನಿಗಾಗಿ ಸಂತಾನೋತ್ಪಾದನೆ ಮಾಡುವ ಯಂತ್ರ. ಪುರುಷ ಉಳಿದ ಉತ್ಪಾದನಾಯಂತ್ರಗಳ ಮೇಲೂ ತನ್ನ ಸ್ವಾಮಿತ್ವವನ್ನು ಹೇರಿದಹಾಗೆ ಮದುವೆಯ ಮುದ್ರೆಯೊತ್ತಿ, ಹೆಣ್ಣಿನ ಮೇಲೂ ತನ್ನ ಅಧಿಕಾರ ಸ್ಥಾಪಿಸುತ್ತಾನೆ. ಹಸುವಿನ ತೃಪ್ತಿಗೆ ಒಲೆ ಹೂಡಿದ ಹಾಗೆ, ರತಿ ತೃಪ್ತಿಗಾಗಿ ಸಂಸಾರಹೂಡುತ್ತಾನೆ.

ನಾನು ನಿನ್ನನ್ನು 'ಮದುವೆ ಆಗುತ್ತೇನೆ' ಎಂದದ್ದು ಈ ಅರ್ಥದಲ್ಲಲ್ಲ. ನಮ್ಮೀರ್ವರ ಪರಸ್ಪರ ಸ್ನೇಹದಲ್ಲಿ ಆ ಬಯಕೆ ಇರಲಿಲ್ಲವೆಂದಲ್ಲ, ಆ ಬಯಕೆ ಇತ್ತು, ಈಗಲೂ ಇದೆ ನಮ್ಮೀರ್ವರ ಆಲಿಂಗನ, ಚುಂಬನಗಳು ನೀಡಿದ ಆನಂದವನ್ನು ಮರೆತ ಕೃತಘ್ನಳು ನಾನಲ್ಲ. ಆ ಕೆಲ ಗಳಿಗೆಗಳ ಮಧುರಸ್ಮೃತಿ ನನ್ನ ಬಾಳಿನ ಚಿರಸಂಗಾತಿಗಳು. ಈಗಲೂ, ಈ ಕಾಗದಬರೆವಾಗಲೂ, ನನ್ನ ಮೈ ಮೂರು ದಿನಗಳ ಹಿಂದಿನ ಆಲಿಂಗನದ ನೆನಪಿನಿಂದ ಪುಳುಕಿತವಾಗುತ್ತಿದೆ.

ಆದರೆ ನನ್ನ ನಿನ್ನ ಬಾಳು ಬರೀ ಚುಂಬನ, ಆಲಿಂಗನ, ರತಿಕ್ರೀಡೆಗಳ ಸಾಮಾನ್ಯ ವಿಧಿಯಲ್ಲೇ ಮುಕ್ತಾಯವಾಗದೆ ಬೇರೊಂದು ಹಂತವನ್ನು ಮುಟ್ಟಿ, ಅಂಗಾಂಗಗಳ ಆಲಿಂಗನದಲ್ಲಿ ಆರಂಭವಾದ ಬಾಳು, ವಿಚಾರದ ವಿದ್ಯುದಾಲಿಂಗನದಲ್ಲಿ ಒಂದಾಗಿ ಬೆಸೆದು ಸಮಾಗಮವಾಗಬೇಕು ಎಂಬ ಬಯಕೆ ಇತ್ತು.

'ನನ್ನನ್ನು ಪ್ರೀತಿಸುತ್ತೀಯಾ ಕಾತ್ಯಾಯನಿ?' ಎಂದು ನೀನು ಕೇಳಿದ ಪ್ರಶ್ನೆ, 'ನಿನ್ನನ್ನು ನಾನು ಪ್ರೀತಿಸುತ್ತೇನೆ' ಎಂದು ನೂರಾರು ಬಾರಿ ನೀನು ನೀಡಿದ ಆಶ್ವಾಸನೆ ಇನ್ನೂ ನನ್ನ ಕಿವಿಗಳಲ್ಲಿ ಮಧುರವಾಗಿ ಮೊಳಗುತ್ತಾ ಇದೆ.

ನಿಜ, ರಾಜಾ, ನಾನು ನಿನ್ನನ್ನು ಪ್ರಿತಿಸುತ್ತೇನೆ, ನೀನೂ ನನ್ನನ್ನು ಪ್ರೀತಿಸುತ್ತೀಯ. ನಾನದನ್ನು ಬಲ್ಲೆ.

ನಮ್ಮೀರ್ವರ ವಿವಾಹಕ್ಕೆ ಇದು ಸಾಲದೇ ಎಂದು ನೀನು ಕೇಳಬಹುದು. ನಿಜ – ಬಹು ಜನರ ಪಾಲಿಗೆ ಅಷ್ಟೇ ಸಾಕು. ಹಿರಿಯರ ಮಾತೇ ಎರಡು ಜೀವಗಳನ್ನು ಒಂದುಗೂಡಿಸಲು ಸಾಕು ಎಂದು ನಂಬಿರುವ ದೇಶದಲ್ಲಿ ಪರಸ್ಪರ ಪ್ರೀತಿಯೂ ಬಹು ದೊಡ್ಡ ಭಾಗ್ಯ. ಅದನ್ನೇ ನೆಚ್ಚಿ ಎಷ್ಟೋ ಜನ ತಮ್ಮ ಬಾಳನ್ನು ಕೂಡಿಸಿಕೊಂಡಿದ್ದಾರೆ. ಇಲ್ಲವೆನ್ನುವುದಿಲ್ಲ. ಆದರೆ ನನ್ನ ಮಟ್ಟಿಗೆ ಹೇಳುವುದಾದರೆ ಅದು ಸಾಲದು.

ಈ ಪ್ರೇಮ ಎನ್ನುವುದು ಮೂಲಭೂತವಾಗಿ ಲೈಂಗಿಕಾಕರ್ಷಣೆ. ಇದು ದೂರವಿರುವ ಎರಡು ವಸ್ತುಗಳನ್ನು ಹತ್ತಿರ ಸೆಳೆದು ನಿಲ್ಲಿಸುತ್ತದೆ. ಆದರೆ

ಎರಡು ಬಾಳನ್ನು ಒಂದಾಗಿ ಬೆಸೆಯುವುದಿಲ್ಲ. ಎಂತಲೇ ' ಪರಸ್ಪರ ಪ್ರೇಮ್ಮ, ದಿಂದ ಆರಂಭವಾದ ಎಷ್ಟೋ ಬಾಳು ಲೈಂಗಿಕ ಆಕರ್ಷಣೆಯು ನವೀನತೆಯು ತಗ್ಗಿದ ಬಳಿಕ ವಿಕರ್ಷಣೆಯ ದುರಂತ ಪರಿಣಾಮಕ್ಕೊಳಗಾಗುತ್ತದೆ. ಹಾಗಾಗ ದಿರಬೇಕು, ಲೈಂಗಿಕ ಆಕರ್ಷಣೆ ಹಳತಾದ ಬಳಿಕಲೂ ಕಲೆತ ಜೀವ ಒಂದಾಗಿಯೇ ಇರಬೇಕೆಂದರೆ ಅದಕ್ಕೆ ಸಮಾನ ವಿಚಾರದ ಭದ್ರ ಬೆಸುಗೆ ಬೇಕಾಗುತ್ತದೆ.

ಆದರೆ ರಾಜಾ, ನಮ್ಮೀರ್ವರ ಬಾಳಿನದು ಎಂಥ ದುರದೃಷ್ಟ —

ಪರಸ್ಪರ ಪ್ರೇಮದಿಂದ ಸಮೀಪವಾದ ನಮ್ಮ ಬಾಳಿನಲ್ಲಿ, ಆ ವಿಚಾರದ ಬೆಸುಗೆ ಕಾಣಬಂದಿಲ್ಲ. ಪ್ರೇಮದ ದೃಷ್ಟಿಯಲ್ಲಿ ಒಂದೇ ಗುರಿಯತ್ತ ಧಾವಿಸುತ್ತಿರುವ ನಮ್ಮೀರ್ವರ ಜೀವನ, ವಿಚಾರದ ದೃಷ್ಟಿಯಿಂದ ಕವಲು ದಾರಿ ಹಿಡಿದಿವೆ. ಹೀಗಿರುವಾಗ ನಮ್ಮೀರ್ವರ ವಿವಾಹ ಬಯಸಿದ ಫಲ ಬಿಡುವುದು ಸಾಧ್ಯವೇ ಯೋಚಿಸು.

ಯಾವುದರ ರತಿಯಲ್ಲಿ ನಿಜವಾದ ಸುಖವಿದೆಯೋ ಆ ಮನಸ್ಸುಗಳೇ ಕವಲೊಡೆದು ನಿಂತಾಗ, ಮೈಗಳ ಸೇರುವಿಕೆಯ ಯಾಂತ್ರಿಕ ಕ್ರಿಯೆ ಏನು ಆನಂದ ಕೊಡಬಲ್ಲದು.

ಸಿಟ್ಟಾಗಬೇಡ, ಉದ್ರಿಕ್ತನಾಗಬೇಡ, ರಾಜಾ, ತಾಳ್ಮೆಯಿಂದ ನಾನು ಬರೆದುದನ್ನು ಓದಿ ವಿಚಾರ ಮಾಡು. ನಿನಗೇ ಗೊತ್ತಾಗುತ್ತದೆ, ಈ ಪರಿಸ್ಥಿತಿಯಲ್ಲಿ ನಮ್ಮೀರ್ವರ ವಿವಾಹ ಅಪೇಕ್ಷಣೀಯವಲ್ಲ.

ನಾನು ನಿನ್ನನ್ನು ಬಯಸಿದುದು ನಿನಗೆ ಸಂಪೂರ್ಣ ಸುಖ ನೀಡಲೆಂದು. ಬರೀ ದೈಹಿಕ ಸುಖ ನೀಡಲೆಂದಲ್ಲ. ಆ ಸುಖವನ್ನೇ ನೀನು ಬಯಸಿದರೆ, ನಾನೂ ಅದನ್ನು ಕೊಡಬಹುದು, ಬಜಾರಿನಲ್ಲಿ ಎಂಟಾಣೆ, ರುಪಾಯಿ ಕೊಟ್ಟು ಪಡೆಯಬಹುದು. ಮನಸ್ಸುಗಳು ಕವಲೊಡೆದಾಗ, ಯಾವುದೋ ವಿಧಿಗೆ ಕಟ್ಟು ಬಿದ್ದು ದೈಹಿಕ ಸುಖ ನೀಡುವುದು ಬಜಾರಿನ ಕಾಮಕ್ಕಿಂತ ಹೆಚ್ಚು ಬೆಲೆ ಬಾಳುವುದಿಲ್ಲ. ನನ್ನ ಮೈಯೊಂದೇ ಅಲ್ಲ, ನನ್ನ ಹೃದಯ, ಮನಸ್ಸು, ಎಲ್ಲವೂ ನಿನ್ನದಾಗಬೇಕೆಂದು ನನ್ನ ಬಯಕೆಯಿತ್ತು. ನಿನ್ನಿಂದಲೂ ನಾನು ಅದನ್ನು ಪಡೆಯ ಬಯಸಿದೆ. ಈಗ ನೀನು ನನ್ನ ಮೇಲಿನ ಮೋಹದಿಂದ ನನ್ನ ವಿಚಾರಧಾರೆಗೆ ಸಮ್ಮತಿಸಲೂ ಸಿದ್ಧನಾಗಬಹುದು. ನಾನೂ ಆ ರೀತಿ ಮಾಡಬಹುದು. ಆದರೆ ಪ್ರಣಯದ ಪದತಲದಲ್ಲಿ ವಿಚಾರ ಸ್ವಾತಂತ್ರ್ಯವನ್ನು ಅರ್ಪಿಸುವುದನ್ನು ನಾನು ಒಪ್ಪುವುದಿಲ್ಲ. ನಾನದನ್ನು ಮಾಡಲಾರೆ ; ನಿನ್ನಿಂದಲೂ ಅಂಥ ಬಲಿದಾನವನ್ನು ನಿರೀಕ್ಷಿಸುವುದಿಲ್ಲ. ಅಂಥ ಕೃತಕ ಆತ್ಮಾರ್ಪಣೆ ಭವಿಷ್ಯ ದುರಂತದ ಬೀಜ.

ಹಾಗೇ ನನ್ನ ವಿಚಾರ ಸ್ವಾತಂತ್ರ್ಯವನ್ನು ನಾನು ಎಷ್ಟು ಗೌರವಿಸುತ್ತೇನೋ, ಎಷ್ಟು ಪ್ರೀತಿಸುತ್ತೇನೋ ಅಷ್ಟೇ ಮಟ್ಟಿಗೆ ನಿನ್ನ ವಿಚಾರ ಸ್ವಾತಂತ್ರ್ಯವನ್ನು ನಾನು ಗೌರವಿಸಿ, ಪ್ರೀತಿಸುತ್ತೇನೆ. ಎಂತಲೇ ನೀನದನ್ನು ನನಗಾಗಿಯೇ ಆದರೂ ಬಲಿಕೊಡಲು ಒಪ್ಪುವುದಿಲ್ಲ. ನಿನ್ನ ಬಾಳು ನಿನ್ನ ವಿಶಿಷ್ಟ ವಿಚಾರ ಜಲಧಾರೆಯಿಂದಲೇ ಬೆಳೆಯಬೇಕು, ಆದ್ದರಿಂದ ಹೇಳುತ್ತೇನೆ ರಾಜಾ, ನಿನ್ನ ದಾರಿಯಲ್ಲಿ ನೀನು ನಡೆ. ನನ್ನ ಒಲವಾಗಲಿ, ಚಿಂತೆಯಾಗಲಿ, ನಿನ್ನ ಬಾಳಿನ ಬೇಡಿಯಾಗುವುದು ನನಗೆ ಇಚ್ಛೆ ಇಲ್ಲ.

ಈ ಮಾತನ್ನು ನಾನು ಎಷ್ಟು ಕಷ್ಟದಿಂದ ಬರೆಯುತ್ತಿದ್ದೇನೆ ಎಂಬುದನ್ನು ನೀನು ಊಹಿಸಬಲ್ಲೆಯೋ ಇಲ್ಲವೋ, ರಾಜಾ, ನಾನರಿಯೆ. ಈ ಮಾತು ಬರೆದು ನನ್ನ ಬಾಳು ಮಸಣವಾಗಿದೆ ; ಬೆಳಕು ಸತ್ತ ಹಗಲಾಗಿದೆ. ಅದರೂ ಬರೆಯಲೇಬೇಕಾಗಿ ಬಂದು ಬರೆಯುತ್ತಿದ್ದೇನೆ.

ಇಂಥ ಬೆಂಕಿ ಮಾತು ಬರೆವ ಸಂದರ್ಭ ಬರದಿರಲೆಂದು ನಾನೆಷ್ಟು ಬಯಸಿದೆ, ಎಷ್ಟು ಬಯಸಿದೆ ರಾಜಾ – ಎಲ್ಲವೂ ವಿಫಲವಾಯಿತು. ಲೋಕವನ್ನೇ ಮರೆತು ಒಬ್ಬರು ಮತ್ತೊಬ್ಬರ ತೋಳ ಬಂದಿಯಾಗಿ, ತುಟಿದುಂಬಿಯಾಗಿ ಕಳೆಯಬಹುದಾಗಿದ್ದ ಎಷ್ಟೋ ಕಾಲವನ್ನು ನಿನಗೆ ಬೇಸರಗೊಳಿಸುವ ರಾಜಕೀಯದ ಚರ್ಚೆಯಲ್ಲಿ ಕಳೆದೆ. ಬೇಡ ಬೇಡವೆಂದರೂ ಬಿಡದೆ ಅದನ್ನೇ ಆಡಿದೆ – ನಿರ್ದಿಷ್ಟ ಶ್ರದ್ಧೆಯ ಬೆಂಬಲವಿಲ್ಲದ, ಆದರ್ಶವಾದದ ಮರುಮರೀಚಿಕೆಯ ಬೆನ್ನಂಟಿ ನಡೆದಿದ್ದ ನಿನ್ನ ಕಣ್ಣು ತೆರೆಸಲು. ಇಂದಲ್ಲ ನಾಳೆ, ಇಂದಲ್ಲ ನಾಳೆ ನಮ್ಮಿರ್ವರ ಹೃದಯಗಳೂ ಒಂದಾದಂತೆ ಕಣ್ಣುಗಳೂ ಒಂದಾದವು ಎಂದು ಬಯಸಿದೆ, ಹಂಬಲಿಸಿ ಹಾರೈಸಿದೆ – ಊಹೂ – ನನ್ನ ಬಯಕೆ ಸಫಲವಾಗಲಿಲ್ಲ ರಾಜಾ ; ನಿನ್ನ ಕಣ್ಣು ತೆರೆಯಲಿಲ್ಲ.

ನನ್ನ ಬಯಕೆಗಳೆಲ್ಲಾ ಇಂದು ಕಂಬನಿಯ ಕೊಳದಲ್ಲಿ ತೇಲುತ್ತಿವೆ.

ಕಂಬನಿ – ನಿಜವಾಗಿಯೂ ಕಂಬನಿ ರಾಜಾ. ನಿನಗೆ, ನನ್ನ ಬಾಳಿನ ಅಮೃತಮೂರ್ತಿಗೆ ಈ ಮಾತುಗಳನ್ನು ಬರೆವಾಗ ನನ್ನ ಕಣ್ಣು ಕಂಬನಿಗರೆಯುತ್ತಿವೆ.

ನನ್ನ ದೌರ್ಭಾಗ್ಯಕ್ಕಾಗಿ, ನಿನ್ನ ದುರಾದೃಷ್ಟಕ್ಕಾಗಿ.

ನಿನ್ನ ದಾರಿಯಲ್ಲಿ ನೀನು ನಡೆ ಎನ್ನುವಾಗಲೂ ನನಗೆ ಭಯಂಕರ ಯಾತನೆಯಾಗುತ್ತಿದೆ – ನಿನ್ನನ್ನು ಅಗಲಬೇಕು ಎಂಬ ಕಾರಣದಿಂದಲ್ಲ.

ನಿಜ – ನಿನ್ನನ್ನು ಅಗಲುತ್ತೇನೆ ಎನ್ನುವ ಭೀತಿಯಿಂದ ನನ್ನ ಕಣ್ಣು ರಕ್ತಾಶ್ರುವನ್ನು ಕರೆಯುತ್ತಿಲ್ಲ. ಊಹೂ–ನಿನ್ನಿಂದ ಅಗಲುವೆನೆಂಬ ಭೀತಿಯೇ

ನನಗಿಲ್ಲ. ಇಂದಲ್ಲ, ನಾಳೆ ಎಂದಿದ್ದರೂ, ಎಲ್ಲೆಲ್ಲಿ ಅಲೆದರೂ ನೀನು ನನ್ನವನೇ, ನನ್ನ ಬಳಿಗೇ ಬರುತ್ತೀಯ. ಆ ನಂಬಿಕೆ ನನಗಿದೆ ರಾಜಾ. ಆ ನಂಬಿಕೆಯೇ ಇಂದು ನನಗೊದಗಿದ ಆತ್ಮಹತ್ಯೆಯ ಭಾವನೆಯಿಂದ ಕಾಪಾಡಿದ ಬಂಧು. ಹೆದರಬೇಡ ರಾಜಾ. ಇಂದಲ್ಲ, ಎಂದೆಂದೂ ನಾನು ಆತ್ಮಹತ್ಯೆ ಮಾಡಿಕೊಳ್ಳಲಾರೆ. ಹೆದರಬೇಡ, ನಿನ್ನ ಒಲವು ನನ್ನನ್ನು ಕಾಪಾಡುತ್ತದೆ – ಹಾಗೇ ನನ್ನ ಒಲವೂ ನಿನ್ನನ್ನು ಕಾಪಾಡಲಿ ಎಂದು ಬಯಸುತ್ತೇನೆ.

ಇಂದು, ನಿನ್ನ ಬಾಳಿನಿಂದ, ನಾನಾಗಿಯೇ ದೂರವಾಗಬಯಸುತ್ತಿರುವ ಈದಿನ ಇಂಥ ಮಾತನ್ನು ಬರೆಯುವುದು ನಿನಗೆ ವಿಚಿತ್ರವೆಂದೇ ತೋರಬಹುದು. ಆದರೆ ನನಗೆ ಇದರಲ್ಲಿ ವಿಚಿತ್ರವೇನೂ ಕಾಣುವುದಿಲ್ಲ. ನಿಮ್ಮಿರ್ವರ ಭವಿಷ್ಯ ನನಗೆ ಕಾಣುತ್ತಿದೆ—ನಮ್ಮಿರ್ವರ ಕೊನೆ – ಒಬ್ಬರೊಬ್ಬರ ತೋಳಿನಲ್ಲಿ, ಅದುವರೆಗೆ – ನಿನ್ನ ದಾರಿ ನಿನಗೆ.

ನನ್ನ ಮಾತನ್ನು ನೀನು ನಂಬುವುದಿಲ್ಲ – ಅಲ್ಲವೇ ? ವಿಚಿತ್ರ ಆದರ್ಶವಾದವನ್ನು ನಂಬಿದ ನಿನಗೆ ನನ್ನ ನಂಬುಗೆ ನಗೆಪಾಟಲಾಗಿಯೇ ತೋರಬಹುದು ; ಆದರೂ ನಂಬು –

ನೀನಿಂದು ವಿಚಿತ್ರ ಆದರ್ಶವಾದದ ಬೆನ್ನು ಹತ್ತಿದೀಯ ರಾಜಾ, ನಿನ್ನ ಆದರ್ಶವನ್ನು ನಾನು ಅಲ್ಲಗಳೆಯುವುದಿಲ್ಲ. ಆದರ ಬಗ್ಗೆ ನನಗೆ ಪ್ರಚಂಡ ಭಕ್ತಿ ಇದೆ, ಗೌರವವಿದೆ ; ಆ ಆದರ್ಶಕ್ಕಾಗಿ ನನ್ನ ಪ್ರಾಣವನ್ನು ಕೊಡಬಲ್ಲೆ.

ಆದರೆ ಅದರ ಸಾಧನೆಗೆ ನೀನು ಹಿಡಿದಿರುವ ದಾರಿ ಸರಿಯಲ್ಲ.

' ನೀನೇ ನನ್ನ ಬಾಳಿನಿಂದ ದೂರ ಹೋಗುವಾಗ ನನ್ನ ಆದರ್ಶದ ಚಿಂತೆ ನಿನಗೇಕೆ ? ' ಎಂದು ರೇಗಬೇಡ ರಾಜಾ, ಎಲ್ಲಿಯವರೆಗೆ ನಾನು ನಿನ್ನವಳು ಎಂದುಕೊಂಡಿದೇನೋ ಅಲ್ಲಿಯವರೆಗೂ ಆ ಬಗ್ಗೆ ಚಿಂತಿಸಲು, ಮಾತನಾಡಲು ನನಗೆ ಅಧಿಕಾರವಿದೆ. ಆ ಅಧಿಕಾರಬಲದ ಮೇಲೆ ಹೇಳುತ್ತೇನೆ—

ನೀನು ಹಿಡಿದಿರುವ ದಾರಿ ಸರಿಯಾಗಿಲ್ಲ. ಈ ದಾರಿ ನಿನ್ನನ್ನು ನಿನ್ನ ಆದರ್ಶದತ್ತ ನಡೆಸುವುದಿಲ್ಲ.

ನನಗೂ ರಾಜಕೀಯಕ್ಕೂ ಸಂಬಂಧವಿಲ್ಲ ; ರೋಗಕ್ಕೆ ರಾಜಕಾರಣದ ಭೇದವಿಲ್ಲ ; ಸೇವೆಗೆ ಸಮಾಜಪ್ರಜ್ಞೆಯ ಅರಿವು ಬೇಕಾಗಿಲ್ಲ ; ಸಾಯುವವನನ್ನು ಉಳಿಸಲು ಯಾರೂ ಅಡ್ಡ ಬರುವುದಿಲ್ಲ ಎಂದು ಹೇಳಿದೆ. ವಿಚಾರದಿಂದ ಕಣ್ಣು ತೆರೆಯದ ನಿನಗೆ ಹಾಗೆ ತೋರುತ್ತದೆ.

ಆದರೆ ಅದು ಸುಳ್ಳು.

ಒಂದೊಂದು ವರ್ಗಕ್ಕೇ ಒಂದೊಂದು ಸತ್ಯ ಎನ್ನುವ ಸಿದ್ಧಾಂತವನ್ನು

ಒಪ್ಪಿದ ದ್ವಂದ್ವಯುಕ್ತವಾದ ಈ ಸಮಾಜದಲ್ಲಿ ಸೇವೆಯ ಸ್ವಾತಂತ್ರ್ಯವೂ ನಮಗಿಲ್ಲ. ಆಳುವ ವರ್ಗ ಅದರ ಸೇವೆಯನ್ನು ನೀನು ಮಾಡುವುದಾದರೆ ಅದನ್ನು ಸ್ವಾಗತಿಸುತ್ತದೆ; ಅದಕ್ಕೆ ವಿರುದ್ಧವಾಗಿ, ಯಾವ ವರ್ಗದ ಶೋಷಣೆಯಿಂದಲೇ ಅದರ ಬಾಳು ಭದ್ರವಾಗಿದೆಯೋ ಅದರ ಸೇವೆಗೆ ನಿಂತಾಗ, ನಿನ್ನನ್ನು ಸ್ವಾಗತಿಸಿದ ವರ್ಗವೇ ನಿನ್ನನ್ನು ಶೂಲಕ್ಕೇರಿಸಲು ಸಿದ್ಧವಾಗುತ್ತದೆ—

ಶೋಷಕ ವರ್ಗಕ್ಕೆ ಗೊತ್ತಿರುವ ಒಂದೇ ಒಂದು ಸತ್ಯ – ಸ್ವಹಿತರಕ್ಷಣೆ. ಎಲ್ಲ ವಿಧಿ ನಿಯಮಗಳೂ ಅದಕ್ಕೆ ತಲೆಬಾಗಬೇಕು, ಇಲ್ಲವೇ ನಾಶವಾಗಬೇಕು, ಜಗತ್ತಿನ ಬಹುಭಾಗಗಳಲ್ಲಿ ಇಂದು ಮೊಳಗುತ್ತಿರುವುದು ಇದೇ ಸತ್ಯದ ಜಯಭೇರಿ.

ಎಲ್ಲರ ಉದ್ಧಾರ, ಲೋಕಹಿತಕ್ಕಾಗಿ ಬಂದ ಮತಗಳು ಇಂದೇನಾಗಿವೆಯೋ ಯೋಚಿಸು – ಅವೂ ಶ್ರೀಮಂತರ ವಂದಿಮಾಗಧರಾಗಿವೆ. ವಿಧಿ, ಕರ್ಮ, ಪರಲೋಕದ ಆಕರ್ಷಕ ಪದಗಳನ್ನು ಉಪಯೋಗಿಸಿ, ಗುಲಾಮರಿಗೆ, ಗುಲಾಮಗಿರಿಯೇ ಸ್ವರ್ಗ ಎಂಬ ಭ್ರಮೆಯನ್ನು ಮೂಡಿಸಿ, ಅವರನ್ನು ಶಾಶ್ವತ ದಾಸ್ಯಕ್ಕೆ ತಳ್ಳುತ್ತಿವೆ; ಧರ್ಮವೂ ಮಠಾಧಿಪತಿಗಳ ಗುತ್ತಿಗೆಯಾಗಿ, ಸುಲಿಗೆಯ ಅಸ್ತ್ರವಾಗಿದೆ.

ವೈದ್ಯವೃತ್ತಿ ಇದಕ್ಕೆ ಹೊರತು ಎಂಬ ಭ್ರಮೆಯನ್ನು ಬಿಡು – ವೈದ್ಯವೃತ್ತಿಯೂ ಇಂದಿನ ಶ್ರೀಮಂತರ ಕಡೆಗೆ ಸೇರಲು ಬೇಟೆಯ ನಾಯಾಗಿದೆ. ಸರ್ವಜನಹಿತಕ್ಕಿಂತ ಶ್ರೀಮಂತರ ಬೊಜ್ಜು ಬೆಳೆಸಿ, ಅವರ ಹಿತ ರಕ್ಷಿಸುವುದರಲ್ಲೇ ಪರ್ಯವಸಾನವಾಗಿದೆ.

ಬಂಡವಾಳ ಶಾಹಿಯ ಬೇರೆಬೇರೆ ಮೊಗವಾಡ ಧರಿಸಿದ ದೈತ್ಯ ಪ್ರವೃತ್ತಿಗಳು ತಾಂಡವಾಡುತ್ತಿರುವ ಈ ಜಗತ್ತಿನಲ್ಲಿ ವಿಜ್ಞಾನವೂ ಬಂಡವಾಳ ಶಾಹಿಯ ಬಾಲಬಡಕವಾಗಿದೆ – ವೈದ್ಯ ವಿಜ್ಞಾನವೂ.

ನನ್ನ ಮಾತನ್ನು ನಂಬುವುದಿಲ್ಲವೇ–ಬಂಡವಾಳಶಾಹಿ ಅತ್ಯಂತ ಪರಿಣತಾವಸ್ಥೆಯಲ್ಲಿರುವ ಅಮೆರಿಕಾದಲ್ಲಿ ವೈದ್ಯವಿಜ್ಞಾನ ನಡೆಯುತ್ತಿರುವ ಜಾಡನ್ನು ಕೊಂಚ ಕಣ್ಣು ತೆರೆದು ನೋಡು-ಅಲ್ಲಿನ ಔಷಧ ಸಾಮಗ್ರಿಗಳ ನಿರ್ಮಾಣ ಕೆಲವೇ ಬಂಡವಾಳಶಾಹಿ ಸಂಸ್ಥೆಗಳ ಮೀಸಲು ಗುತ್ತಿಗೆ, ಅವರಲ್ಲದೆ ಬೇರೆ ಯಾರೂ ತಯಾರಿಸಲಾರರು. ತಯಾರಿಸಿ ಬದುಕಲಾರರು. ಅವರು ತಯಾರಿಸಿದ ಔಷಧಿ ಗುಣವಿರಲಿ, ಬಿಡಲಿ, ಮರುಗಳಿಗೆಯೇ ಅವು ಸರ್ವರೋಗ ನಿವಾರಕಗಳೆಂದು ಪತ್ರಿಕೆಗಳು ಸಾರುತ್ತವೆ. ಜಾಹಿರಾತಿನಿಂದಲೇ ಬದುಕುವ ಪತ್ರಿಕೆಗಳಿಗೆ ಈ ಔಷಧ ನಿರ್ಮಾಪಕರು ನೀಡುವ ಹಿಡಿಗೂಳು ದಿನದ ಅನ್ನ. ಜನ ಪತ್ರಿಕೆಗಳನ್ನು

ನಂಬುತ್ತಾರೆ. ಈ ಬಂಡವಾಳಗಾರರು ಆ ಪತ್ರಿಕೆಗಳಿಗೆ ಜಾಹಿರಾತಿನ ತುಣುಕು ರೊಟ್ಟಿ ನೀಡಿ, ಅದನ್ನು ತಮ್ಮ ಸಾಕಿದ ನಾಯಿಯನ್ನಾಗಿ ಮಾಡಿಕೊಂಡಿದಾರೆ. ಅದಿರಲಿ – ಇಂದು ಔಷಧ ಸಾಮಗ್ರಿಗಳ ಬೆಲೆ ಎಷ್ಟು ದುಬಾರಿ ಎಂಬುದನ್ನೂ ನೀನು ಬಲ್ಲೆ ಅಲ್ಲವೇ ? ಅದಕ್ಕೆ ಕಾರಣ ಏನು ಎಂದುಕೊಂಡಿದೀಯ. ನಿಜ ವಾದ ಔಷಧದ ಬೆಲೆ ನೀನು ಕೊಡುವ ಬೆಲೆಯ ಹತ್ತರಲ್ಲಿ ಒಂದು ಪಾಲು ; ಉಳಿದುದೆಲ್ಲಾ ಜಾಹಿರಾತು, ಆಕರ್ಷಕ ಪೆಟ್ಟಿಗೆ, ಬಂಡವಾಳಗಾರರ ಲಾಭ. ಬಂಡವಾಳಗಾರ ಔಷಧ ತಯಾರು ಮಾಡುವುದು, ಜನ ಬದುಕಲಿ ಎಂದಲ್ಲ, ತನ್ನ ಭಂಡಾರ ಬೆಳೆಸಿಕೊಳ್ಳಲು. ಲಾಭದಾಸೆಯೇ ಖಾಸಗೀ ಉದ್ಯಮದ ಬುನಾದಿ. ಅವರು ಜಾಹಿರಾತು ಮಾಡುವುದೂ ಜನಕ್ಕೆ ವಿಷಯ ತಿಳಿಸಲಲ್ಲಿ, ಹೆಚ್ಚು ಜನ ತಮ್ಮ ಮಾಲನ್ನೇ ಕೊಳ್ಳುವಂತೆ ಮಾಡಲು. ಅದಕ್ಕಾಗಿಯೇ ಆ ಅರೆಬೆತ್ತಲೆ ಹೆಣ್ಣಿನ ಚಿತ್ರಗಳ ಜಾಹಿರಾತು. ತಮ್ಮ ಮಾಲು ಮಾರಾಟವಾಗಲಿ ಎಂದು ಬಂಡವಾಳಗಾರ ಮಾಡುವ ಜಾಹಿರಾತಿನ ವೆಚ್ಚವನ್ನು ಕಡೆಗೆ ಆ ಔಷಧಿ ಯನ್ನು ಕೊಳ್ಳುವ ರೋಗಿಯೇ ಕೊಡಬೇಕಾಗುತ್ತದೆ. ಇದರಿಂದಾಗಿಯೇ ಎಷ್ಟೋ ಜನ ರೋಗಿಗಳು ಔಷಧ ಕೊಳ್ಳಲಾರದೆ ಸಾವಿಗೆ ಶರಣಾಗುತ್ತಿರುವುದು. ಪಾರ್ಸಿ ಹುಡುಗಿಯ ವಿಚಾರವಾಗಿ ನಾನಾಡಿದ ಮಾತು ಕೇಳಿ ನಿನಗೆ ಸಿಟ್ಟು ಬಂತಲ್ಲವೇ ? ನಿಜ. ನನಗೂ ಬಳಿಕ ಪಶ್ಚಾತ್ತಾಪವಾಯಿತು. ಆದರೆ ನಾನಾಡಿ ದುದು ಸತ್ಯ. ಹದಿನೆಂಟರ ಹರೆಯದಲ್ಲಿದ್ದ ಮುಸ್ಲಿಂ ಹುಡುಗಿಯೊಬ್ಬಳು ಕ್ಷಯ ರೋಗ ಪೀಡಿತಳಾಗಿ ಬಂದಾಗ, ಅವಳ ಬಡ ಗಂಡ ' ಪೆನ್ಸಿಲಿನ್ ' ನ ಬೆಲೆ ಕೇಳಿ ಗಡಗಡ ನಡುಗಿ, ಆ ಹುಡುಗಿಗೆ ಔಷಧ ಕೊಡಿಸದೆ ಹಾಗೇ ಮನೆಗೆ ಕರೆ ದೊಯ್ದುದು ನಿನಗೆ ನೆನಪಿದೆಯೇ ? ಈಗ ಹೇಳು ಆ ಹುಡುಗಿಯನ್ನು ಕೊಂದದ್ದು ಯಾವುದು – ಕ್ಷಯವೋ, ಔಷಧದ ದುಬಾರಿ ಬೆಲೆಯೋ ? ಔಷಧಿಯ ಬೆಲೆ ಬಡವರ ಕೈಮೀರುವಂತೆ ಮಾಡಿದ ಬಂಡವಾಳ ಶಾಹಿಯ ಸ್ವಾರ್ಥವೋ. ನೀನು ಒಪ್ಪಬಹುದು, ಬಿಡಬಹುದು ರಾಜಾ, ಆದರೆ ಎಲ್ಲ ರೋಗರುಜಿನಗಳ ಬುನಾದಿಯಲೂ ಈ ಬಂಡವಾಳ ಶಾಹೀ ಸ್ವಾರ್ಥದ ಕಾಳ ಸರ್ಪ ಹೆಡೆಯಾಡಿಸುತ್ತಿದೆ. ಅದನ್ನು ನಿರ್ಮೂಲ ಮಾಡದೆ, ಯಾವ ಜಾಡ್ಯವೂ ನಿವಾರಣೆಯಾಗದು.

ಹೀಗೇ ನಾನು ಬೇಕಾದಷ್ಟು ಹೇಳಬಹುದು, ನೂರು ಉದಾಹರಣೆ ಕೊಡಬಹುದು – ಆದರೆ ಇಂದು ನೀನು ಅದನ್ನು ನಂಬಲಾರೆ. ಕಾಲ ಕಾಲಕ್ಕೆ ಮತ್ತೆ ಮತ್ತೆ ಸತ್ಯದ ಪುನರುದ್ಧಾರವಾಗುವಂತೆ, ಒಂದೊಂದು ಅನುಭವದ ಸತ್ಯತೆಯೂ ವ್ಯಕ್ತಿ ಜೀವನದ ಪ್ರತ್ಯಕ್ಷ ಅನುಭವದಿಂದ ಸಿದ್ಧವಾಗಬೇಕು.

ಬಡವರ ಸೇವೆಯ ದೃಷ್ಟಿಯಿಂದ ವೈದ್ಯವೃತ್ತಿ ಕೈಕೊಂಡ ನಿನಗೆ ಈ ಅನುಭವವಾಗುವುದು ಖಂಡಿತ. ಅಂದು ನೀನೂ ಡಾಕ್ಟರು ಕೂಡಾ ರಾಜಕೀಯ ಹೋರಾಟಗಾರನಾಗಬೇಕು ಎನ್ನುವ ಸಿದ್ಧಾಂತಕ್ಕೇ ಬರುತ್ತೀಯ. ನಾನು ಬಲ್ಲೆ.

ಅದಕ್ಕೇ ನಾನು ಹೇಳಿದುದು – ಎತ್ತ ಹೋದರೂ ನೀನು, ಕೊನೆಗೆ ನನ್ನವನೇ ಎಂದು.

ಇಂದು ನಮ್ಮೆದೆಗಳು ಒಂದಾಗಿವೆ ರಾಜಾ, ಅಂದು, ನನ್ನ ಮಾತಿನ ಸತ್ಯ ನಿನಗೆ ಮನವರಿಕೆಯಾದಂದು ನಮ್ಮೀರ್ವರ ಬಾಳಿನ ನಿಜವಾದ ಸಮಾಗಮ ವಾಗುತ್ತದೆ.

ಆ ದಿನಕ್ಕಾಗಿ ನಾನು ಕಾಯುತ್ತೇನೆ – ನಿನ್ನವಳಾಗಿ ಕಾಯುತ್ತೇನೆ. ನನ್ನ ಬಾಳಿನಲ್ಲಿ ಬೇರೆಯುವಸಿಗೆ ಪ್ರವೇಶವಿಲ್ಲ.

ಆದರೂ. ಆದರೂ....... ನಿನಗೆ ಒಂದು ಮಾತು ಹೇಳುತ್ತೇನೆ ಸಿಟ್ಟಾಗದೆ ಕೇಳು ರಾಜಾ.

ಇಂದು ನನಗಾಗಿ ನಿನ್ನ ಬಾಳು ಭಯಂಕರ ಕಷ್ಟಕ್ಕೆ ಸಿಲುಕಿಕೊಂಡಿದೆ. ನನಗಾಗಿ ನಿನ್ನ ತಂದೆ ನಿನ್ನಿಂದ ದೂರವಾಗಿದಾರೆ. ನಿನ್ನ ದೈನಂದಿನ ಜೀವನ ಆರ್ಥಿಕ ದುಸ್ಥಿತಿಯ ಬೇಗೆಯಲ್ಲಿ ಬೇಯಬೇಕಾಗಿದೆ.

ನಾನು ನಿನ್ನವಳು ಎಂದೆ. ನಿಜ. ನಾನು ನಿನ್ನವಳೇ. ನಿನ್ನ ಸುಖವೇ ನನ್ನ ಬಯಕೆ. ಆದುದರಿಂದಲೇ ಹೇಳುತ್ತಿದ್ದೇನೆ – ನೀನು ಈ ಯಾತನೆ ಯಲ್ಲಿ ಬೇಯುುವುದು ಅನಗತ್ಯ. ಮುಂದೆ ನಿನ್ನ ಬಾಳು ನೋವು, ನಿರಾಶೆ ಯಲ್ಲಿ ಬೇಯಬೇಕಾಗಿದೆ. ಇಂದಾದರೂ ಅದಷ್ಟು ಸುಖಪಡು. ನನ್ನನ್ನು ಬಿಡುವುದರಿಂದ ನಿನ್ನ ತಂದೆಯ ಮನಸ್ಸು ತಿರುಗಿ ಅವರು ನಿನಗೆ ಕೊಡುತ್ತಿದ್ದ ಸಹಾಯವನ್ನು ಮುಂದುವರಿಸಿ ನಿನ್ನ ವಿದ್ಯಾರ್ಥಿ ಜೀವನ ನಿರಾಪದವಾಗಲಿ.

ನನಗಾಗಿ ನಿನ್ನ ಯಾವ ಸುಖವನ್ನೂ ಬಲಿಗೊಡಬೇಡ. ಯಾವ ಬಗೆಯ ಬಲಿದಾನವನ್ನೂ ಬಯಸದೆ ನಾನು ನಿನ್ನವಳಾಗಬೇಕು, ನೀನು ನನ್ನವನಾ ಗಬೇಕು ಎಂಬುದೇ ನನ್ನ ಉತ್ಕಟ ಆಕಾಂಕ್ಷೆ.

ಎಲ್ಲೆಲ್ಲಿ ಹರಿದು, ಕಡೆಗೆ ನನ್ನ ಬಳಿಗೆ ಬರುತ್ತೀಯೋ ಬಾ ನನ್ನ ಜೀವ ನದಿಯೇ , ನಿನಗಾಗಿ ಕಾಯುತ್ತೇನೆ.

ಬಾ – ನಿಜ, ನೀನು ಬರುತ್ತೀಯ.

ಆದರೆ 'ಆ' ದಿನದವರೆಗೂ ರಾಜಾ, ಒಂದು ಕೆಲಸ ಮಾಡು. ನೋಡು– ಹೀಗೆ ಹೇಳಿದೆನೆಂದು ಸಿಟ್ಟಾಗಬೇಡ, ಶಪಿಸಬೇಡ, ಬರಲಿರುವ 'ಆ' ದಿನದ ನಿರೀಕ್ಷೆಯಿಂದ ಹೇಳುತ್ತೇನೆ—

ಅಲ್ಲಿಯವರೆಗೂ ನಾವಿಬ್ಬರೂ ಒಬ್ಬರನ್ನೊಬ್ಬರು ಹೆಚ್ಚು ಕಲೆಯದಿರುವುದೇ ಅಪೇಕ್ಷಣೀಯ. ಏಕೆ ಗೊತ್ತೆ?

ಮೊನ್ನೆಯ ದಿನ ನಮ್ಮಿಬ್ಬರ ಮಾತು ಸಾಕಷ್ಟು ವಿರಸದ ಘಟ್ಟ ಮುಟ್ಟಿತ್ತು. ನಾವಿಬ್ಬರೂ ಕಲೆತಾಗ ಮಾತು ಎಷ್ಟು ಅನಿವಾರ್ಯವೋ. ಭಿನ್ನಾಭಿಪ್ರಾಯವೂ ಅಷ್ಟೆ ಅನಿವಾರ್ಯ. ಬಿನ್ನಾಭಿಪ್ರಾಯ ನಮ್ಮಿರ್ವರ ಮಧುರ ಸ್ನೇಹದ ಹಾಲಿಗೆ ಹುಳಿ ಹಿಂಡಿ, ಮುಂದೆ ನಾವು ಒಂದಾಗುವ ದಿನಕ್ಕೆ ವಿಘಾತಕವಾಗುವುದು ನನಗೆ ಇಷ್ಟವಿಲ್ಲ. ಆ ಭಯದಿಂದ ನಿನ್ನಲ್ಲಿ ಬೇಡುತ್ತೇನೆ ರಾಜಾ—

ಆದಷ್ಟು ದೂರವಿರೋಣ. ಒಬ್ಬರನೊಬ್ಬರು ನೋಡುವುದು ಬೇಡ.

ಎಂದೆಂದಿಗೂ ಅಗಲದ ಮಧುರ ಮಿಲನದ ನಿರೀಕ್ಷೆಯಿಂದ ಈ ಕೆಲವು ದಿನಗಳ ಅಗಲಿಕೆಯನ್ನು ಸಹಿಸೋಣ.

ಈ ಅಗಲಿಕೆ ಅಸಹ್ಯವಾದಾಗ. ನಿನ್ನ ತುಟಿಗಳಿಗೆ ನನ್ನ ತುಟಿಗಳ ನೆನಪುಕೊಡು.

ನೆನಪಾಯಿತೇ—

ಎಲ್ಲಿ ನಗು ನೋಡೋಣ. ಹಾಗೇ – ನೀನೀಗ ಒಳ್ಳೆಯ ಹುಡುಗ. ಹೀಗೇ ನಗುತ್ತಾ ಇರು.

ಸದಾ ನಿನ್ನ ನಗುವನ್ನೇ ಬಯಸುವ, ನಿನ್ನ,
ಕಾತ್ಯಾಯನಿ

ನಗು....ನಗು....ನಗು....

ಕಾತ್ಯಾಯನಿ ಬರೆದ ಆ ಸಾಲನ್ನು ಕಂಬನಿಗರೆಯುತ್ತಾ ಓದಿದೆ.

ನಗು... ನಗು ನಗು....

ಕಾತ್ಯಾಯನಿ ಬರೆದ ಆ ಸಾಲು, ಬರೆವಾಗ ತುಳುಕಿದ ಕಂಬನಿಯಿಂದ ಕದಡಿ ಬಣ್ಣಗೆಟ್ಟಿತ್ತು ; ಕೈ ನಡುಗಿ ಅಕ್ಷರಗಳು ಅಂದ ಗೆಟ್ಟಿದ್ದವು,

ಆದರೂ........

ನಗು....ನಗು....ನಗು........ 'ಎಲ್ಲಿ ನಗು ನೋಡೋಣ – ಹಾಗೇ – ನೀನೀಗ ಒಳ್ಳೆಯ ಹುಡುಗ!'

ಕಂಬನಿಗರೆಯುತ್ತಾ ಓದಿದೆ—

'ಹೀಗೇ ನಗುತ್ತಾ ಇರು'

ನನ್ನ ಬಾಳಿನ ಸುತ್ತಲೂ ಧಿಗ್ಗನೆ ಬೆಂಕಿ ಹೊತ್ತಿ, ನೂರು ಕೋಟಿ ನಾಲಗೆಗಳು ನನ್ನನ್ನು ನುಂಗಲು ಹರಿದವು. ನೂರು ನೆನಪುಗಳ ಪ್ರೇತಗಳು ವಿಕಟಾ

ಕಾರ ಧರಿಸಿ ಕೆನೆದವು. ಲಕ್ಷ ಲಕ್ಷ ಭಗ್ನಬಯಕೆಗಳು ನನ್ನೆದೆಯ ರಂಗದಲ್ಲಿ ರಣತಾಂಡವವನ್ನಾಡಿದವು. ನನ್ನ ಹೃದಯ ಹೆದರಿ, ಹಂಬಲಿಸಿ ಚೀರಿತು—

' ಕಾತ್ಯಾಯನೀ.....ಕಾತ್ಯಾಯನೀ .. .ಕಾತ್ಯಾಯನೀ... ನಿನ್ನ ಹಂಬಲ ವನ್ನು ಬಿಡಲಾರೆ. ನಿನ್ನನ್ನು ನೋಡದೆ ಬದುಕಲಾರೆ. ನನ್ನ ಬಾಳಿಗೆ ಈ ಅನಿರೀಕ್ಷಿತ ಕಾಳ್ಗಿಚ್ಚನ್ನೇಕೆ ಒಟ್ಟಿದೆ ಕಾತ್ಯಾಯನೀ....ಇದೇನೇ ನಿನ್ನ ಪ್ರೀತಿ.... ಇಂಥ ಕಾಗದ ಬರೆವ ಮೊದಲು ನನ್ನನ್ನೇಕೆ ವಿಷವಿಟ್ಟು ಕೊಲ್ಲಲಿಲ್ಲ.'

ಮೂಕನಂತೆ ಕಂಬನಿಗರೆಯುತ್ತಾ ಕುಳಿತೆ – ಅಷ್ಟು ಹೊತ್ತು.

ವಿಚಿತ್ರ ದಾಹ ನನ್ನನ್ನು ದಹಿಸತೊಡಗಿತು. ಎದ್ದು ಹೋಗಿ ಇದ್ದಷ್ಟು ನೀರನ್ನು ಕುಡಿದೆ. ಕೋಣೆಯಲ್ಲೇ ಸುತ್ತಾಡಿದೆ. ಗೋಡೆಗೆ ಹಣೆ ಘಟ್ಟಿಸಿದೆ.

ಕೋಣೆಯ ಗೋಡೆ, ಕಿಟಕಿ, ಬಾಗಿಲು, ಚಾಪೆ, ಹಾಸಿಗೆ, ಪುಸ್ತಕ, ಅಡಿಗೆಯ ಒಲೇ ಪಾತ್ರೆ ಎಲ್ಲವೂ ನನ್ನಂತೆಯೇ ಚೀರುತ್ತಿದ್ದವು—

' ಕಾತ್ಯಾಯನೀ....ಕಾತ್ಯಾಯನೀ .. ಕಾತ್ಯಾಯನೀ....'

' ಬಿಟ್ಟು ಹೋದೆಯಾ, ನನ್ನನ್ನು ಬಿಟ್ಟು ಹೋದೆಯಾ ಕಾತ್ಯಾಯನಿ. ನಗಲೆ....ನಾನು ಬದುಕಲೆ....ಯಾರಿಗಾಗಿ... "

' ನಾನು ನಿನ್ನವಳು, ಎಂದೆಂದಿಗೂ ನಿನ್ನವಳೇ ರಾಜಾ, ನಿನ್ನವಳೇ '

— ನೆಲದ ಮೇಲೆ ಬಿದ್ದ ಕಾತ್ಯಾಯನಿಯ ಕಾಗದ ಹೇಳಿತು.

' ನಿನ್ನವಳೇ '— ಒಲವು.

' ನನ್ನ ಬಳಿ ಸುಳಿಯಬೇಡ ' ಇದು ....ಇದು ಒಲವೇ.........ಈ ಯಾತನೆ, ಈ ಭಯಂಕರ ದಾಹ, ಮೈ ಮನಸ್ಸುಗಳೆರಡನ್ನೂ ಒಟ್ಟಿಗೆ ದಹಿಸುತ್ತಿರುವ ದಗೆ – ಇವೆಲ್ಲಕ್ಕೂ ಕಾರಣಳಾದ ಕಾತ್ಯಾಯನಿ.. ಈ ಅಗ್ನಿಕುಂಡಕ್ಕೆ ನನ್ನನ್ನು ದೂಡಿದ ಕಾತ್ಯಾಯನಿ....'

ಊಹೂ ಕಾತ್ಯಾಯನೀ ನೀನು ನನ್ನ ಒಲವಲ್ಲ, ಹಗೆ.

ನೆಲದ ಮೇಲೆ ಬಿದ್ದಿದ್ದ ಕಾಗದವನ್ನು ಸುಡುವವನಂತೆ ನೋಡಿದೆ. ಹರಿದು ಹಾಕಲೆಂದು ಕೈಗೆತ್ತಿಕೊಂಡೆ...

' ಸದಾ ನಿನ್ನ ನಗುವನ್ನೇ ಬಯಸುವ, ನಿನ್ನ, ಕಾತ್ಯಾಯನಿ.'

ಆ ಸಹಿಯನ್ನೇ ಕಾತ್ಯಾಯನಿಯೆಂದು ಚುಂಬಿಸಿದೆ. ತುಟಿಗಳ ನೆನಪು ಮತ್ತೆ ನನ್ನೆದೆಯಲ್ಲಿ ಜ್ವಾಲಾಮುಖಿಯಂತೆ ಕೆದರಿ ಉರಿಗಾರಿತು.

ಕಾತ್ಯಾಯನಿಯನ್ನು ಅಗಲಿ ಒಂದು ನಿಮಿಷವೂ ಇರುವುದು ಅಸಾಧ್ಯವಾಯಿತು. ಅವಳ ಮೇಲೆ ನನ್ನಲ್ಲಿದ್ದ ಪ್ರೀತಿ ಜಲಪಾತದಂತೆ ಭೋರ್ಗರೆಯಿತು. ಅವಳ ತೋಳ ಸೆರೆಯಲ್ಲದೆ, ಉಸಿರು ಕಟ್ಟಿಸಿ ಕೊಲ್ಲುವ ಈ ಪ್ರವಾಹದಲ್ಲಿ ಬದುಕ

ಲಾರೆ ಎನಿಸಿತು. ಆ ಕಾಗದ ಬರೆದುದಕ್ಕಾಗಿ ಅವಳ ಮೇಲೆ ಸಿಟ್ಟು ಬಂತು, ಭಯಂಕರ ಸಿಟ್ಟು.

ಶಿಕ್ಷಿಸಬೇಕು....ಆ ಕಾಗದ ಬರೆದುದಕ್ಕಾಗಿ ಅವಳನ್ನು ಚೆನ್ನಾಗಿ ಶಿಕ್ಷಿಸಬೇಕು....

ಹಿಡಿದು—

ಅವಳ ಮೈ ಹಿಂಡುವಂತೆ ತಬ್ಬಿ ಚುಂಬಿಸಬೇಕು.

ಶಿಕ್ಷಿಸಬೇಕು

ಶಿಕ್ಷಿಸಿ, ಹಾಗೆ ಬರೆದುದು ತಪ್ಪಾಯಿತು ಎನಿಸಬೇಕು. ಆ ಮಾತು, ಆ ಕೆಂದುಟಿಗಳ ನಡುವೆ ಮೂಡಿ ಬರುವ ಮೊದಲೇ ಹೀರಬೇಕು.

‘ ಇಲ್ಲ ಕಾತ್ಯಾಯನಿ ನಿನ್ನನ್ನಗಲಿ ಬದುಕಲಾರೆ ’

ಆ ಭಾವನೆ ಬರುತ್ತಿದ್ದ ಹಾಗೇ. ಇದ್ದ ಹಾಗೇ ಚಪ್ಪಲಿ ಮೆಟ್ಟಿ, ಬಾಡಿಗೆಯ ಸೈಕಲ್ ತೆಗೆದುಕೊಂಡು, ಕಾತ್ಯಾಯನಿಯ ಮನೆಯತ್ತ ಧಾವಿಸಿದೆ.

ಎಷ್ಟು ದೂರ... ಎಷ್ಟು ದೂರ ಅವಳ ಮನೆ.

ಯುಗಯುಗಾಂತರಗಳ ಬಳಿಕ ಅವಳ ಮನೆ ಸಿಕ್ಕಿತು.

ಮನೆಯ ಮುಂದಿನ ವರಾಂಡಾದಲ್ಲಿ ಮಕ್ಕಳೊಂದಿಗೆ ಕುಳಿತಿದ್ದ ಕಾತ್ಯಾಯನಿಯ ಅತ್ತಿಗೆಗೆ ನನ್ನನ್ನು ನೋಡಿ ಗಾಬರಿಯಾಗಿರಬೇಕು.

“ ಇದೇನು ರಾಜಶೇಖರ್, ಹೀಗೇ ಏದುತ್ತಿದ್ದೀರಿ. ಏನಾಯಿತು ? ”

—ಎಂದು ಕೇಳಿದರು.

“ ಕಾತ್ಯಾಯನಿ ಮನೆಯಲಿಲ್ಲವೇ ? ”

—ಎದೆಯನ್ನು ಬಿರಿದು ನುಗ್ಗುತ್ತಿದ್ದ ಉಸಿರನ್ನು ತಡೆಹಿಡಿದು ಕೇಳಿದೆ.

“ ಇಲ್ಲ.”

“ ಎಲ್ಲಿ ಹೋಗಿದಾರೆ ? ”

“ ಊರಿನಲ್ಲಿಲ್ಲ.”

“ ಆ .. ಊರಿನಲ್ಲಿಲ್ಲವೆ ? ಎಲ್ಲಿಗೆ ಹೋದರು.”

“ ಈ ದಿನ ಮಧ್ಯಾಹ್ನದ ರೈಲಿಗೆ ಬೆಂಗಳೂರಿಗೆ ಹೋದಳು. ಬರುವುದು ಇನ್ನು ಒಂದು ವಾರವಾಗುತ್ತದೆ ಎಂದಳು.”

“ ಬೆಂಗಳೂರಿಗೆ ? ಏಕೆ ?

“ ಏಕೋ ನನಗೆ ತಿಳಿಯದು. ಇದಕ್ಕಿದ್ದ ಹಾಗೇ ಈ ದಿನ ಮಧ್ಯಾಹ್ನ ಹೊರಡುವ ನಿಶ್ಚಯ ಮಾಡಿ, ಹೊರಟೇ ಬಿಟ್ಟಳು. ಅಂದ ಹಾಗೆ ಮರೆತು ಹೋಗಿತ್ತು. ಹೋಗುವಾಗ ‘ ನೀವು ಮನೆಯಕಡೆ ಬರಬಹುದು. ಬಂದರೆ

ಕೊಡಿ' ಎಂದು ಹೇಳಿ ಒಂದು ಕಾಗದ ಕೊಟ್ಟು ಹೋದಳು. ಕುಳಿತುಕೊಳ್ಳಿ. ತಂದುಕೊಡುತ್ತೇನೆ."

—ಎಂದು ಆಕೆ ಒಳಗೆ ಹೋಗಿ ಬಂದು ಒಂದು ಕವರು ತಂದುಕೊಟ್ಟರು.

ಅದನ್ನು ಅಲ್ಲೇ ಒಡೆದು ನೋಡಿದೆ – ಅದರಲ್ಲಿದ್ದುದು ನಾಲ್ಕೇಸಾಲು—

" ರಾ ಜಾ,

ಈ ದಿನ ನಿನಗೆ ನನ್ನ ಕಾಗದ ಸೇರುತ್ತದೆ. ಅದನ್ನು ಓದಿ ನೀನು ಇಲ್ಲಿಗೆ ಬರುತ್ತೀಯ. ನಾನು ಬಲ್ಲೆ ರಾಜಾ. ನಿನ್ನನ್ನು ನೋಡಿದ ಬಳಿಕ ನನ್ನ ಯಾವ ನಿರ್ಧಾರವೂ ಬದುಕಲಾರದು. ಆ ಭಯದಿಂದಲೇ ಬೆಂಗಳೂರಿಗೆ ಓಡಿ ಹೋಗುತ್ತಿದ್ದೇನೆ. ಯಾವುದಕ್ಕೂ ಹೆದರದವಳು – ಈಗ ನಿನಗೆ ಹೆದರುವ ಹಾಗಾಯಿತು. ಇದು ನಿನ್ನ ಗೆಲವು ರಾಜಾ.

ಒಂದು ಮಾತು ಹೇಳಲೇ – ನೀನಿನ್ನು ನನ್ನನ್ನು ಹುಡುಕಿಕೊಂಡು ಬರಬೇಡ. ಬರುವಾಗ ನಾನೇ ನಿನ್ನನ್ನು ಹುಡುಕಿಕೊಂಡು ಬರುತ್ತೇನೆ. ಖಂಡಿತ. ನನ್ನನ್ನು ನಂಬುವುದಿಲ್ಲವೇ ?

ಹೋಗು: ವೃಥಾ ಬಳಲಬೇಡ. ನಾಲ್ಕು ದಿನ, ನಾಲ್ಕೇ ನಾಲ್ಕು ದಿನ ನನ್ನನ್ನು ಮರೆತು ನಿನ್ನ ಓದು, ಆದರ್ಶದ ಚಿಂತೆ ಮಾಡು, ಅದನ್ನು ಮರೆಯ ಬೇಡ.

ನಾಲ್ಕು ದಿನ... ನಾಲ್ಕೇ ನಾಲ್ಕು ದಿನ....ನಾನೂ ಬಹು ದಿನ ನಿನ್ನ ಅಗಲಿಕೆ ಸಹಿಸಲಾರೆ ರಾಜಾ. ನಾಲ್ಕು ದಿನ. ನಾಲ್ಕೇ ನಾಲ್ಕು ದಿನ. ಬಳಿಕ—

ಎಂದೆಂದಿಗೂ ನಿನ್ನವಳೇ

ಕಾತ್ಯಾಯನಿ."

ಓದಿದೆ – ಆ ಕಾಗದವನ್ನು ಓದಿದವನೇ, ಸಿಡಿಯುತ್ತಿದ್ದ ಎದೆಯನ್ನು ಬಿಗಿ ಹಿಡಿದು 'ಮತ್ತೆ ಬರುತ್ತೇನೆ' ಎಂದು ಹೇಳಿದವನೇ ಸೈಕಲ್ ಹತ್ತಿ ಹೊರಟೆ.

ಸೈಕಲಿನ ಓಟಕ್ಕೆ ಬಿರುಗಾಳಿಯ ಬಲ ಬಂದಿತ್ತು.

ಜೇಬಿನಲ್ಲಿದ್ದ ಕಾತ್ಯಾಯನಿಯ ಕಾಗದ ಕಾರ್ಗಾಲದ ಕಡಲಿನಂತೆ ಭೋರ್ಗರೆಯುತ್ತಿತ್ತು.

'ಹೋಗು....ಹೋಗು... ಹೋಗು.'

ಆ ದಿನ ಬೀದಿ ಬೀದಿ ಸುತ್ತಿ ಬಳಲಿ ಕೋಣೆಗೆ ಬಂದು ಮಲಗಿದೆ. ಹೊತ್ತು ಎಷ್ಟಾಗಿತ್ತೋ ತಿಳಿಯದು. ಮಲಗಿದುದಷ್ಟೇ ನೆನಪು. ಬೆಳಗ್ಗೆ

ಎದ್ದಾಗ, ಎದ್ದು ನಿಲ್ಲಲೂ ಕೈಕಾಲಲ್ಲಿ ಶಕ್ತಿ ಉಳಿದಂತಿರಲಿಲ್ಲ. ನಿಲ್ಲುವ ಪ್ರಯತ್ನ ಮಾಡಿದಾಗ, ನನ್ನ ಸುತ್ತಲಿದ್ದ ಗೋಡೆಗಳೇ ಅತ್ತಿಂದಿತ್ತ ತೂಗಾಡತೊಡಗಿದವು. ಹಾಗೇ ಮಲಗಿದೆ. ಮಲಗಿದ ನೆಲವು ಕಡಲಲೆಯಂತೆ ಏರಿಳಿಯುತ್ತಿತ್ತು.

ಕೈಯ ನಾಡಿಯನ್ನು ಹಿಡಿದು ಪರೀಕ್ಷಿಸಿದೆ, ಸಣ್ಣಗೆ ಜ್ವರವಿತ್ತು. ಕಿವಿಗಳಲ್ಲಿ ಕಡಲು ಮೊರೆಯುತ್ತಿತ್ತು. ಮಿದುಳಿನಲ್ಲಿ ಬಿರುಗಾಳಿ ಕಡೆಯುತ್ತಿತ್ತು. ಹಾಗೇ ಮಲಗಿದ್ದೆ.

ಮಲಗಿದ್ದೆ – ಒಂಟಿಯಾಗಿ.

ಕೋಣೆಯ ಹೊರಗೆ ರಸ್ತೆಯಲ್ಲಿ ಜನಗಳ ಓಡಾಟದ, ಮಾತಿನ, ಗಾಡಿಗಳ ಗಾಲಿಗಳ, ಆಗೊಮ್ಮೆ ಈಗೊಮ್ಮೆ ಮೋಟಾರುಗಳ ಸದ್ದು ಕೇಳಿಸುತ್ತಿತ್ತು. ಹತ್ತಿರದಲ್ಲೇ ಎಲ್ಲೋ ಹೋಟಲಿನ ರೇಡಿಯೋ ಹಾಡುತ್ತಿತ್ತು.

ಜಗತ್ತು ಎಚ್ಚೆತ್ತಿತ್ತು – ನಾನು ಮಲಗಿದ್ದೆ.

ಮಲಗಿದ್ದೆ – ಒಂಟಿಯಾಗಿ.

ಒಂಟಿಯಾಗಿ – ನಿಜ – ಒಂಟಿಯಾಗಿ. ಸುತ್ತ ಕಿಕ್ಕಿರಿದಿದ್ದ ಲೋಕಕ್ಕೂ ನನಗೂ ಏನೂ ಸಂಬಂಧವಿದ್ದಂತಿರಲಿಲ್ಲ. ಹಣ್ಣು ತಿಂದು ಬೀದಿಯ ಧೂಳಿನಲ್ಲಿ ಉಗುಳಿದ ಬೀಜದಂತೆ ಒಂಟಿಯಾಗಿ ಬಿದ್ದಿದ್ದೆ

ಬಿದ್ದಿದ್ದೆ ಒಂಟಿಯಾಗಿ, ಯಾರಿಗೂ ಬೇಡವಾಗಿ.

ನನ್ನಿಂದ ದೂರ ಹೋದ ಕಾತ್ಯಾಯನಿಯೊಂದಿಗೆ ಇಡೀ ಲೋಕವೇ ದೂರ ಹೊದಂತಿತ್ತು. ಸುತ್ತ ಕಿಕ್ಕಿರಿದ ಜಗತ್ತು ನನ್ನ ಒಂಟಿತನವನ್ನು ಅಣಕಿಸಲು ನೆರದ ಬೇರೆ ಲೋಕವೆಂಬಂತೆ ತೋರುತ್ತಿತ್ತು.

ನಾನು ಒಂಟಿ. ನಿಜ, ನಾನು ಒಂಟಿ. ನನ್ನ ಪಾಲಿಗೆ ಯಾರೂ ಇಲ್ಲ, ನನ್ನ ಸುತ್ತ ವ್ಯಾಪಿಸಿದ ಅನಂತ ಶೂನ್ಯದಲ್ಲಿ ನಾನೊಬ್ಬನೇ ಒಬ್ಬ – ಏಕಾಕಿ.

ಹಿಂದೆ ನನಗೆಂದೂ ಈ ಬಗೆಯ ಭಾವನೆ ಬಂದಿರಲಿಲ್ಲ. ಸುತ್ತಲ ನೂರು ಕೋಟಿ ಜನಗಳೊಂದಿಗೆ ಬೆಸೆದಂತಿತ್ತು ನನ್ನ ಬಾಳು.

ಇಂದು – ಗಾಳಿಯಲ್ಲಿ ತೇಲಿಬಿಟ್ಟ ಒಂಟಿ ಎಳೆ.

ಹಿಂದೆಯೂ ಜೀವನದಲ್ಲಿ ಆಪ್ತರಾದವರು ನನ್ನನ್ನು ಬಿಟ್ಟಿದ್ದರು.

ಶ್ರೀಧರ ಇದೇ ಕೊನೆಯ ಕಾಗದವೆಂದು ಬರೆದಿದ್ದ. ಶ್ರೀಧರನನ್ನು ನಾನು ಪ್ರೀತಿಸುತ್ತಿದ್ದೆ. ಆದರೆ ಅವನು ದೂರವಾದಾಗ ನನ್ನ ಬಾಳು ಇಷ್ಟು ಬರಿದಾಗಿ ತೋರಲಿಲ್ಲ.

ತಾಯಿ – ನನ್ನನ್ನು ಸಾಕಿ, ಸಲಹಿದ ಮಮತೆಯ ಅಮೃತ ಮೂರ್ತಿ

ಎಂದೆಂದೂ ಹಿಂದಿರುಗಿ ಬರದಂತೆ ತೆರಳಿದ್ದಳು. ಅಂದು ಒಂದು ಗಳಿಗೆ ಲೋಕ ಬರಿದಾದಂತೆ ತೋರಿದರೂ ಮರುಗಳಿಗೆಯೇ ಅದು ತುಂಬಿಕೊಂಡಿತ್ತು.

ತಂದೆ – ನನ್ನ ತಂದೆ, ಜನ್ಮದಾತ 'ಹೋಗು ಮುಖ ತೋರಿಸಬೇಡ' ಎಂದು ನೂಕಿದ್ದ. ಒಂಟಿಯಾಗಿ ಮನೆಯಿಂದ ಹೊರಬಿದ್ದೆ. ಆದರೂ ಅಂದು ನಾನು ಏಕಾಕಿ ಎನಿಸಲಿಲ್ಲ.

ಆದರೆ ಇಂದು — ಕಾತ್ಯಾಯನಿ ಹೋದಾಗ—

ಇಡೀ ಲೋಕವೇ ಬರಿದಾಗಿ ಹೋಗಿದೆ – ಈ ಲೋಕದ ತುಂಬಾ ಅವಳೊಬ್ಬಳೇ ತುಂಬಿದ್ದಂತೆ. ತುಂಬಿದ ಕೆರೆಯ ತೂಬಿನ ಬಾಗಿಲು ತೆರೆದಾಗ, ನೀರೆಲ್ಲಾ ಹರಿದು ಹೋಗಿ, ಕಸ, ಕೊಚ್ಚೆ, ಕೆಸರು ತುಂಬಿ ವಿಕಾರವಾಗಿ ಕಾಣಿಸುವ ಕೆರೆಯಂತೆ ಕಾಣಿಸುತ್ತಿದೆ ನನ್ನ ಸುತ್ತಲ ಜಗತ್ತು.

ಕಾತ್ಯಾಯನಿ – ಸುಮಾರು ಐದು ಅಡಿ, ಒಂದು ಅಂಗುಲ ಎತ್ತರದ ವ್ಯಕ್ತಿ, ಈ ಲೋಕವನ್ನೆಲ್ಲಾ ವ್ಯಾಪಿಸಿದ್ದಳೇ ?

ಅವಳಿಂದಲೇ ನನ್ನ ಬಾಳು ತುಂಬಿತ್ತೇ ?

ಅವಳು ಹೋದಾಗ ಅದು ಬರಿದಾಗಿ ಹೋಯಿತೇ ?

ಹಾಗಾದರೆ ಏನು ಮುಂದೇನು ?

ಇದ್ದಕ್ಕಿದ್ದ ಹಾಗೆ ಬೆಂಗಳೂರಿನಲ್ಲಿ ಶ್ರೀಧರ ಕೇಳಿದ ಪ್ರಶ್ನೆ ನೆನಪಿನ ಗೋಪುರದಲ್ಲಿ ಮುಳುಗಿತು—

'ಕಾತ್ಯಾಯನಿಯೇ ನಿನ್ನನ್ನು ಬಿಟ್ಟು ಹೋದರೆ ಏನು ಮಾಡುತ್ತೀಯ ?'

ಆ ಪ್ರಶ್ನೆಯೇ ಬರಲಾರದು ಎಂದು ಹೇಳಿದ್ದೆ. ಹೇಳುವಾಗ ಎಷ್ಟು ನಂಬಿಕೆಯಿತ್ತು, ಭಾವನೆಯಿತ್ತು, ಆತ್ಮವಿಶ್ವಾಸವಿತ್ತು.

ಈಗ ಶ್ರೀಧರನ ಶನಿ ನಾಲಿಗೆ ನುಡಿದ ಮಾತೇ ನಿಜವಾದಾಗ—

ಶ್ರೀಧರನಾಡಿದ ಆ ಮಾತು ನೆನಪಿಗೆ ಬಂದಾಗ, ಅದರೊಂದಿಗೆ ಕಾತ್ಯಾಯನಿಯ ಬಗ್ಗೆ ಅವನು ಆಡಿದ ಒಂದೊಂದು ಮಾತೂ ನೆನಪಿಗೆ ಬಂತು.

ಕಾತ್ಯಾಯನಿಯನ್ನು ಪ್ರೀತಿಸುವ ನಾನು ಅವಳನ್ನು ಅಂತಿದ್ದ ಎನಿಸಿತ್ತು. ಆದರೆ ನನಗಿಂತ, ಅವಳ ಬಗ್ಗೆ ನನ್ನಿಂದ ಕೇಳಿದ ಶ್ರೀಧರನೇ ಹೆಚ್ಚು ಚೆನ್ನಾಗಿ ಅರ್ಥ ಮಾಡಿಕೊಂಡಿದ್ದಂತೆ ತೋರಿತು ಈಗ. ಅವನು ಹೇಳಿದ್ದ—

ಕಾತ್ಯಾಯನಿ ನಿನ್ನ ಬಾಳ ಒಲವಲ್ಲ—ಸಮಸ್ಯೆ.

ಕಾತ್ಯಾಯನಿ ನಿನ್ನ ಬಾಳಿನ ಸವಾಲು.

ಕಾತ್ಯಾಯನಿ, ನಿನ್ನ ಆದರ್ಶ ಎರಡನ್ನೂ ಉಳಿಸಿಕೊಳ್ಳುವ ಶಕ್ತಿ ನಿನಗಿದೆಯೇ ?

ಕಾತ್ಯಾಯನಿ ನಿನ್ನವಳಾಗಬೇಕೆನ್ನುತೀಯಾ, ಹಾಗಾದರೆ ಅವಳ ಬಾಳಿನಲ್ಲಿ ದಿನಪತ್ರಿಕೆಯ ಸರ್ಪ ಸುಳಿಯದಿರಲಿ.

ಸುಳಿಯದಿರಲಿ – ದಿನಪತ್ರಿಕೆಯ ಸರ್ಪ !

ನಿಜ... ನಿಜ....ಎಷ್ಟು ನಿಜ ಆ ಮಾತು. ದಿನ ಸರ್ಪ ತನ್ನ ಕರಾಳ ದಂಷ್ಟ್ರಾಘಾತದಿಂದ ನನ್ನ ಕಾತ್ಯಾಯನಿಯನ್ನು ಕೊಂದಿತ್ತು. ಅವಳ ತಲೆಯಲ್ಲಿ ಆ ವಾದ ಈ ವಾದಗಳ ವಿಷವಾಯುವನ್ನು ಫೂತ್ಕರಿಸಿತ್ತು.

'ಕಾತ್ಯಾಯನಿ ನಿನ್ನನ್ನು ಪ್ರೀತಿಸುತ್ತಾಳೆ ನಿಜ. ಆದರೆ ನಿನ್ನಂತೆ ಆ ಪ್ರೀತಿಯೇ ಅವಳ ಬಾಳ ಸರ್ವಸ್ವವೆಂದು ನಂಬಲಾರೆ.'

ಎಷ್ಟು ಖಚಿತವಾಗಿ, ಎಷ್ಟು ಖಡಾ ಖಂಡಿತವಾಗಿ, ಪ್ರವಾದಿಯಂತೆ ಹೇಳಿದ್ದ ಶ್ರೀಧರ. ಕೊನೆಗೂ ನನ್ನ ನಂಬಿಕೆ ಸೋತು ಅವನ ಭವಿಷ್ಯವೇ ನಿಜವಾಯಿತು.

ಕಾತ್ಯಾಯನಿಗೆ ನನಗಿಂತ ಅವಳ ವಾದ – ವಿವಾದಗಳೇ ದೊಡ್ಡವಾದವು.

ಆ ಒಂದು ಗಳಿಗೆಯಲ್ಲಿ ಎಲ್ಲ ವಾದವಿವಾದಗಳ ಬಗ್ಗೆಯೂ ನನ್ನ ಹೃದಯದಲ್ಲಿ ಭಯಂಕರ ದ್ವೇಷ ತುಂಬಿ ಉರಿಯಿತು.

ಒಲವಿಗೆ ಮಾರಿಯಾಗಿ ಬಂದ ವಾದವಿವಾದಗಳ ಕುಲವೇ ನಿರ್ನಾಮವಾಗಲಿ ಎಂದು ಶಪಿಸಿದೆ.

ಶಪಿಸಿದೆ—ಆದರೆ ಏನು ಸಾರ್ಥಕ ?

ಮುಂದೇನು ?

ಶ್ರೀಧರ ನನ್ನ ಕಣ್ಣ ಮುಂದೆ ನಿಂತು ಕೇಳಿದ—

'ಒಂದು ವೇಳೆ....ಒಂದು ವೇಳೆ....ಕಾತ್ಯಾಯನಿ ನಿನ್ನನ್ನು ಬಿಟ್ಟು ಹೋದರೆ—ಆಗ—ಮುಂದೇನು ?'

'ಕಾತ್ಯಾಯನಿಗಾಗಿ ನಿನ್ನ ಬಾಳ ಆದರ್ಶವನ್ನು ಬಲಿಗೊಡುತ್ತೀಯಾ ?'

ಆ ಪ್ರಶ್ನೆ ಕಿವಿ ಸೋಕಿದ ಕೂಡಲೇ ಮನಸ್ಸು ಸೆಟೆದು ನಿಂತು ಹೇಳಿತು—

'ಇಲ್ಲ ...ಇಲ್ಲ....ಇಲ್ಲ....ಯಾರಿಗಾಗಿಯೂ ನನ್ನ ಆದರ್ಶವನ್ನು ಬಲಿಗೊಡುವುದಿಲ್ಲ.'

'ನನ್ನ ಕಾತ್ಯಾಯನಿ – ನನ್ನ ಆದರ್ಶ ಎರಡನ್ನೂ ಬಿಡುವುದಿಲ್ಲ'

—ಎಂದಿದ್ದೆ.

ನಿಜ. ಆ ಎರಡನ್ನೂ ನಾನು ಬಿಟ್ಟಿರಲಿಲ್ಲ. ಆದರೆ ಕಾತ್ಯಾಯನಿಯೇ ನನ್ನನ್ನು ಬಿಟ್ಟಿದ್ದಳು. ಉಳಿದಿದ್ದುದು ನನ್ನ ಆದರ್ಶವೊಂದೇ.

ಆಗಲಿ, ಏನಾದರಾಗಲಿ, ಅದನ್ನು ಬಿಡುವುದಿಲ್ಲ ; ಯಾವ ವಾದವೂ

ನನ್ನ ಆದರ್ಶವನ್ನು ಕೊಲ್ಲಲು ಬಿಡುವುದಿಲ್ಲ ; ದಿನಪತ್ರಿಕೆ, ಜನಗಳ ಕೂಗು—ಯಾವ ವಿಷಸರ್ಪವನ್ನೂ ಅದರ ಬಳಿ ಸುಳಿಯಲು ಬಿಡುವುದಿಲ್ಲ.

ನನ್ನ ಆದರ್ಶ....ನನ್ನ ಆದರ್ಶ........

ಯಾವ ವಾದಗಳ ಚಕ್ರಜಾಲಕ್ಕೂ ಮರುಳಾಗದೆ, ಸಾವಿನ ನಡುವೆ ಬಾಳನ್ನು ಕೊನರಿಸುವ ಆದರ್ಶ—

' ವಿಫಲತೆ ಅದರ ನಿಲ್ದಾಣ '—ಶ್ರೀಧರ ಹೇಳಿದ್ದ.

' ಕಡೆಗೆ ನೀನು ನನ್ನ ಎಡೆಗೇ ಬರುತ್ತೀ. ನಿನ್ನ ಆದರ್ಶ ಮರುಮರೀಚಿಕೆಯ ಬೇಟೆ '—ಕಾತ್ಯಾಯನಿ ಬರೆದಿದ್ದಳು.

ಇಲ್ಲ ...ಇಲ್ಲ .. ಎಂದೂ ಅದ್ನುಹಾಗಾಗಲು ಬಿಡುವುದಿಲ್ಲ.

ನೋಡುತ್ತಿರು ...... ನೋಡುತ್ತಿರು ಕಾತ್ಯಾಯನಿ, ನಿನ್ನ ವಾದ ವಿವಾದಗಳ ಬಿರುಗಾಳಿಯಲ್ಲಿ ನೀನು ಹೊಯ್ದಾಡುತ್ತಿರುವಾಗ, ನಾನು ನನ್ನ ಆದರ್ಶವನ್ನು ಸಾಧಿಸುತ್ತೇನೆ.

ಹೋಗು, ಕಾತ್ಯಾಯನಿ ಹೋಗು. ಎಷ್ಟು ದೂರ ಹೋಗುತ್ತೀಯೋ ಹೋಗು. ಬಿರುಗಾಳಿ, ಮಳೆ, ಬಿಸಿಲು, ಸಿಡಿಲುಗಳಲ್ಲಿ ಎಷ್ಟು ಅಲೆದಾಡಿ ಬರುತ್ತೀಯೋ ಬಾ, ಎಷ್ಟು ಕ್ರಾಂತಿಗಳಲ್ಲಿ ಕುಣಿಯುತ್ತೀಯೋ ಕುಣಿ. ಸಾಕಾದಾಗ ಹಿಂದಿರುಗಿ ಬಾ ಕಾತ್ಯಾಯನಿ. ನಿನಗಾಗಿ ಕಾಯುತ್ತೇನೆ.

ವಾದ – ರಾಜಕೀಯ – ಸಮಾಜಪ್ರಜ್ಞೆ – ಅ ದಾ ವು ದೂ ಹೊ ಸ ಜಗತ್ತನ್ನು ಸೃಷ್ಟಿಸಲಾರದು. ಅವು ಕೊಲ್ಲಲೆಂದು ಬಂದವು. ಕೊಲೆ ಅವುಗಳ ಕೆಲಸ.

ನನ್ನ ಆದರ್ಶ – ಅದೂ ಹೊಸ ಜಗತ್ತನ್ನೇ ಸೃಷ್ಟಿಸದಿರಬಹುದು. ಆದರೆ ಜಾಡ್ಯಗಳ ಕತ್ತಲ ಕೆಸರಿನಲ್ಲಿ ಒಂದು, ಒಂದೇ ಆಸೆಯ ನಗೆಮಲ್ಲಿಗೆಯನ್ನರಳಿಸಬಲ್ಲದು. ಅರಳಿಸುತ್ತೇನೆ.

ಬರುತ್ತೀಯಾ – ಆಗ ನನ್ನ ಬಳಿ ಬಾ ಕಾತ್ಯಾಯನಿ – ಹಾರಿ ದಣಿದ ಹಕ್ಕಿಯಂತೆ ನನ್ನ ಹೃದಯದಲ್ಲಿ ವಿಶ್ರಮಿಸಲು ಬಾ. ಅದು ಸದಾ ಮುಕದ್ವಾರವಾಗಿ ನಿನಗಾಗಿಯೇ ಕಾಯುತ್ತಿರುತ್ತದೆ.

ನನ್ನ ಆದರ್ಶ ಸಾಧನೆಯ ದಾರಿ ಮರಳುಗಾಡಿನ ಪ್ರಯಾಣ ಎಂದೆಯಲ್ಲವೇ ಕಾತ್ಯಾಯನಿ.

ಇರಬಹುದು. ನಾನೂ ಅದು ಕಷ್ಟದದಾರಿ ಎಂದು ಅರಿತಿದ್ದೆ ಆ ದಾರಿಯಲ್ಲಿ ನಡೆವಾಗ ನೀನು ಜೊತೆ ಇರಬಹುದೆಂದು ನಂಬಿದ್ದೆ. ಉಳಿದವರೆಲ್ಲರೂ ದೂರ ಸರಿದಾಗಲೂ ನೀನಾದರೂ ನನ್ನ ಜೊತೆ ಇರಬಹುದು ಎಂದು ನಂಬಿದ್ದೆ.

ಊಹೂ— ನಾನು ನಂಬಿದವರಾರೂ ಉಳಿಯಲಿಲ್ಲ.

ಎಲ್ಲರಿಗೂ ಸಿಟ್ಟು–ಅವರ ದಾರಿ ನಾನು ತುಳಿಯಲಿಲ್ಲವೆಂದು ಎಲ್ಲರಿಗೂ ಸಿಟ್ಟು—

ತಂದೆಗೆ ಕ್ರೋಧ, ಶ್ರೀಧರನಿಗೆ ತಾತ್ಸಾರ, ನಿನಗೆ ಕನಿಕರ—

ಆದರೆ ನನಗೆ ಅದಾವುದರ ಪರಿವೆಯೂ ಇಲ್ಲ, ಭಯವೂ ಇಲ್ಲ.

ಶ್ರೀಧರ ನಿನ್ನ ಮಾತು ನಿಜ. ಇದು ಕೇದಿಗೆಯ ವನ. ನಾನು ಹೂವೆಂದು ಭ್ರಮಿಸಿದುದೆಲ್ಲವೂ ಸರ್ಪವಾದವು. ನನ್ನ ಆದರ್ಶವೂ ಸರ್ಪವೇ ಆದೀತೇ ?

ಆಗಲಿ – ಆ ಸರ್ಪವನ್ನೇ ಆಡಿಸುವ ಬಲಗಳಿಸುತ್ತೇನೆ ಶ್ರೀಧರ— ನೋಡುವಿಯಂತೆ ನಾನು ಗೆಲ್ಲುತ್ತೇನೆ, ಕಾತ್ಯಾಯನಿ — ನೀನೂ ನೋಡುವಿಯಂತೆ—

ನಿನ್ನ ಬಳಿ ನಾನು ಬರುತ್ತೇನೆ—ಸೋತು ಅಲ್ಲ, ಗೆದ್ದು.

ಗುಂಪಿನೊಂದಿಗಲ್ಲ, ಒಂಟಿಯಾಗಿ ಗೆಲ್ಲುತ್ತೇನೆ. ಈ ಜೂಜಿಗೆ ನನ್ನ ಬಾಳೇ ಪಣ.

ಗೆಲ್ಲುತ್ತೇನೆ – ಒಂಟಿಯಾಗಿ.

ಒಂಟಿ–ಏಕಾಕಿ !—

ಚಿಂತಿಸಿ ಚಿಂತಿಸಿ ಮಿದುಳು ದಣಿದಿತ್ತು. ಒಂಟಿಯಾಗಿ ಕುಳಿತಿರಲಾರದೆ, ಒಂಟಿಯಾಗಿ ಚಿಂತಿಸಲಾರದೆ, ಹೊರಗೆ ಹೋಗಿ ಒಂದು ಪ್ಯಾಕೆಟ್ ಸಿಗರೆಟ್ ತಂದು ಕುಳಿತೆ.

ನನ್ನ ರೂಂ ಮೆಟ್ ಸದಾಶಿವಪ್ಪ ಹೇಳುತ್ತಿದ್ದ – ಸಿಗರೆಟ್ ಈಸ್ ದಿ ಲೋನ್ಲಿ ಮ್ಯಾನ್ಸ್ ಕಂಪ್ಯಾನಿಯನ್ (ಸಿಗರೆಟ್ ಒಂಟಿ ಜೀವನದ ಸಹಚಾರಿ).

ಸಿಗರೆಟ್ ತಂದು ಸೇದಿದೆ.

ಶ್ರೀಧರನ ಆರು ಇಂಚು ಉದ್ದದ ದಂತದ ಹೋಲ್ಡರಿನ ತುದಿಯಲ್ಲಿ ಹೊಗೆಯಾಡಿಸುವ ಸಿಗರೆಟ್—

ಅದೂ ಇಂಥ ಹೊತ್ತಿನಲ್ಲೇ ಅವನ ತುಟಿಯನ್ನೇರಿತೇ ?

ಪ್ರಶ್ನೆ – ಸಮಸ್ಯೆ ; ಸಮಸ್ಯೆ – ಪ್ರಶ್ನೆ ; ಪ್ರಶ್ನೆ ಸಮಸ್ಯೆ.

ತಂದೆ – ಶ್ರೀಧರ – ಕಾತ್ಯಾಯನಿ – ಎಲ್ಲರೂ ಸಮಸ್ಯೆ, ಎಲ್ಲರೂ ಪ್ರಶ್ನೆ, ಎಲ್ಲರೂ ನನ್ನ ಆದರ್ಶಕ್ಕೆ ಸವಾಲು....

ನನ್ನ ಆದರ್ಶ.

ಆ ನೂರು ಪ್ರಶ್ನೆ, ಸಮಸ್ಯೆಗಳ ಕತ್ತಲಿನಲ್ಲಿ ಧ್ರುವತಾರೆಯಂತೆ ಮಿನುಗಿತು ನನ್ನ ಆದರ್ಶ.

ಅದೊಂದನ್ನೇ ನೆನಪಿನಲ್ಲಿಟ್ಟು, ಉಳಿದುದೆಲ್ಲವನ್ನೂ ಮರೆಯಲು ಸಿಗರೆಟ್ ಹಚ್ಚಿ, ಮನಸ್ಸಿಗೆ ಬೇರೆ ಕೆಲಸ ಕೊಡಲು ಹತ್ತಿರವಿದ್ದ ಕಪಾಟಿನಿಂದ ಗ್ರೇಯ 'ಅನಾಟಮಿ'ಯನ್ನೆಳೆದುಕೊಂಡೆ.

ಅನಾಟಮಿ – ಬೈಯೊ ಕೆಮಿಸ್ಟ್ರಿ – ಹಿಸ್ಟಾಲಜಿ.

ಫಿಸಿಯಾಲಜಿ—ಪ್ಯಾಥಾಲಜಿ—ವೆನಿರಿಯಾಲಜಿ—ಗೈನೆಕಾಲಜಿ.

ಅವು ಒಂದೊಂದೂ ಯಾವುದೋ ನಿರ್ಜೀವ ಶಾಸ್ತ್ರಗಳಂತೆ ತೋರದೆ, ಲೋಕವನ್ನು ಕಬಳಿಸಲು ಬರುತ್ತಿರುವ ಕತ್ತಲುವೇಗದ ಕೋಟಿ ಜಾಡ್ಯಗಳಿಂದ ರಕ್ಷಿಸುವ ಪ್ರಬಲ ಅಸ್ತ್ರಗಳಂತೆ ತೋರಿದವು.

ಕಾತ್ಯಾಯನಿ, ನಿನ್ನ ವಾದ—ವಿವಾದ ಕೊಲ್ಲುತ್ತದೆ.

ನನ್ನ ಆದರ್ಶ—ಬದುಕಿಸುತ್ತದೆ.

ನೀನು ಹೊಸ ಜಗತ್ತಿಗಾಗಿ ಹೋರಾಡು—ನಾನು ಹೊಸ ಬಾಳನ್ನು ಸೃಷ್ಟಿಸುತ್ತೇನೆ.

ಕತ್ತಲು ಕವಿದ ಮುಗಿಲಿನಲ್ಲಿ ಪ್ರಕಾಶವಾಗಿ ಹೊಳೆಯುತ್ತಿದ್ದ ನಕ್ಷತ್ರ ದೆಡೆಗೆ ಹರಿದಿತ್ತು ನನ್ನ ಬಾಳಿನ ದಾರಿ—ನಾನೊಬ್ಬನೇ ನಡೆದ ಒಂಟಿ ದಾರಿ.

ಕೋಣೆಯು ತುಂಬಾ ಸಿಗರೆಟ್‌ನ ಹೊಗೆ ಕವಿದಿತ್ತು. ಹೊರಗೆ ಕತ್ತಲಾವರಿಸಿತ್ತು. ಜಗತ್ತು ಮಲಗಿತ್ತು.

ನಾನು ಎಚ್ಚರವಾಗಿದ್ದೆ. ನನ್ನ ಬಾಳಮಾರ್ಗ ಕಣ್ಣೆದಿರು ನಿಚ್ಚಳವಾಗಿ ತೆರೆದಿತ್ತು.

ಕೇದಿಗೆಯ ವನದಾಚೆ ಒಂಟಿ ತಾರೆ ಉಜ್ವಲವಾಗಿ ಹೊಳೆಯುತ್ತಿತ್ತು.



# ಅಚ್ಚಿನಲ್ಲಿ

ತ. ರಾ. ಸು. ರವರ

## ಕಣ್ಣು ತೆರೆಯಿತು

(ಕೇದಿಗೆ ವನದ ಎರಡನೆ ಭಾಗ)



ಇಂದಿರಾತನಯರ

## ಪೂಜಾತಂತ್ರ

(ಶಕ್ತಿಪೂಜೆ, ಸೇಡಿನ ಕಿಡಿಯ ಮುಂದಿನ ಭಾಗ)



ಇಂದಿರಾತನಯರ

## ನಕ್ಷತ್ರಗಾನ

(ಕಾಂಚನಗೀತದ ಎರಡನೆ ಭಾಗ)



ತ. ರಾ. ಸು. ರವರ

ಐವತ್ತನೆಯ ಕೃತಿಯಾಗಿ

## ರಾಜೇಶ್ವರಿ

(ಮೊದಲನೋಟದ, ಗೃಹಪ್ರವೇಶದ ಮುಂದಿನ ಭಾಗ)

ದರ್ಶನ ಪ್ರಕಾಶನ : : ತಾರಾನಿವಾಸ, ತಿಪಟೂರು